ಮನೋಹರ ಗ್ರಂಥಮಾಲೆಯ ೩೪–೩೮ನೆಯ ಕುಸುಮ

4 3

# ಸಮುದ್ರದಾಚೆಯಿಂದ

(ಪತ್ರ–ದಿನಚರಿಗಳ ಸಚಿತ್ರ ಸಂಗ್ರಹ)

ಬರೆದವರು :

**ವಿ. ಕೃ. ಗೋಕಾಕ** ಎಂ. ಎ.



ಫೆಬ್ರುವರಿ ೧೯೫೮ — ಬೆಲೆ : ೩–೦–೦

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.
,, ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ
,, ವಿ. ಕೃ. ಗೋಕಾಕ, ಎಂ. ಎ. ( ಇಂಗ್ಲಂಡದಲ್ಲಿ)

ಮುದ್ರಕರು :
ಶೇಷಗಿರಿರಾವ ಗೋವಿಂದರಾವ
ಕುಲಕರ್ಣಿ
ಸಾಧನ ಪ್ರೆಸ್, ಧಾರವಾಡ

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಸಂಪಾದಕರು :

ಜಿ. ಬಿ. ಜೋಶಿ

# ನಮ್ಮ ಮಾತು

ಪತ್ರ-ದಿನಚರಿಗಳ ಸಾಹಿತ್ಯವು ಕನ್ನಡದಲ್ಲಿ ತೀರ ಕಡಿಮೆ; ಪುಸ್ತಕ ರೂಪದಲ್ಲಿಯಂತೂ ಈವರೆಗೆ ಇಲ್ಲವೇ ಇಲ್ಲ. ಕನ್ನಡಕ್ಕೆ ಈ ಹೊಸ ರೀತಿಯ ಪರಿಚಯವಾಗಲೆಂದು 'ಸಮುದ್ರದಾಚೆಯಿಂದ' ಎಂಬ ಈ ಗ್ರಂಥವನ್ನು ನಮ್ಮ ಗ್ರಂಥಮಾಲೆಯಿಂದ ಪ್ರಕಟಿಸಲು ಕೈಕೊಂಡಿದ್ದೇವೆ.

ಪ್ರೊ. ಗೋಕಾಕ ಅವರು ತಮ್ಮ ಹೆಚ್ಚಿನ ಅಭ್ಯಾಸದ ನಿಮಿತ್ತ ಇಂಗ್ಲಂಡಕ್ಕೆ ಹೋಗಿದ್ದು ಅಲ್ಲಿಂದ ತಮ್ಮ ಅನುಭವಗಳನ್ನೂ ವಿಚಾರ ಗಳನ್ನೂ ಪತ್ರ ಹಾಗು ದಿನಚರಿಯ ರೂಪದಲ್ಲಿ ಇಲ್ಲಿಯ ತಮ್ಮ ಇಷ್ಟ ವರ್ಗಕ್ಕೆ ತಿಳಿಸುತ್ತಿರುವರು. ಅವುಗಳಲ್ಲಿ ಕೆಲವನ್ನು ಆಯ್ದು–ಒಂದು ಕ್ರಮದಲ್ಲಿ ಪವಣಿಸಿ ಕನ್ನಡ ಜನಕ್ಕೆ ನೀಡುವ ಭಾಗ್ಯವು ನಮಗೆ ದೊರೆತಿದೆ. ಅವರು ಮಾಡಿದ ಪ್ರವಾಸ, ಇದ್ದ ಸ್ಥಳ ಇವುಗಳಲ್ಲಿಯ ಅನುಭವದ ಕಾಲಕ್ರಮವನ್ನು ಬಗೆದು ಈ ಸಂಗ್ರಹವನ್ನು ಮಾಡಲಾಗಿದೆ. ಆದರೆ ಪ್ರತಿಯೊಂದು ಭಾಗವು ಒಂದೇ ಒಂದು ಸಂಗತಿಯ ಇಲ್ಲವೆ ಅನುಭವದ ಸ್ವಯಂಪೂರ್ಣ ಕೃತಿಯೆಂದು ತಿಳಿಯಕೂಡದು. ದಿನಚರಿಯ ಭಾಗಗಳಲ್ಲಿ ಅನೇಕ ಭಿನ್ನ ಅನುಭವಗಳು ಒಂದು ಕಡೆ ಸೇರಿವೆ.

ಪ್ರೊ. ಗೋಕಾಕರು ಜೀವನದ ಒಂದು ದರ್ಶನದಿಂದ, ಕನ್ನಡದ ಒಂದು ಅಕ್ಕರೆಯಿಂದ ಪ್ರೇರಿತರಾಗಿ ಜಗತ್ತನ್ನು ನೋಡಬಲ್ಲವರು; ರಸಾಯಮೇಶದ ಭಾಷೆಯಲ್ಲಿ ಅನುಭವವನ್ನು ಹೇಳತಕ್ಕವರು. ಅಂತೇ ಈ ಅನುಭವಮಾಲಿಕೆಯಲ್ಲಿ ಸಾಹಿತ್ಯಗುಣವು ನೆಲೆ ನಿಂತಿದೆ. ಲೋಕ ಜ್ಞಾನದ ಸತ್ಯವೂ ಸಾಹಿತ್ಯ–ಸೌಂದರ್ಯವೂ ಇದರಲ್ಲಿ ಬೆರೆತುಕೊಂಡಿವೆ. ಆಂಗ್ಲರ ಜೀವನದ ವಿವಿಧಾಂಗಗಳ ನಿರೀಕ್ಷಣೆಯಲ್ಲಿ ಒಂದು ನಿಜವಾದ ಸೂಕ್ಷ್ಮತೆಯು ಒಡಮೂಡಿದೆ. ಎಲ್ಲ ಭಾಗಗಳಲ್ಲಿಯೂ ಹೆಜ್ಜೆಹೆಜ್ಜೆಗೆ ಹೊಸ ಹೊಸ ಸಂಗತಿಗಳು ನುಗ್ಗಿ ಬಂದು ವಾಚಕನ ಕುತೂಹಲ ವನ್ನು ಸೆಳೆದೊಯ್ಯುವವು.

ಈ ತರಹದ ಹೊಸ ಬರೆವಣಿಗೆಯನ್ನು ಕನ್ನಡಕ್ಕೆ ನೀಡಿದ್ದಕ್ಕಾಗಿ ನಾವು ಪ್ರೊ. ಗೋಕಾಕರಿಗೆ ನಮ್ಮ ಆದರದ ಅಭಿನಂದನೆಗಳನ್ನು ಸಲ್ಲಿಸುತ್ತೇವೆ. ಇಲ್ಲಿಯ ಪತ್ರ-ದಿನಚರಿಗಳನ್ನು ಒಂದು ಕ್ರಮಕ್ಕೆ ತಂದು ಅವಶ್ಯವಿದ್ದಲ್ಲಿ ಭಾಷಾಂತರ ಮಾಡಿದ್ದಕ್ಕೆ ಪ್ರೊ. ಮುಗಳಿಯವರಿಗೂ ನಾವು ಕೃತಜ್ಞರಾಗಿದ್ದೇವೆ.

— ಸಂಪಾದಕ

ಹೇಳಿದಂತೆ ಕೋಣೆ–ಸ್ನಾನಗೃಹ–ಶೌಚಕೂಪಗಳಿವೆ. ಇಲ್ಲಿಯ ೬೧೨ನೆ ನಂಬರಿನ ಕೋಣೆಯೇ ನನ್ನದಾಗಿತ್ತು. ನನ್ನ ಜೊತೆಯಲ್ಲಿ ಮೂವರು ಸಂಗಡಿಗರಿದ್ದರು. 'ಪೋರ್ಟ್ ಹೋಲ್' (ಬೆಳಕುಕಿಂಡಿ) ಇದ್ದ ಕೋಣೆಗಾಗಿ ಪ್ರವಾಸಿಗಳು ಹಾತೊರೆಯುವದುಂಟು. ನಮ್ಮ ಕೋಣೆಗೆ ಅದು ಇತ್ತು. ಹಡಗದ ಒಂದು ಮಗ್ಗಲಿಗೆ ನಮ್ಮ ಕೋಣೆಯಿದ್ದುದರಿಂದ ಅದಕ್ಕೊಂದು ದುಂಡನ್ನ ಕಿಡಿಕೆಯಿತ್ತು. ಇದೇ 'ಪೋರ್ಟ್ ಹೋಲ್.' ಇದರಿಂದ ಸಮುದ್ರವು ನಮಗೆ ಕೋಣೆಯಲ್ಲಿದ್ದರೂ ಕಾಣುತ್ತಿತ್ತು. ಕೊಳವಿಯ ಹವೆಯಲ್ಲದೆ ಹೊಸ ಗಾಳಿ-ಬೆಳಕು ಒಳಗೆ ಬರುತ್ತಿದ್ದವು. ಉಳಿದ ಕೋಣೆಗಳಲ್ಲಿಯಂತೆ ಯಾವಾಗಲೂ ದೀಪ ಹಚ್ಚಬೇಕಾಗುತ್ತಿರಲಿಲ್ಲ. ಸಮುದ್ರವು ಸೌಮ್ಯವಿಲ್ಲದಾಗ ಈ 'ಪೋರ್ಟ್ ಹೋಲಿ'ನವರೆಗೆ ನುಗ್ಗಿ ನೀರು ಒಳಗೆ ಬರುವದುಂಟು. ಒಂದೆರಡು ಸಲ ಅನುಭವ ಬಂದ ಮೇಲೆ ಅದರ ಹತ್ತಿರ ಮಲಗುತ್ತಿದ್ದ ನನ್ನ ಸಂಗಡಿಗನು ಅದನ್ನು ಮುಚ್ಚಿ ಬಿಟ್ಟನು! ಚಿತ್ರಗಳಲ್ಲಿ ಈ ಕಿಡಿಕೆಯು ಇಲಿಯ ಗುದ್ದಿನಂತೆ ಸಣ್ಣದಾಗಿ ಕಂಡರೂ ಅದರೊಳಗಿಂದ ಅನಾಯಾಸವಾಗಿ ಹಾಯ್ದು ಸಾಧಾರಣವಾದ ಮೈಕಟ್ಟಿನ ವ್ಯಕ್ತಿಯು ಸಮುದ್ರದಲ್ಲಿ ಧುಮುಕಬಹುದು.

'ಜಿ' ಮಹಡಿಯ ತಲೆಯಮೇಲೆ 'ಎಫ್' ಮಹಡಿಯುಂಟು. ಇಲ್ಲಿ ಅಡಿಗೆ ಮನೆಯಿದೆ. 'ಇಲೆಕ್ಟ್ರಿಕ್' ಒಲೆಗಳ ಅಸಾಧ್ಯವಾದ ಸೆಕೆಯಲ್ಲಿ ಹಗಲೂ-ರಾತ್ರಿ ಇಲ್ಲಿ ಅಡಿಗೆಯವರು ಕೆಲಸ ಮಾಡುತ್ತಾರೆ. ಅವರ ಸ್ಥಿತಿಯು ದೇವರಿಗೇ ಗೊತ್ತು. ಒಬ್ಬನು ಬಟಾಟೆ ಹೆಚ್ಚುವನು. ಇನ್ನೊಬ್ಬನು ಮಾಂಸವನ್ನು ಕೊಚ್ಚುವನು. ೨–೩ ಸಾವಿರ ಜನಗೆರಿ ತಿಂಗಳಾನುಗಟ್ಟಲೆ ಬೇಕಾಗುವ ಶಾಕಾಹಾರ–ಮಾಂಸಾಹಾರವನ್ನೂ ಹಣ್ಣು–ಹಂಪಲಗಳನ್ನೂ ಹಡಗದ ಮೇಲೆ ಕಾಯ್ದಿಡುತ್ತಾರೆ. ನೂರಾರು ಮಂದಿ ಒಂದೇ ವೇಳೆಯಲ್ಲಿ ಊಟಕ್ಕೆ ಕೂಡಲು ಒಂದು ದೊಡ್ಡ ಭೋಜನಗೃಹವಿದೆ, ಅಡುಮನೆಯ ಮುಂದೆ. ಊಟವು ನಡೆದಾಗ ಇಲ್ಲಿ ಒಂದೇ ಒಂದು ಸಪ್ಪಳ, ಚಾಕು 'ಫೋರ್ಕಿ'ನದು!

'ಜಿ' ಮಹಡಿಯ ಮೇಲೆ 'ಎಫ್' ಮಹಡಿ! ಇಲ್ಲಿ ಒಂದು 'ಹೇರ್ ಕಟಿಂಗ್ ಸಲೂನು', ಒಂದು ಸಾಮಾನ್ಯ ಅಂಗಡಿ, ಓದಲಿಕ್ಕೆ ಲೈಬ್ರರಿಯೊಂದು, ಜಡ್ಡಾದವರಿಗೆ ವಿಶ್ರಾಂತಿಗೃಹ, ಹುಡುಗರಿಗೊಂದು ಆಟದ ಮನೆ, ಇಷ್ಟೆಲ್ಲ ಇವೆ. (ಈ ಲೈಬ್ರರಿಯ ಕೆಳಗೆ–'ಜಿ' ಮಹಡಿಯ ಮೇಲೆ–'ಕುಡಿ'ಯುವ ದಿವಾಣಖಾನೆಯೊಂದಿದೆ.) ಹಡಗದ ಮೇಲಿಂದ ಕಳಿಸಿದ ಪತ್ರಗಳನ್ನೆಲ್ಲ ಇಲ್ಲಿಯ ಲೈಬ್ರರಿಯಲ್ಲಿಯೇ ನಾನು ಬರೆದೆ.

'ಎಫ್' ಮಹಡಿಯ ಮೇಲೆ 'ಇ' ಮಹಡಿಯಿದೆ. ಇಲ್ಲಿ ಅಂಚೇ ಮನೆ, ಇನ್ನೊಂದು 'ಕುಡಿ'ಯುವ ದಿವಾಣಖಾನೆ, ಅನೇಕ ಆಟಗಳನ್ನು ಆಡಲು ಜಾಗ, ಇವೆಲ್ಲ ಕಂಡು ಬರುವವು! ಸ್ಯಾವ್ಹಿಗೇಟಿಂಗ್ ಬ್ರಿಜ್, ಬ್ಯಾಡ್ಮಿಂಟನ್, ಮೊದಲಾದ ಅನೇಕ ಆಟಗಳನ್ನು ಇಲ್ಲಿ ಆಡುವರು. 'ಸ್ಯಾವ್ಹಿಗೇಟಿಂಗ್ ಬ್ರಿಜ್ಜ'ನ್ನು ನಾನೂ ನನ್ನ ಗೆಳೆಯರೂ ಮೇಲಿಂದ ಮೇಲೆ ಆಡುತ್ತಿದ್ದೆವು.

'ಇ' ಮೇಲೆ 'ಡಿ' ಮಹಡಿ. ಇಲ್ಲಿ ಒಂದು ಕೃತ್ರಿಮ ಬಾವಿಯನ್ನು ಮಾಡಿದ್ದಾರೆ, ಈಸಲೆಂದು. ಅಲ್ಲದೆ 'ಡಿ' ಹಾಗು 'ಸಿ' ಮಹಡಿಗಳ ಮೇಲೆ ಮೊದಲನೆಯ ತರಗತಿಯ ಪ್ರಯಾಣಿಕರ ಕೋಣೆ, ದಿವಾಣಖಾನೆ ಮುಂತಾದವುಗಳಿವೆ. 'ಬಿ' ಮಹಡಿಯ ಮೇಲೆ ಅವರಿಗೆಂದು ಆಡಲು ಜಾಗವಿದೆ. 'ಎ' ಮಹಡಿಯ ಮೇಲೆ ಕಪ್ತಾನನ ಆಫೀಸು, ಅವನ ಹಾಗು ಉಳಿದ ಕೆಲಸಗಾರರ ಮನೆಗಳಿವೆ.

ಹೀಗಿದೆ ನೀರಿನ ಮೇಲೆ ತೇಲುವ ಈ ಪಟ್ಟಣದ ಸ್ವರೂಪ! ಗಾಳಿ ಗುಡಾರಗಳನ್ನು ಕಟ್ಟುವ ನಾವೆಗಳಿಗೂ ಈ ಹಡಗಕ್ಕೂ ಭೂಮಿ-ಯಾಕಾಶದಷ್ಟು ಅಂತರವಿದೆ. ಧ್ವಜಸ್ತಂಭವನ್ನು ಹಾಗು ಉಳಿದ ಅನೇಕ ಸ್ತಂಭಗಳನ್ನು ನಿಲ್ಲಿಸಲು ಕಟ್ಟಿದ ನೂರಾರು ಮಿಣಿಗಳಿವೆ. ಹೊಗೆಯನ್ನು ಬಿಡಲು ಒಂದು ದುಂಡನ್ನ ಮನೆಯಿದೆ. ಅದಕ್ಕೆ ಲಾಳಿಕೆ (funnel) ಎನ್ನುತ್ತಾರೆ! ಆಂಗ್ಲರ ಕುರುಹನಂಬುಗೆಯೊಂದು ಕಂಡು ಬಂತು. ಹಡಗಕ್ಕೆ ಮೂರು ಲಾಳಿಕೆಗಳಿರಬೇಕಂತೆ! ಕಾರಣ ಉಪಯೋಗವಿಲ್ಲದ ಇನ್ನೆರಡನ್ನು ಅದರ ಎಡಬಲಕ್ಕೆ ನಿಲ್ಲಿಸಿದ್ದಾರೆ. ಇವು ಎಂದೂ ಹೊಗೆ ಬಿಡುವದಿಲ್ಲ. ಆದರೆ ಬೇರೆ ಕೆಲವು ಉದ್ದೇಶಗಳನ್ನು ಪೂರೈಸುವವು.

೩

. . . . . .

ಲಂಡನ್

೩—೧೦—೩೬

ಈ ಹಡಗವೆಂದರೆ ಒಂದು ದೊಡ್ಡ ಸಂಸ್ಥಾನವಿದ್ದ ಹಾಗೆ. ಇಲ್ಲಿ ನೂರಾರು ಕೆಲಸಗಾರರಿರುತ್ತಾರೆ. ಬಾಯಿಯಲ್ಲಿ ತಂಬಾಕದ ‘ಪಾಯಿಪ್’ ಇಟ್ಟುಕೊಂಡು ತಿರುಗಾಡುವ ಕಪ್ತಾನ, ಹಡಗದ ಯಂತ್ರರಹಸ್ಯಗಳನ್ನು ಬ್ರಹ್ಮಸೂತ್ರಗಳನ್ನು ತಿಳಿಸಿ ಹೇಳುವವರಂತೆ ಗಾಂಭೀರ್ಯದಿಂದ ವಿವರಿಸುವ ಮರಿಕಪ್ತಾನರು, ಹಡಗದ ಮುಮ್ಮಗ್ಗಲಲ್ಲಿ ಬರಿ ಮೈಯಿಂದ ಬಿದ್ದುಕೊಂಡು, ಸಖಿಯರೊಡನೆ ಜಲಾಶಯದಲ್ಲಿ ಈಸಿ, ಇಲ್ಲವೆ ಚಿಲ್ಲರೆ ಕಾದಂಬರಿಗಳನ್ನು ಓದಿ ಕಾಲ ಕಳೆಯುವ ಆಂಗ್ಲ ನಾವಿಗರು, ಬೇಡಿದವರಿಗೆಲ್ಲ ಸೆರೆಯ ‘ಗ್ಲಾಸು’ಗಳನ್ನು ಕೊಡುತ್ತ ತಿರುಗಾಡುವ ಆಂಗ್ಲ ಚಾಕರರು, ‘ನೂರು’ ಗುಂಡಿಗಳಿದ್ದ ಒಂದು ಕೋಟನ್ನು ಹಾಕಿ ಪ್ರವಾಸಿಗಳ ಅನುಕೂಲತೆಯನ್ನು ನೋಡಿಕೊಳ್ಳುವ ಹುಡುಗರು, ಇವರೆಲ್ಲ ಈ ಲೋಕದಲ್ಲಿಯ ಕೆಲವು ವ್ಯಕ್ತಿಗಳು.

ಆದರೆ ಇಲ್ಲಿ ಮೈಮುರಿದು ದುಡಿಯುವವರೆಂದರೆ ನಮ್ಮ ದೇಶದ ಆಳುಮಕ್ಕಳು. ಮುಂಬಯಿಯ ಸುತ್ತುಮುತ್ತಲಿನ ಪ್ರದೇಶದಿಂದ ಬಂದಿದ್ದ ಮುಸಲ್ಮಾನರೂ ಹಾಗು ಉಳಿದ ಜಾತಿಯವರೂ ಇಲ್ಲಿಯ ಯಂತ್ರಶಾಲೆಯಲ್ಲಿ ಪಶುಗಳಾಗಿ ದುಡಿಯುತ್ತಾರೆ, ಮಹಡಿಗಳ ನೆಲವನ್ನು ಹೊಳೆಯುವವರೆಗೆ ತಿಕ್ಕುತ್ತಾರೆ, ಒದೆಸಿಕೊಳ್ಳುತ್ತಾರೆ. ಅವರು ಉಣ್ಣುವದೂ ಪಶುಗಳಂತೆ, ಒಂದು ದೊಡ್ಡ ಪರಾತದಲ್ಲಿ ನಟ್ಟನಡುವೆ ಹಳಸಿದ ಪಲ್ಲೆಕಾಯಿಯಿರುತ್ತದೆ. ಅದರ ಸುತ್ತಲು ತಂಗಳನ್ನು ಒಟ್ಟಿರುತ್ತಾರೆ. ಈ ಪರಾತವನ್ನು ಸುತ್ತಿ ಕೂತುಕೊಂಡು ತಮ್ಮೆದುರಿಗಿನ ಅನ್ನವನ್ನು ನಡುವಿನ ಪಲ್ಯೆಗೆ ನೈವೇದ್ಯ ತೋರಿಸಿ ಇವರು ಊಟ ಮಾಡಬೇಕು! ಈ ಜನರು ಮಲಗುವದೆಲ್ಲಿಯೋ ನಾನು ನೋಡಲಿಲ್ಲ. ಇವರ ವೇಷವೂ ವಿಚಿತ್ರವಾಗಿದೆ. ಚಿತ್ರವಿಚಿತ್ರವಾದ ಪೋಷಾಕನ್ನು ಇವರಿಗೆ

ಹಾಕಲು ಕೊಟ್ಟು ತಮ್ಮ ವೈಭವವನ್ನು ಆಂಗ್ಲರು ತೋರ್ಪಡಿಸುತ್ತಾರೆ.

ಗೋವಾದ ಕಡೆಯಿಂದ ಬಂದ ಭಾರತೀಯ ಕ್ರಿಶ್ಚನ್ ಜನರು ಇದಕ್ಕಿಂತ ಒಂದು ತರಗತಿ ಮೇಲೆ. ಅವರಲ್ಲಿ ಕೆಲವರು ಅಡಿಗೆಯವರಾಗು ತ್ತಾರೆ. ಉಳಿದವರೆಲ್ಲ 'stewards' (ಸ್ಟ್ಯುಅರ್ಡ್ಸ) ಎಂದರೆ ಬಡಿಸು ವವರು. ನಾಲ್ಕೈದು ಮಂದಿಯ ಮೇಜಿಗೆ ಒಬ್ಬ ಬಡಿಸುವವನಿರು ತ್ತಾನೆ. ಹೀಗೆ ಭೋಜನಗೃಹದಲ್ಲಿ ನೂರಾರು ಜನರಿರುವದುಂಟು. ಅವರೆಲ್ಲರದೂ ಒಂದೇ ಪೋಷಾಕು. 'ಸಯ್ಯದ್' ಬಂದರವನ್ನು ದಾಟಿ ತಂಪು ಹವೆಯನ್ನು ಹಡಗವು ಪ್ರವೇಶಿಸಿದಾಗ ಒಂದು ದಿವಸ ಮುಂಜಾನೆ ಇವರೆಲ್ಲ ಉತ್ತಮ ಕರಿಯ 'ಸೂಟಿ'ನಲ್ಲಿ ಬಂದರು! ಅನೇಕ ಪ್ರವಾಸಿ ಗಳ ಅರಿವೆಗಿಂತ ಇವರದೇ ಝೋಕಾಗಿತ್ತು. ಪಿ. ಎಂಡ್. ಓ. ಕಂಪ ನಿಯು ತನ್ನ ವೈಭವವನ್ನು ವ್ಯಕ್ತಪಡಿಸುವ ಅನೇಕ ರೀತಿಗಳಲ್ಲಿ ಇದೊಂದಾಗಿದೆ.

ಈ ಎಲ್ಲ ಬಡಿಸುವವರ ಮೇಲೆ ಒಬ್ಬ 'head-steward' (ಹೆಡ್ ಸ್ಟ್ಯುಅರ್ಡ) ಎಂದರೆ ಭೋಜನಗೃಹ ಶಿಖಾಮಣಿಯಿರುತ್ತಾನೆ. ಅವನು ಆಂಗ್ಲನೆಂದು ಬೇರೆ ಹೇಳಬೇಕಾಗಿಲ್ಲ. ಉಳಿದವರ ಕೋಟಿಗೆ ಮೂರು ಗುಂಡಿಗಳಿದ್ದರೆ ಇವನದಕ್ಕೆ ನಾಲ್ಕಿರುತ್ತವೆ. ಎಲ್ಲ ಸ್ಟ್ಯುಅರ್ಡ ಜನರ ತಲೆಯ ಮೇಲೆ ಮೆಣಸರೆಯುತ್ತ, ಊಟ ಮಾಡುವ ಭಾರತೀಯ ಪ್ರವಾಸಿಗಳೊಡನೆ ಗುರಗುಟ್ಟಿ ಮಾತನಾಡುತ್ತ, ಆಂಗ್ಲ ಸ್ತ್ರೀಯರೊಡನೆ ಮಧುರವಾಗಿ ಹರಟೆ ಕೊಚ್ಚುತ್ತ ಮೆರೆಯುವ ಭೂಪನೀತ. ಊಟದ ಮನೆಯ ನಕಾಶವೆಲ್ಲ ಇವನ ಹತ್ತಿರವಿರುತ್ತದೆ.

ಗೋವಾದ ಜನರಿಗೆ ಇನ್ನೂ ಒಂದು ಕೆಲಸವಿದೆ ಈ ಹಡಗದ ಮೇಲೆ. ೧೫–೨೦ ಕೋಣೆಗಳಿಗೆ ಒಬ್ಬ ಸ್ಟ್ಯುಅರ್ಡ (ಚಾಕರ)ನಿರುತ್ತಾನೆ: ಆ ಕೋಣೆಯ ಕಸ ಹೊಡೆಯುವದು, ಮುಂಜಾನೆ ಚಹ ತಂದುಕೊಡು ವದು, ಇವೇ ಮೊದಲಾದ ಕೆಲಸಗಳನ್ನು ಇವನು ಮಾಡುವನು. ನಮ್ಮ ಚಾಕರನ ಹೆಸರು 'ಕಾರ್ಡೋಜ್' ಎಂದಿತ್ತು. ಅವನಿಗೆ ಹರಟೆ ಕೊಚ್ಚು ವದು ಬೇಕಾಗಿದ್ದರಿಂದ ಆಗಾಗ ಬಂದು ನಮ್ಮೊಡನೆ ಮಾತು ಬೆಳೆಸು

ತ್ತಿದ್ದ. ತನ್ನ ಮಕ್ಕಳನ್ನು ಇವನು ಬೇರೆ ಉದ್ಯೋಗದಲ್ಲಿ ತೊಡಗಿಸಿದ್ದ. ಹಡಗವೂ ಸೆರೆಮನೆಯೂ ಒಂದೇ ಎಂದು ಇವನ ಮತ. ಒಬ್ಬ ಸ್ಟ್ಯುಅರ್ಡ್ಡನಿಗೆ ಇಲ್ಲಿ ತಿಂಗಳಿಗೆ ೩೦-೩೫ ರೂಪಾಯಿಯಂತೆ ಪಗಾರ. ಅವನು ಕೆಲಸದಲ್ಲಿರುವದು ಆರುತಿಂಗಳವರೆಗೆ. ಆಸ್ಟ್ರೇಲಿಯದಿಂದ ವಿಲಾಯತಿಯ ವರೆಗೆ ಅವನು ಹಡಗದ ಮೇಲಿರಬೇಕು. ಮುಂಜಾನೆ ನಾಲ್ಕು ಗಂಟೆಯಿಂದ ರಾತ್ರಿ ಹನ್ನೊಂದರವರೆಗೆ ಒಂದೇ ಸವನೆ ದುಡಿಯಬೇಕು. ನಡುವೆ ಊಟಕ್ಕೆ ಮಾತ್ರ ಪುರಸತ್ತು. ವಾಳಿಯ ಪ್ರಕಾರ ಇನ್ನೂ ಹೆಚ್ಚು ಕೆಲಸ ಬರಬಹುದು. ಇಷ್ಟು ಶ್ರಮವನ್ನು ತಾಳುವದು ಸಾಧ್ಯ ವಿಲ್ಲದೆ ಪ್ರತಿ ಮಧ್ಯಾಹ್ನ ಎರಡು ಗ್ಲಾಸು ಸೆರೆ ಕುಡಿಯಬೇಕಾಗುವ ದೆಂದು 'ಕಾಡ್ರೋಜ್' ಹೇಳಿದ. ಸೆರೆಯನ್ನು ಕಂಪನಿಯು ಕೊಡುವ ದಿಲ್ಲ. ತನ್ನ ಪಗಾರದಲ್ಲಿ ಅರ್ಧದಷ್ಟು ಖರ್ಚು ಮಾಡಿ ಅವನೇ ಕೊಂಡು ಕೊಳ್ಳಬೇಕು. ಆರು ತಿಂಗಳಾದ ಮೇಲೆ ತನ್ನ ಹೆಂಡಿರುಮಕ್ಕಳ ಮೋರೆ ನೋಡಲೆಂದು ಕಂಪನಿಯು ಅವನಿಗೆ ಮುಂಬಯಿಗೆ ತಂದು ಮುಟ್ಟಿಸು ವದು. ಆದರೆ ಪಗಾರ ಕೊಡುವದಿಲ್ಲ! ಪ್ರವಾಸಿಗಳಿಂದ ಸಂಪಾದಿಸಿದ 'ಖುಷಿ'ಯ (tips) ಮೇಲೆ ಅವನ ಉಪಜೀವನವಾಗಬೇಕು ಈ ಕಾಲಾವಧಿಯಲ್ಲಿ.

'ಹಾಗಾದರೆ ಈ ಕೆಲಸವನ್ನು ಬಿಟ್ಟು ಹಿಂದುಸ್ಥಾನದಲ್ಲೇಕೆ ದುಡಿಯುವದಿಲ್ಲ?' ಎಂದು ಕೇಳಿದೆ.

'ಅಲ್ಲಿ ಬಿ. ಎ. ಆದವರಿಗೆ ಹೊಟ್ಟೆತುಂಬ ಕೂಳಿಲ್ಲ. ನನ್ನ ಗತಿಯೇನು?' ಎಂದ ಕಾಡ್ರೋಜ್! ಅವನ ಕಣ್ಣಲ್ಲಿ ನಗೆಯಲ್ಲಿ ತುಂಟ ತನವು ಉಕ್ಕುತ್ತಿತ್ತು.

'ನೀವು ಪರೀಕ್ಷೆ ಪಾಸಾಗಿ ತಿರುಗಿ ಬರುವಾಗ ಏನು ಮಾಡು ವಿರಿ?' ಎಂದು ಕಾಡ್ರೋಜ್ ಕೇಳಿದ.

'ಏನು ಮಾಡಬೇಕು?' ಎಂದು ನಾನು ಉತ್ತರ ಕೊಟ್ಟೆ.

'ಬಿಳಿಯ ಹುಡಿಗೆಯನ್ನು ಸಂಗಡ ತರುವಿರೇನು ಮತ್ತೆ?' ಎಂದು ನಕ್ಕ.

" ಅದೇಕೆ ? ಹಿಂದಕ್ಕೆ ಈ ಕೋಣೆಯಲ್ಲಿ ಅಂಥವರಾರಾದರೂ ಬಂದಿದ್ದರೇನು ? " ಎಂದು ನಾನು ಪ್ರಶ್ನೆ ಮಾಡಿದೆ.

" ಪ್ರತಿಯೊಂದು ಸಲ ಒಬ್ಬಿಬ್ಬರು ಇದ್ದೇ ಇರುತ್ತಾರೆ " ಎಂದನು ಕಾರ್ಡೋಜ್. ಹೀಗೆಂದು ಒಬ್ಬ ಬಂಗಾಲಿ ಗೃಹಸ್ಥನ ಕರುಣಾಜನಕ ಕಥೆಯನ್ನು ಹೇಳಿದನು. ನಮ್ಮ ಜನರ ಸ್ಥಿತಿಯು ಹೀಗೇಕೆಂದು ನನ್ನೆದೆಯಲ್ಲಿ ಕಳವಳವಾಯಿತು.

ಹಡಗದ ಮೇಲೆ ವಿಧವಿಧವಾದ ಜೀವನವಿರುತ್ತದೆ. ಮಧ್ಯಾಹ್ನದಲ್ಲಿ ಬ್ಯಾಂಡಿರುತ್ತದೆ, ಸಂಗೀತವಿರುತ್ತದೆ. ಬೇರೆ ಬೇರೆ ಆಟ-ಪಂದ್ಯಾಟಗಳಾಗುತ್ತವೆ. ೨–೩ ದಿನಕ್ಕೊಮ್ಮೆ ಊಟಕ್ಕೆ ಕೂಡುವ ಹಾಲಿನಲ್ಲಿ ಸಿನೇಮಾ ತೋರಿಸುತ್ತಾರೆ ! ಆದಿತ್ಯವಾರಕ್ಕೊಮ್ಮೆ ಮೊದಲನೆಯ ತರಗತಿಯ ಮಹಡಿಯ ಮೇಲೆ ಕ್ರಿಶ್ಚನ್ನರಿಗೆಂದು ದೇವಪೂಜೆಯಾಗುವದು. ಅಲ್ಲದೆ ಮುದ್ರಣಶಾಲೆಯೊಂದಿದೆ. ಊಟದ ವಿವರಗಳನ್ನೆಲ್ಲ ದಿನಾಲು ಅಚ್ಚು ಹಾಕಿದ ಪತ್ರಿಕೆಯೊಂದರಲ್ಲಿ ಕೊಡುತ್ತಾರೆ. ಮುಂಜಾನೆ ಚಹ-ಹಣ್ಣು, ಎಂಟು ಗಂಟೆಗೆ ಫಲಾಹಾರ (ಅಂದರೆ ಊಟ), ಹನ್ನೆರಡುವರೆ ಗಂಟೆಗೆ ಊಟ, ನಾಲ್ಕು ಗಂಟೆಗೆ ಚಹ, ಏಳುವರೆ ಗಂಟೆಗೆ ರಾತ್ರಿಯೂಟ–ಊಟವೇ ಹಡಗದ ಮೇಲಿನ ಕಾರ್ಯಕ್ರಮ ! ಭೋಜನ ಪತ್ರಿಕೆಯಲ್ಲಿ ಸಿದ್ಧವಿದ್ದ ಸಾಮಾನುಗಳ ಹೆಸರುಗಳನ್ನು ಬರೆದಿರುತ್ತಾರೆ. ಪ್ರತಿದಿನವೂ ಈ ಲಿಸ್ಟು ಬದಲಾಗುವದು. ಅವುಗಳಲ್ಲಿ ಬೇಕಾದುದನ್ನು ಆರಿಸಿಕೊಂಡು ತಿನ್ನಬಹುದು. ಇಲ್ಲಿಯ ಊಟದ ವೈಭವವನ್ನು ನೋಡಿ ನನಗೆ ಲಕ್ಷ್ಮೀಶ-ಕುಮಾರವ್ಯಾಸರು ಮಾಡಿದ ವರ್ಣನೆಗಳ ನೆನಪಾಗುತ್ತದೆ. ನಾಡಿನಲ್ಲಿ ಸಂಪತ್ತಿದ್ದಾಗ ಊಟವೂ ಒಂದು ಕಲೆಯಾಗುವದು; ಇಲ್ಲದಾಗ ನೆಲೆಯಿಲ್ಲದ ಗಂಡಾಂತರವಾಗುವದು.

ಇನ್ನು ಮುಂದಿನ ಪತ್ರದಲ್ಲಿ ಹಡಗದ ಮೇಲೆ ನೆರೆದ ಜಾತ್ರೆಯ ವಿಷಯವನ್ನು ಬರೆಯುತ್ತೇನೆ.

———

## ೪

. . . . . .

ಆಕ್ಸಫರ್ಡ್

೮—೧೦—೩೬

ಇನ್ನು ಹಡಗದ ಮೇಲೆ ಭೆಟ್ಟಿಯಾದ ಅನೇಕ ಜನರ ಅಲ್ಪ ಪರಿಚಯುವನ್ನು ಕೊಡುವದು ಒಳಿತೆಂದು ಕಾಣುತ್ತದೆ. ಅದೊಂದು ಸಂಕ್ಷಿಪ್ತ ಜಗತ್ತು. ಎಲ್ಲ ತರಹದ ಸ್ವಭಾವಗಳು ಇಲ್ಲಿ ಗೋಚರವಾಗುವವು. ಎಲ್ಲ ವ್ಯಕ್ತಿವೈಶಿಷ್ಟ್ಯಗಳು ಇಲ್ಲಿ ಬಯಲಿಗೆ ಬರುವವು.

'ಧಾ—' ಎಂದು ಒಬ್ಬರಿದ್ದಾರೆ. ಇವರು ನನ್ನ 'ಕ್ಯಾಬಿನ್'ದಲ್ಲಿಯೇ ಇರುವರು. ೧೯೩೧ರಲ್ಲಿ ನನ್ನ ವಿದ್ಯಾರ್ಥಿಯಾಗಿದ್ದರು. ಈಗ 'ಬಾರ್' ಗೆಂದು ಹೊರಟಿದ್ದಾರೆ. ಏನಾದರೂ ಒಂದು ವಾಕ್ಯವನ್ನು ನುಡಿದು, "Is it not so?" (ಹಾಗಲ್ಲವೇ?) ಎಂದು ಕೇಳುವ ಚಟ ಬಹಳ ಇವರಿಗೆ. ಸಂಗಡ ಒಂದು 'Indian Year Book' (ಹಿಂದುಸ್ಥಾನದ ವಾರ್ಷಿಕ ಪುಸ್ತಕ) ವನ್ನು ತಂದಿದ್ದಾರೆ. ಯಾವಾಗಲೂ 'ಡೆಕ್ಕಿ'ನ ಮೇಲೆ ಇದನ್ನು ಇವರು ಕೈಯಲ್ಲಿ ಹಿಡಿದುಕೊಂಡು ತಿರುಗಾಡುವರು.

ಇದನ್ನೇ ಓದುತ್ತ ಕುಳಿತಂತೆ ತೋರಿಸುವರು. ಇಂಗ್ಲಂಡದಲ್ಲಿ ಯಾರಾ ದರೂ ಹಿಂದುಸ್ಥಾನದ ಬಗ್ಗೆ ಮಾಹಿತಿಯನ್ನು ಕೇಳಿದರೆ ಅವರಿಗೆ ಏನೆಂದು ಉತ್ತರ ಕೊಡಬೇಕು? ಅದಕ್ಕಾಗಿ ಇವರು Indian Year Book (ಹಿಂದುಸ್ಥಾನದ ವಾರ್ಷಿಕ ಪುಸ್ತಕ) ಒಂದೇ ಸಮನೆ ಓದುತ್ತಿರುವರು! ಯಾರೋ ಇವರಿಗೆ "ಸಮೀಚೀನವಾಗಿ ಊಟ ಮಾಡಿರಿ ಹಡಗದ ಮೇಲೆ. ಅಂದರೆ 'ಮುನ್ನೀರ ಬನ್ನ' (sea-sickness) ಸಮುದ್ರದ ರೋಗವು ನಿಮ್ಮನ್ನು ಬಾಧಿಸುವದಿಲ್ಲ" ಎಂದು ಹೇಳಿದ್ದರಂತೆ. ಹಡಗವು ಬಹಳವಾಗಿ ಕೆಳಗೆಮೇಲಾದ ಕೂಡಲೆ ವಾಂತಿಯ ಲಕ್ಷಣಗಳಾಗಲು, "Just now there is too much rolling" (ಈಗ ಸದ್ಯ ಬಹಳ ಉರುಳಾಟವಿದೆ.) ಎಂದು ಗುಣಗುಟ್ಟುತ್ತ ಇವರು ತಿಂದೇ ತಿನ್ನುತ್ತಿದ್ದರು. ಕೊನೆಗೆ ಅಪಚನವಾಗಿ ಮಲೇರಿಯ ಜ್ವರ ಬಂದು ಇವರು ಹಡಗದ ಮೇಲಿನ ಆಸ್ಪತ್ರಿಯಲ್ಲಿ ನಾಲ್ಕು ದಿವಸ ಬಳಲಬೇಕಾಯಿತು!

'ಚೌ—' ಎಂಬ ಇನ್ನೊಬ್ಬರು ನನ್ನ 'ಕ್ಯಾಬಿನ್'ದಲ್ಲಿ ಇದ್ದಾರೆ. ವ್ಹೆಟರಿನರಿ ಡಿಪಾರ್ಟಮೆಂಟಿನಲ್ಲಿ 'ಇಂಪೀರಿಯಲ್' ನೌಕರಿಗಳು ಹೊಸದಾಗಿ ಆಗಲಿವೆಯಂತೆ. ಕಾರಣ ಅವು ಅಮಲಿನಲ್ಲಿ ಬರುವದರೊಳಗಾಗಿ ಇವರು ವ್ಹೆಟರಿನರಿ ಪರೀಕ್ಷೆಯೊಂದನ್ನು ಪಾಸಾಗಬೇಕೆಂದು ಗ್ಲಾಸಗೋ ಪಟ್ಟಣಕ್ಕೆ ಹೊರಟಿದ್ದಾರೆ. ಶೀಘ್ರದಲ್ಲಿ ಇನ್ನೊಂದು ಮಹಾಯುದ್ಧವಾಗಬೇಕೆಂದು ಇವರ ಮತ. ಯಾಕೆಂದರೆ ಇಂಥ ಯುದ್ಧವಾದ ಪಕ್ಷದಲ್ಲಿ ಏನೂ ತೊಂದರೆಯಿಲ್ಲದೆ ಆ ನೌಕರಿಯು ಇವರಿಗೆ ದೊರೆಯುವದಂತೆ! ಒಟ್ಟಿನ ಮೇಲೆ ಇವರೊಬ್ಬ ಒಳ್ಳೆಯ ಪ್ರಾಣಿ. ಲಗ್ನವಾಗಿ ೩-೪ ತಿಂಗಳಲ್ಲಿಯೇ ಮನೆಯವರನ್ನು ಬಿಟ್ಟು ಹೊರಡುವ ಪ್ರಸಂಗ ಬಂದಿದೆ ಇವರಿಗೆ. ಅದಕ್ಕಾಗಿ ಮರಮರನೆ ಮರುಗುತ್ತಿದ್ದರು. 'ಕ್ಯಾಬಿನ್'ದ 'ಪೋರ್ಟ ಹೋಲ್'ನ ಮೇಲೆ ಬಹಳ ಪ್ರೀತಿ ಇವರಿಗೆ. ಯಾವಾಗಲೂ ತೆರೆದಿಡಲು ಹಾತೊರೆಯುತ್ತಿದ್ದರು!

ಯು. ಪಿ. ಪ್ರಾಂತದಿಂದ ಇವರಂತೆ ಇನ್ನೊಬ್ಬರು ಹೊರಟಿದ್ದಾರೆ. ಅವರು ವಿಜ್ಞಾನಶಾಸ್ತ್ರದಲ್ಲಿ ಪಿ. ಎಚ್. ಡಿ. ಡಿಗ್ರೀಗಾಗಿ ಮುನ್ನಡೆದಿರುವರು. ಹಡಗವನ್ನೇರಿದೊಡನೆ ಐದಾರು ದಿನ ಮುನ್ನೀರ ಬನ್ನವು

ಬಡಿದು ಮಲಗಿಬಿಟ್ಟಿದ್ದರು ಇವರು. ಕೇವಲ ಶಾಕಾಹಾರಿಗಳು ಬೇರೆ. ಎದುರಿಗಿಟ್ಟ 'ಕೇಕಿ' ಸಲ್ಲಿಯು ಒಣಗಿದ ದ್ರಾಕ್ಷಿಗಳ ಮೇಲೆ ಸಹ ಸಂಶಯ ಇವರಿಗೆ! ಪ್ರತಿಯೊಂದಕ್ಕೂ 'ಈ' ಹಚ್ಚಿ ಮಾತನಾಡುವ ರೂಢಿ. 'ಇಸ್ಕೂಲ್', 'ಸ್ಟೇಟ'ದ ಬದಲು 'ಇಸ್ಟೇಟ್'. 'I am going for an honourable degree' (ನಾನೊಂದು ಮಾನದ ಪದವಿಗಾಗಿ ಹೊರಟಿರುವೆ) ಎಂದು ಅಭಿಮಾನದಿಂದ ಇವರು ಹೇಳುತ್ತಿದ್ದರು.

ನಾಗಪುರದಿಂದ 'ಮು—' ಎಂಬವರಿದ್ದರು. ಹಡಗವನ್ನೇರಿದ ಮೇಲೆ ಇವರಿಗೆ ದಿಕ್ಕು ತಪ್ಪಿದಂತಾಗಿರಬೇಕು. 'ಲಾಯಬ್ರೇರಿಯನ್' ಅಭ್ಯಾಸಕ್ಕಾಗಿ ಇವರಿಗೆ 'ಸ್ಕಾಲರಶಿಪ್' ಸಿಕ್ಕಿದೆ. ಅದು ಸಿಕ್ಕ ಸುದ್ದಿಯು ಒಂದೊಡನೆ ಇವರ ಮನೆಯಲ್ಲಿ ಎಲ್ಲರೂ ಅತ್ತರಂತೆ. ಅವರ ಜೊತೆಯಲ್ಲಿ ಇವರೂ ಅತ್ತರು. "I have committed the greatest blunder in my life.(ನಾನು ನನ್ನ ಆಯುಷ್ಯದಲ್ಲಿ ಮಹದಪರಾಧವನ್ನು ಮಾಡಿದೆ) ನಾನು ಹೊರಡಬಾರದಾಗಿತ್ತು. ಶಕ್ಯವಿದ್ದರೆ ಈಗಲೆ ಹಡಗವನ್ನು ಹಿಂದುಸ್ತಾನದ ಕಡೆಗೆ ತಿರುಗಿಸಲು ಕಪ್ತಾನನಿಗೆ ಹೇಳಿಬಿಡುತ್ತಿದ್ದೆ. ವಾರ್ಷಿಕ ವಾಚನಾಲಯ ಪರಿಷತ್ತುಗಳಿಗೆ ಹೋದಾಗ ಕೂಡ ಪತ್ನಿಯನ್ನು ಕರೆದುಕೊಂಡು ಹೋಗುತ್ತಿದ್ದೆ. ಇದೇನು ಬಂತು?" ಎಂದು ಎದೆಯೊಡೆದುಕೊಂಡವರಂತೆ ಇವರು ಸುಮ್ಮನೆ ಕೂತು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಪ್ರವಾಸ ಮುಗಿದು ಲಂಡನ್ನಿಗೆ ಬಂದಾಗ ಮಾತ್ರ ಇವರ ವೇದನೆಯು ತುಸು ಕಡಿಮೆಯಾದಂತೆ ಕಂಡಿತು.

'ಕೇ—' ಎಂಬವರು ನಾಗಪುರದವರೇ. ಇವರು 'Statistical course' (ಸ್ಟ್ಯಾಟಿಸ್ಟಿಕಲ್ ಕೋರ್ಸ) ಗೆ ಹೊರಟವರು. ಎರಡು ಮೂರು ದಿವಸ ಧೋತರವನ್ನುಟ್ಟು ಹಡಗದ ಮೇಲೆಲ್ಲ ತಿರುಗಾಡಿದರು. ಆಂಗ್ಲ ವೇಷದ ಪದ್ಧತಿಯು ಇವರಿಗೆ ವಿಶೇಷವಾಗಿ ಗೊತ್ತಿರಲಿಲ್ಲ. ಮುಂಜಾನೆ ಎದ್ದು ಸ್ನಾನಕ್ಕೆ ಹೋಗುವಾಗ 'dressing gown (ಡ್ರೆಸಿಂಗ ಗಾವುನ) ಹಾಕಿ ತಿರುಗಾಡಬೇಕಾಗುತ್ತದೆ. ಗೊತ್ತಿಲ್ಲದೆ,

ಹೆಣ್ಣುಮಕ್ಕಳು ಹಾಕುವಂಥ ಚಿತ್ರವಿಚಿತ್ರ 'ಗಾವ್ನ'ನ್ನು ಇವರು ಕೊಂಡಿದ್ದರು! ಅದನ್ನು ಹಾಕಿಕೊಂಡು ತಮ್ಮ ಕೋಣೆಯಿಂದ ಇವರು ಹೊರಬಿದ್ದೊಡನೆ ಎಲ್ಲರೂ ಇವರನ್ನೇ ನಿಂತು ನಿಂತು ನೋಡಿದರು! ಆಂಗ್ಲ ಸ್ತ್ರೀಯರು ಗಾಬರಿಯಾದರು! ಬಹಳ ಹೊತ್ತಾಗಿ ತಾವು ಮಾಡಿದ ತಪ್ಪು 'ಕೀ' ಅವರಿಗೆ ಗೊತ್ತಾಯಿತು. ಮಾರ್ಸೇಲ್‌ದಿಂದ ಪ್ಯಾರಿಸ್‌ಕ್ಕೆ ಹೋಗುವಾಗ ರಾತ್ರಿ ಗಾಡಿಯಲ್ಲಿ ಮಂಗನ ಟೊಪ್ಪಿಗೆ ಯಂಥ 'Night cap' (ನಾಯಿಟ ಕ್ಯಾಪ) ಹಾಕಿಕೊಂಡು ಇವರು ಎಲ್ಲರ ನಗೆಗೀಡಾದರು!

ದಿಲ್ಲಿಯ ಆಯ್. ಸಿ. ಎಸ್. ಪಾಸಾದ 'ಖಾ—' ಎಂಬವರು ಟ್ರೇನಿಂಗಿಗಾಗಿ ಲಂಡನ್ನಿಗೆ ಹೊರಟಿದ್ದಾರೆ. ಇವರು ಆಂಗ್ಲರಂತೆ ಕಾಲಕ್ಕೆ ಸರಿಯಾಗಿ ಉಡುಪು ಧರಿಸುತ್ತಾರೆ. ಸರಕಾರವು ರೊಕ್ಕ ಕೊಡಲು ಸಿದ್ಧವಿದ್ದ ಮೇಲೆ ಬಿಡುವದೇಕೆಂದು ಇವರ ಮತ!

'ಎಕ್ಚುಅರಿ' ಪರೀಕ್ಷೆಗಾಗಿ ಇನ್ನೊಬ್ಬರು ಹೊರಟಿದ್ದಾರೆ. ಜಗಳ ತೆಗೆಯುವದರಲ್ಲಿ ಇವರನ್ನು ಸರಿಗಟ್ಟಿದವರೇ ಇಲ್ಲ. ಹಡಗದ ಮಧ್ಯಮ ಅಧಿಕಾರಿಗಳು ತುಸು ತಪ್ಪಿ ನಡೆದಕೂಡಲೆ "We will tell our friends not to travel by the P. & O. line. We will report to the Indian newspapers" (ನಾವು ನಮ್ಮ ಮಿತ್ರರಿಗೆ ಈ ಕಂಪನಿಯ ಹಡಗದಲ್ಲಿ ಹೋಗಬೇಡಿರೆಂದು ಹೇಳುತ್ತೇವೆ. ಹಿಂದುಸ್ಥಾನದ ವೃತ್ತಪತ್ರಗಳಿಗೆ ಸುದ್ದಿಕಳಿಸುತ್ತೇವೆ) ಎಂದು ಇವರು ಹೆದರಿಕೆ ಹಾಕುವರು. ಇವರ ರೀತಿಯು ತಪ್ಪಿದೆ ನಿಜ, ಆದರೆ ಇವರ ಧೈರ್ಯದಿಂದ ನಮ್ಮೆಲ್ಲರಿಗೆ ಈಗ ದಿನಾಲು ಚಪಾತಿ ದೊರೆಯಹತ್ತಿವೆ.

ಒಟ್ಟು ಸುಮಾರು ೧೬೦ ಭಾರತೀಯ ವಿದ್ಯಾರ್ಥಿಗಳು ಈ ಹಡಗದ ಮೇಲಿದ್ದಾರೆ. ಎಲ್ಲ ಮಾದರಿಗಳನ್ನು ಇಲ್ಲಿ ಕಾಣಬಹುದು. 'ಫಸ್ಟ್ ಕ್ಲಾಸಿ'ನಲ್ಲಿ ಒಬ್ಬ ಹಿಂದು ವಿದ್ಯಾರ್ಥಿಯಿದ್ದಾನೆ. ಟೂರಿಸ್ಟ ಕ್ಲಾಸಿನ ಕೋಣೆಯೊಂದನ್ನು ಪ್ರವೇಶಿಸಿದೊಡನೆ ಅವನಿಗೆ ಉಸಿರು ಸಿಕ್ಕಹಾಗಾಗುವದಂತೆ! ಒಬ್ಬ ಬಂಗಾಲಿ ವಿದ್ಯಾರ್ಥಿಯಿದ್ದಾನೆ. ಅವನು ಕಂಡವರನ್ನೆಲ್ಲ

ಮಾತನಾಡಿಸುತ್ತ ನಡೆದಿದ್ದಾನೆ. ಅದರ ತತ್ವವನ್ನು ಸಹ ಬಿಚ್ಚಿ ಹೇಳುತ್ತಾನೆ. "It is good to establish contacts, you know." (ಸಂಬಂಧ ಬೆಳೆಸುವದು ಒಳ್ಳೇದು ನೋಡಿರಿ)

'ಜಾ—' ಎಂಬ ಒಬ್ಬ ಗೃಹಸ್ಥನಿದ್ದಾನೆ. ಗುಜರಾಥಿ ಶ್ರೀಮಂತರ ಹೆಸರಿನಂತೆ ತೋರುವ ಹಾಗೆ ತನ್ನ ಹೆಸರನ್ನುಬದಲಿಸಿದ್ದಾನೆ. ಕಾಯಿದೆ ಕಲಿಯಲೆಂದು ಕೆಲವರಿಗೆ, ವ್ಯಾಪಾರಕ್ಕೆಂದು ಹಲವರಿಗೆ; ತಾನು ೧೦ ಸಲ ವಿಲಾಯತಿಗೆಹೋಗಿದ್ದೆನೆಂದು ಒಬ್ಬರಿಗೆ, ೧೪ ಸಲವೆಂದು ಇನ್ನೊಬ್ಬರಿಗೆ; ಹೀಗೆ ಹೇಳುತ್ತಾನೆ. ಇವನ ಕೈಯ್ಯಲ್ಲಿ ಯಾವಾಗಲೂ ಇರತಕ್ಕ ಸಾಮಾನು: ಒಂದು 'ಪಾಯಿಪ್', ತಂಬಾಕದ ಡಬ್ಬಿ, ಕಡ್ಡಿ ಪೆಟ್ಟಿಗೆ, ಹೆಸರಿಗೊಂದು ಪುಸ್ತಕ. ಆಂಗ್ಲರು ಭಾರತೀಯರನ್ನು ಹೀಯಾಳಿಸುವದನ್ನು ಕಂಡು ಸಿಟ್ಟಿನಿಂದ ಇವನು 'dancing' (ಕುಣಿತ) ಕಲಿತು ಅವರಿಗಿಂತ ಹೆಚ್ಚು ಚೆನ್ನಾಗಿ ಕುಣಿಯಬಲ್ಲನಂತೆ!

ಹುಚ್ಚು ಹಿಡಿದ ಆಂಗ್ಲ ತರುಣನೊಬ್ಬನಿದ್ದಾನೆ ಹಡಗದ ಮೇಲೆ. "Come on! Let us jump into the sea!" (ಬನ್ರಿ! ಸಮುದ್ರದಲ್ಲಿ ಹಾರೋಣ) ಎಂದು ಪ್ರತಿಕ್ಷಣ ಹಾರಿಕೊಳ್ಳಲು ಹೋಗುತ್ತಾನೆ. ಬೆದರಿದ ಚಿಗರಿಯಂತೆ ಎಲ್ಲೆಡೆಗೆ ನೋಡುತ್ತಾನೆ. ಇಬ್ಬರು-ಮೂವರು ಯಾವಾಗಲು ಇವನನ್ನು ಹಿಡಿದುಕೊಂಡು ತಿರುಗುತ್ತಾರೆ.

ಅಂತೂ ಈ ಹಡಗದ ಮೇಲೆ ಸಂಕ್ಷಿಪ್ತ ಜಗತ್ತಿದೆ. ಆಂಗ್ಲ ಸ್ತ್ರೀಯರನ್ನು ಅನುಸರಿಸಿ ಏನಾದರೂ ಹೆಣಿಕೆ ಹಾಕುತ್ತ ಕಾಲ ಕಳೆಯುವ ಹಿಂದು ವಿದ್ಯಾರ್ಥಿನಿಯರೂ ಇದ್ದಾರೆ. ಹೆಚ್ಚಿಗೆ ಬರೆಯುತ್ತ ಹೋದಲ್ಲಿ ಚಾಸರನ 'ಕ್ಯಾಂಟರ್ಬರಿ ಕಥಾಮಾಲೆ' ಯಾಗಬಹುದು ಈ ಪತ್ರ! ಇಂದು ಇಷ್ಟಕ್ಕೇ ವಿಶ್ರಮಿಸುತ್ತೇನೆ.

---

೫

. . . . . .

ಆಕ್ಸಫರ್ಡ್

೧೭—೧೦—೩೬

ಇನ್ನು ಹಡಗದ ಮೇಲೆ ನಾನಿದ್ದಾಗ ಸಂಭವಿಸಿದ ಕೆಲವು ವೃತ್ತಾಂತಗಳನ್ನು ವಿವರಿಸುತ್ತೇನೆ. ಅವೂ ಸಹ ಮನೋರಂಜನೆಯ ಸಾಧನೆಯಾಗಬಹುದು.

ಮುಂಬಯಿಯಲ್ಲಿ ಹಡಗ ಹತ್ತಿದಾಗ ಸಂಜೆಯ ನಾಲ್ಕು ಗಂಟೆಯಾದ ಮೇಲೆ ಚಹಕ್ಕೆಂದು ನಾವು ಡ್ರಾಯಿಂಗ್ ರೂಮಿಗೆ ನಡೆದೆವು. ಆಗ ಮೂರುವರೆಯಾಗಿದೆಯೆಂದು 'steward' (ಸ್ಟ್ಯುಅರ್ಡ್)ನು ಹೇಳಿದನು! ಇಷ್ಟೇ ಅಲ್ಲ! 'Your clock must be going back' ನಿಮ್ಮ ಗಡಿಯಾರವು ಹಿಂದೆ ಹೋಗುತ್ತಿರಬೇಕು ಎಂದು ಅವನ ಮತ! ಮುಂಬಯಿಯನ್ನು ಬಿಟ್ಟ ಮೇಲೆ ದಿವಸಕ್ಕೆ ಅರ್ಧತಾಸಿನಂತೆ ಗಡಿಯಾರವನ್ನು ಹಿಂತಿರುಗಿಸುತ್ತಾರೆ. ವಿಲಾಯತಿಯಲ್ಲಿ ಈಗ ಎರಡೂವರೆ ಗಂಟೆಯಾಗಿದೆ, ಮಧ್ಯಾಹ್ನ. ಹಿಂದುಸ್ತಾನದಲ್ಲಿ ಈಗ ಸಂಜೆಯ ಏಳುವರೆ ಗಂಟೆಯಾಗಿರಬೇಕು. ಭೂಗೋಲದಲ್ಲಿ ಇದನ್ನೆಲ್ಲ ನೀನು ಕಲಿತಿರಬಹುದಲ್ಲ!

ಹಡಗದ ಮೇಲಿನ ಆಂಗ್ಲ ಸ್ತ್ರೀಯರ ವ್ಯವಹಾರವು ನೋಡುವ ಹಾಗಿತ್ತು. ಇಷ್ಟು 'ಅಂತರರಾಷ್ಟ್ರೀಯ' ಜೀವನದ ಭಾವನೆಯು ಮತ್ತಾವ ದೇಶದಲ್ಲಿಯೂ ಬೆಳೆದಂತೆ ಕಾಣುವದಿಲ್ಲ. ಗಂಡಿನ ಬೆನ್ನು ಹತ್ತಿ ಉತ್ತರಧ್ರುವದವರೆಗೆ ಹೋಗಲು ಸಿದ್ಧರಿರುತ್ತಾರೆ. ಅವರೊಡನೆ ಈಸುತ್ತಾರೆ, ಹಗ್ಗ ಹಾರುತ್ತಾರೆ, ನಗೆಯಾಡುತ್ತಾರೆ, ಸಿಗರೇಟು ಸೇದುತ್ತಾರೆ-ಒಮ್ಮೊಮ್ಮೆ ಗಂಡಸರಂತೆ ವೇಷ-ಭೂಷಣಗಳನ್ನು ಸಹ ಧರಿಸುತ್ತಾರೆ! ಇದೆಲ್ಲ ನಾಗರಿಕತೆಯ ಫಲವೆಂದಲ್ಲ. 'ಸಾಮ್ರಾಜ್ಯ'ವು ಇದೊಂದು ಹೊಸ ಮಾದರಿಯನ್ನು ನಿರ್ಮಿಸಿದೆ.

ಪ್ರವಾಸದಲ್ಲಿ ಅನೇಕ ಹೊಸ ಪ್ರದೇಶಗಳನ್ನು ನೋಡಲು ನನಗೆ ದೊರೆಯಿತಷ್ಟೆ. ಮುಖ್ಯವಾದವುಗಳನ್ನು ವರ್ಣಿಸುತ್ತೇನೆ. ಏಡನ್ನಿನ ಕಥೆಯು ನನ್ನ ಕವನದಲ್ಲಿ ನಿನಗೆ ದೊರೆಯುವದು. ಅಲ್ಲಿ ನಾವು ನೋಡಿದ ವಿಶೇಷಗಳು ಇವು: ಏಡನ್ ಬಂದರದ ಮೇಲೆ ನಾವಿಳಿದಾಗ ಸುಮಾರು ಎರಡು ಗಂಟೆಯಾಗಿತ್ತು. ಮಟಮಟ ಮಧ್ಯಾಹ್ನ. ಉಸುಬಿನ ಬಯಲಲ್ಲಿ ರಣರಣ ಬಿಸಿಲು ಹೊಡೆಯುತ್ತಿತ್ತು. ಈ ವಿಷಯವನ್ನು ಒಂದು ಕವಿತೆಯಲ್ಲಿ ನಾನು ಕಾಣಿಸಿದ್ದೇನೆ. ಉಳಿದ ಭಾಗವನ್ನು ಇಲ್ಲಿ ಬರೆಯುತ್ತೇನೆ. ಮಹಾಯುದ್ಧದ ಕಾಲದಲ್ಲಿ ಇಲ್ಲಿ ಮರಣ ಹೊಂದಿದ ಸೈನಿಕರ ಸ್ಮಾರಕಶಿಲೆಯೊಂದನ್ನು ಬಂದರದ ಮಹಾದ್ವಾರದಲ್ಲಿ ಇರಿಸಿದ್ದಾರೆ. ಏಡನ್ನದ ಸಂರಕ್ಷಣೆಗಾಗಿ ಅವರು ಹೆಣಗಾಡಿದರು. ಬ್ರಿಟಿಶ್ ವ್ಯಾಪಾರಸ್ಥರು ಈ ಸೈನಿಕರ ಸ್ಮಾರಕಾರ್ಥವೆಂದು ಆ ಮಹಾದ್ವಾರವನ್ನು ಕಟ್ಟಿಸಿದ್ದಾರೆ. ೬೧೯ ಆಫಿಸರರ ಸ್ಮರಣಾರ್ಥವಾಗಿ ಬ್ರಿಟಿಶ್ ಸರಕಾರವು ಆ ಶಿಲಾಲಿಪಿಯನ್ನು ಇರಿಸಿದೆ. ಎಷ್ಟೋ ಆಫಿಸರರಿಗೆ ಜಲಸಮಾಧಿಯಾಗಿರಬೇಕು. 'who have no known grave' (ಗೊತ್ತಿದ್ದ ಗೋರಿ ಇಲ್ಲದವರು ) ಎಂದಿದೆ. ಶಿಲಾಲಿಪಿಯಲ್ಲಿ '75th Karnatic Infantry' (೭೫ನೆಯ ಕರ್ನಾಟಕ ಕಾಲಾಳು ಸೈನ್ಯ ) ಎಂಬ ಉಲ್ಲೇಖವಿದೆ. ವೆಂಕಟರಾಮಣಿ, ಮೊದಲಾದ ಹೆಸರುಗಳು ಆಫೀಸರರ ಲಿಸ್ಟಿನಲ್ಲಿ ದೊರೆಯುತ್ತವೆ.

ಮೋಟರಿನಲ್ಲಿ ಕುಳಿತುಕೊಂಡು ಹೋಗಿ ಊರನ್ನು ನೋಡಿಬಂದೆವು. ಇಲ್ಲಿ ಟಾಂಗಾ ಅಥವಾ ಎತ್ತಿನ ಬಂಡಿಗಳಿಲ್ಲ, ಒಂಟೆಯ ಗಾಡಿಗಳಿವೆ! 'ಬುರುಖಾ' ಹಾಕಿದ ಸ್ತ್ರೀಯರು ಆಗೀಗ ಕಣ್ಣಿಗೆ ಬೀಳುತ್ತಾರೆ.

ಇಲ್ಲಿಯ ಗಚ್ಚಿನ ಕೆರೆಗಳು ನೋಡುವಂಥವು. ಲೆಫ್ಟಿನಂಟ್ ಪ್ಲೇಫೇರ್ ಎಂಬವನು ಇವುಗಳನ್ನು ೧೮೫೪ರಲ್ಲಿ ಶೋಧಿಸಿದನು. ಸುಮಾರು ಆರೇಳು ನೂರು ವರ್ಷಗಳಿಗಿಂತ ಪ್ರಾಚೀನವಾದುವೆಂದು ಕಾಣುತ್ತದೆ. ಏಡನ್ನಿನಲ್ಲಿ ಯಾವಾಗಲೂ ನೀರಿನ ಬರಗಾಲ. ಈ ಬರಗಾಲವನ್ನು ಕಳೆಯಲೆಂದು ಹಿಂದಿನ ಅಮೀರರು ಈ ಕೆರೆಗಳನ್ನು ಕಟ್ಟಿಸಿದರು.

ಕೆರೆಗಳ ಮೇಲಿರುವ ಬೆಟ್ಟದ ಸಾಲಿನಿಂದ ಇಲ್ಲಿ ನೀರು ಬರುತ್ತಿರಬೇಕು. ಈಗ ಎಲ್ಲ ಬಂದಾಗಿದೆ. ನಾವು ನೋಡಲಿಕ್ಕೆ ಹೋದಾಗ ಒಬ್ಬ ಅರಬ್ ಹುಡುಗನು ಮಧ್ಯದಲ್ಲಿಯ ಕೆರೆಯ ತಳದಲ್ಲಿ ನಿಂತುಕೊಂಡು ಹೆಟ್ಟೆಬಡಿಯುತ್ತ "ಬಕ್ಷೀಸ್ ಸಾಬ್!" ಎಂದು ಒದರುತ್ತಿದ್ದನು! ಇಂದ್ರನಿಗೆ ಇಲ್ಲಿಯ ಜನರ ಪ್ರಾರ್ಥನೆಯು ಇದೇ ಇರಬೇಕು. ಹತ್ತಿರ ಗಡೆಯಿಲ್ಲದ ಒಂದು ಸಣ್ಣ ಬಾವಿಯಿತ್ತು. ಕಲ್ಲೊಗೆದರೆ ಪಾತಾಳಕ್ಕೆ ಮುಟ್ಟುತ್ತಿತ್ತು, ಅಂಥ ಬಾವಿಯದು! ನಾಲ್ಕು ಜನ ಅರಬರು ಹಾಡು ಹೇಳುತ್ತ ಕೊಡಕ್ಕೆ ಕಟ್ಟಿದ ಹಗ್ಗವನ್ನು ಎಳೆದೇ ಎಳೆಯುತ್ತಿದ್ದರು. ಕಡೆಗೊಂದು ಹನಿ ನೀರು ಬಂತು!

ಆ ಮೇಲೆ 'ಸೆಟಲ್ ಮೆಂಟ್' ತೋಟಕ್ಕೆ ಹೋದೆವು. ಹೂವಿಲ್ಲದ ತೋಟವದು! ಕೆಲವು ಬಾಡಿದ ಅಗೆಗಳು ಮಾತ್ರ ನಿಂತಿದ್ದವು. ಅಗಾಧವೆಂದರೆ ಬೆಟ್ಟದ ಸಾಲಿನ ಕೆಳಗೆ, ಕೆರೆಗಳ ಬದಿಗೆ ಒಂದೇ ಒಂದು ಆಲದ ಮರವು ಬೆಳೆದಿತ್ತು. ಉಸುಬಿನ ಬಯಲಿನಲ್ಲಿ ಇದಷ್ಟೇ ಹಚ್ಚ ಹಸಿರು, ಮುಹಮ್ಮದೀಯರ ಹಸಿರು ನಿಶಾನೆಯಂತೆ!

ಇಲ್ಲಿಂದ ಮೋಟರು ಸಾಗಿ ಒಂದು ಗವಿಯೊಳಗಿಂದ (Tunnel: ಟನೆಲ್) ಹಾಯ್ದು ಹೋಗುವಾಗ ಥಕ್ಕನೆ ನಿಂತುಬಿಟ್ಟಿತು! ನಾವೆಲ್ಲರೂ ಇಳಿದು ಅರ್ಧ ಫರ್ಲಾಂಗಿನ ವರೆಗೆ ದೂಡಿದಾಗ ಎಂಜಿನ್ನು ಮತ್ತೆ ಸುರುವಾಯಿತು. ಮೋಟರ್ ಡ್ರಾಯುವ್ಹರನು ಸೋಮಾಲಿ ದೇಶದವನಿದ್ದ. ಸೋಮಾಲಿ, ಅರಬಸ್ತಾನ, ಅಬಿಸೀನಿಯಾ – ಇಲ್ಲಿಯ ಜನರಿಗೆ 'ಟ' ಕಾರ 'ಡ' ಕಾರಗಳೆಲ್ಲ ವರ್ಜವೆಂದು ಕಾಣುತ್ತದೆ. 'ಬಾಟ್ಲಿ'ಗೆ 'ಬಾತಲ್' ಎಂದೂ 'Tunnel' (ಟನೆಲ್) ಗೆ 'ತನೆಲ್ ಎಂದೂ ಹೇಳುತ್ತಿದ್ದ!

ಈಗ ಕೆಲವು 'ಬೋರಿಂಗ್' ಬಾವಿಗಳನ್ನು ಎಲ್ಲ ಕಡೆಗೆ ಅಗೆದಿದ್ದಾರೆ. ಪೇಟೆಯಲ್ಲಿ ಕೆಲವು ಪಾರ್ಸಿ ಅಂಗಡಿಗಳಿವೆ. ಪೇಟೆಯಲ್ಲಿ ಮೂರಾಣೆಗೆ ಒಂದು ಹಸಿರು ಜಪಮಾಲೆಯನ್ನು ಕೊಂಡೆ, ಮುಹಮ್ಮದನ ಮೂಲಸ್ಥಾನದ ಗುರುತಿರಲೆಂದು! ನಾಲ್ಕು ತಾಸು ಹಡಗವು ಇಲ್ಲಿ

ನಿಂತಾಗ ಸಣ್ಣ ಸಣ್ಣ ದೋಣಿಗಳಲ್ಲಿ ಅದರ ಹತ್ತಿರ ಅರಬರು ಬಂದು 'very nice', 'very nice' (ವ್ಹೆರಿ ನಾಯಿಸ: ಬಹಳ ಛಲೋದು) ಎಂದು ಹೇಳಿ ಸಣ್ಣ ಸಣ್ಣ ಸಾಮಾನುಗಳನ್ನು ಮಾರುತ್ತಿದ್ದರು. ಒಟ್ಟು ಹಡಗದಿಂದ ಹೋಗಿ ತಿರುಗಿ ಬರಲು ಐದು ಶಿಲಿಂಗು ಹಾಗು ಒಂದು ಪೆನ್ನು ಹಿಡಿಯಿತು. ಸಮುದ್ರದ ಒತ್ತಿನ ಇನ್ನೊಂದು ಮಗ್ಗುಲಿಗೆ ಅರಬ್ಬಿ ಸರಕಾರದ ಅಂಕಿತದಲ್ಲಿದ್ದ ಲಾಹೆಜ್ ಎಂಬ ಪಟ್ಟಣವಿದೆ.

ಏಡನ್ನಿನಲ್ಲಿ ಒಂದು ಸಣ್ಣ Museum (ಮ್ಯುಝಿಯಂ) ಅಂದರೆ ವಸ್ತುಸಂಗ್ರಹಾಲಯವಿದೆ. ಇಲ್ಲಿ ಕ್ರಿ. ಪೂ. ೨೦೦ ವರ್ಷದಷ್ಟು ಪುರಾತನವಾದ ಕಲ್ಲುಕೆತ್ತನೆಯ ಕೃತಿಗಳು ಹಾಗು ಮೂರ್ತಿಗಳಿವೆ. ಈ ಆಕೃತಿಗಳಲ್ಲಿ ಒಂಟೆಯ ಮೇಲೆ ಕೂತ ಮನುಷ್ಯನು ಇದ್ದೇ ಇದ್ದಾನೆ! ಈ ಮೂರ್ತಿಗಳಲ್ಲಿ ಭಾರತೀಯ—ವಿಶೇಷತಃ ಬೌದ್ಧಯುಗದ ಕಲೆಯು ಹಾಂಗಿದೆ. Paleolithic (ಪ್ಯಾಲಿಯೋಲಿಥಿಕ್) ಕಾಲದ ಆಯುಧಗಳಿವೆ. ಸಂಗಮವರಿ ಕಲ್ಲಿನಲ್ಲಿ ಕಂಡರಿಸಿದ ಕೆಲಸವೂ ಕಣ್ಣಿಗೆ ಬಿದ್ದಿತು. ಈ ಉಸುಬಿನ ಬಯಲಿನಲ್ಲಿ ಅದೆಲ್ಲಿ ಬಂದಿತೊ! ಕ್ರಿ. ಶ. ೧೫೧೭ ರಲ್ಲಿ ಏಡನ್ ಬಂದರವು ಇದ್ದ ಸ್ಥಿತಿಯ ಒಂದು ಚಿತ್ರವೂ ಇಲ್ಲಿದೆ. ಅಲ್ಲದೆ ಅರಬರಿಂದ ಇಂಗ್ಲೀಷರು ಏಡನ್ ಬಂದರವನ್ನು ಕಿತ್ತುಕೊಂಡ ಮಾದರಿಯೂ ಇಲ್ಲಿ ಚಿತ್ರಿತವಾಗಿದೆ. ಮೊದಲು ಪರ್ಸಿಯನ್ನರ ಅಂಕಿತ ದಲ್ಲಿ ಈ ಬಂದರವಿತ್ತು. ಆಮೇಲೆ ಪೋರ್ಚುಗೀಜ್, ಅರಬ್, ಇಂಗ್ಲಿಷರು, ಈ ರೀತಿಯಾಗಿ ಇಳಿದು ಬಂದಿದೆ.

ಇಲ್ಲಿಂದ 'ಸುಡಾನ' ಬಂದರಕ್ಕೆ ಬಂದೆವು. ಇಲ್ಲಿಯ ಟಗರಿಸಂಥ ಜನರು ತಮ್ಮ ಭಾಷೆಯಲ್ಲಿಯ ಜಾನಪದ ಗೀತಗಳನ್ನು ಹಾಡುತ್ತ ಹಡಗದ ತಳದಲ್ಲಿ ಕೆಲಸ ಮಾಡುತ್ತಿರುವದನ್ನು ನೋಡಿ ನನ್ನ ಮೈ ಜುಮ್ಮೆಂದಿತು. ಈ ಉಸುಬಿನ ಅರಣ್ಯದಲ್ಲಿ ನಾಗರಿಕತೆಯ ಸಣ್ಣ ಗೆರೆಯಂತೆ ಬಂದರದ ಗುಂಟ ರೇಲ್ವೆ ಹಳಿಗಳು ಹಾಯ್ದಿವೆ. ಇಲ್ಲಿಯ ಸೆಕೆಯು ಸಹಿಸಲಸಾಧ್ಯವಾದುದು. ನಾವು ಮುಂಜಾವಿನಲ್ಲಿ ಹೋಗಿ ದ್ದರೂ ಬಂದರದಲ್ಲಿ ಬಿಸಿಲು ದಣದಣ ಉರಿಯುತ್ತಿತ್ತು. ಇಲ್ಲಿಂದ

ಕೆಂಪು ಸಮುದ್ರವನ್ನು ಸೇರಿ ಅದೇ ಸೆಕೆಯನ್ನು ಅನುಭವಿಸಿದೆವು. ಸಮುದ್ರದ ತಳದಲ್ಲಿ ಹುಲ್ಲು-ಗಲಗು ಮುಂತಾದ ಹಸಿರು ಬೆಳೆಯುವದಷ್ಟೆ. ಸಣ್ಣ ಸಣ್ಣ ಕೆಂಪು ಬೀಜಗಳನ್ನು ಮೇಲೆ ಬಿಡುವ ಬೇಲಿಯೊಂದು ಈ ಸಮುದ್ರದೊಳಗೆ ಬೆಳೆಯುವದು. ನಾವು ನೋಡಿದಂತೆ ಇಂಥ ಬೀಜಗಳ ತಂಡಗಳು ನೀರಲ್ಲಿ ತೇಲುತ್ತಿದ್ದವು. ಇದರಿಂದ ಈ ಸಮುದ್ರಕ್ಕೆ ಕೆಂಪು ಸಮುದ್ರವೆಂದು ಹೆಸರು ಬಂದಿದೆಯಂತೆ. ಇನ್ನೊಂದು ಕಾರಣವನ್ನೂ ಸೂಚಿಸುತ್ತಾರೆ. ಇಲ್ಲಿ ಗಾಳಿಯೇ ಇಲ್ಲ. ಹಿಂದಿನ ಹಡಗಗಳೆಲ್ಲ ಗಾಳಿಪಟದಿಂದ ನಡೆಯುತ್ತಿದ್ದವು. ಅನೇಕ ದಿವಸಗಳವರೆಗೆ ಗಾಳಿಯಿಲ್ಲದೆ ಹಡಗಗಳು ನಿಂತಲ್ಲಿಯೇ ನಿಲ್ಲಲು ಜನರು ಕೂಳಿಲ್ಲದೆ ಸಾಯುತ್ತಿದ್ದರು. ಅದಕ್ಕಾಗಿ ಇದು ಕೆಂಪು ಸಮುದ್ರ! ಈ ಸಂದರ್ಭದಲ್ಲಿ ನಾನು ಬರೆದ ಸಮುದ್ರ ಗೀತೆಯೊಂದು ಹೀಗಿದೆ:

## ವಿಕನೋವ

ಕಿನ್ನರ ಕಿಂಪುರುಷರ ನೌಕೆಗಳಂತೆ
ತೇಲುತಿಹುದು ಬುರುಗಿನ ಬೆಳ್ಳಿ ಶರಧಿಯ ಮೇಲೆ—
ನೂರೊಂದು ಕಡೆ ತೇಲುತಿಹುದು ನೋಡಾ!
ಬೆಣ್ಣೆ ಕಡಿದ ಮಜ್ಜಿಗೆಯಂತೆ
ಹುಟ್ಟುಕಡಿದ ನೀರು ಅಟ್ಟಿಸುತಿಹುದು ನೋಡಾ!
ತಪತಪನೆ ಕಾಯುದ್ದ ಕೋಟಿ ಸೂರ್ಯರಂತೆ
ಕಣ್ಣು ಕುಕ್ಕಿಸುವದು ನೋಡಾ ಸಾಗರವು!
ಹೆಡೆಯುಲಿ ಪುಷ್ಪರಾಗವಿಹ ಕಾಳಸರ್ಪಗಳಂತೆ
ಸಾಗಿಹುದು ನೋಡಾ ಸಾವಿರತೆರೆಗಳ ವೈಭವವು!
ಹಚ್ಚಹಸಿರಿತ್ತು ಹಿಂದೀ ಮಹಾಸಾಗರದ ಬಣ್ಣ,
ಕಪ್ಪು ಹಸಿರಿತ್ತು ಮತ್ತೆ!
ಅರಬ್ಬಿಯ ಮುನ್ನೀರಿಗೆ ಕರಿನೀಲಿ ಬಣ್ಣವುಂಟು,
ಮುಂದೆ ಬಂದಿಹುದು ಕೆಂಪು ಸಮುದ್ರವೊಂದು:
ನಿನ್ನ ಬಣ್ಣವಾವದು ಸಮುದ್ರರಾಜ?

ಸಪ್ತವರ್ಣದ ಇಂದ್ರಧನುಸ್ಸನ್ನು ಹಿಡಿದು
ಆಕಾಶರಾಜನ ಸರಿಗಟ್ಟಿದೆ ನೀನು.
ಚಣಕೊಮ್ಮೆ ಬಣ್ಣವ ಬದಲಿಸಿ ಚೆಲುವಿಕೆಯನಾಂತು
ಭೂದೇವಿಯನು ಪಾತಾಳಕೆ ಮೆಟ್ಟಿದೆ ನೀನು!
ಮುಗಿಲಿಗಿಂತ ಮಿಗಿಲು ಸಾಗರದ ನೀಲಿ!
ಸಾಗರದ ತುದಿ ತಟ್ಟಿ ಮುಗಿಲೆಲ್ಲ ನೀಲಿಯಾಗಿಹುದು
ಮುಗಿಲನಂತತೆಯೆಲ್ಲ ಮುನ್ನೀರ ಗರ್ಭಪಿಂಡ!
ಮೋಡಗಳೆಂಬ ಓಡಗಳು ಬಾಂದಳದಿ ತೇಲುವಲ್ಲಿ
ಹಕ್ಕಿಯೆಂಬ ಚಿಕ್ಕ ಮಿನುಗಿದವು ಕಡಲಿನೊಡಲ
ಮೇಲ್ಗಡೆಗೆ!
ಗಾಳಿಯಲಿ ರೆಕ್ಕೆ ಬೀಸುತಿದೆ ಪಕ್ಷಿಗಣವು,—
ಈಸುತಿದೆ ಗಾಳಿ ನೀರಿನಲಿ ರೆಕ್ಕೆ ಬಡಿದು!
ನೆಲ, ಗಾಳಿ, ಉರಿ, ಮುಗಿಲು,—
ಪೆಡಂಭೂತಗಳಿವು ನಾಲ್ಕು.
ಈ ಮಹಾಭೂತಗಳ ನುಂಗಿ ನೀರ್ಕುಡಿಯುತ್ತ
ಮತ್ತಮದಗಜದಂತೆ ಕ್ರೀಡಿಸುತ ನಿಂತ ಪಂಚಾನನ
ನಿನ್ನೆದುರು ನರನೆಂಬ ಪಿಳ್ಳೆ ಬರಿ ನೀರ್ಗುಳ್ಳೆ:
ಕೆರಳದಿರು! ಕರುಣಿಸು! ಶರಣು! ಶರಣು!

ಇದಾದ ಮೇಲೆ ಸುಯೇಜ್ ಪಟ್ಟಣಕ್ಕೆ ಬಂದೆವು. ಇಲ್ಲಿಯ ಮನೆಗಳನ್ನು ಮೂಟಾಗಿ ಕಟ್ಟಿದ್ದಾರೆ. ಇಲ್ಲಿಂದ ಸುಯೇಜ್ ಕಾಲುವೆ ಯನ್ನು ಪ್ರವೇಶಿಸಿ ಭೂಮಧ್ಯ ಸಮುದ್ರವನ್ನು ಸೇರಬೇಕು. ಕಾಲುವೆಯ ಒಂದು ಮಗ್ಗುಲಿಗೆ ಹಸಿರಿದೆ,—ತೋಟಗಳಿವೆ. ಇನ್ನೊಂದು ಮಗ್ಗುಲಿಗೆ ಕೊನೆಯಿಲ್ಲದ ಉಸುಬಿನರಣ್ಯ! ಹಸಿರು ಇಜಿಪ್ತದೇಶದ್ದು. ಉಸುಬಿನ ಮಗ್ಗುಲು ಅರೇಬಿಯ ದೇಶದ್ದು. ಹೀಗೆ ಏಶಿಯ-ಆಫ್ರಿಕ ಖಂಡಗಳ ನಡುವೆ ಹಾಯ್ದು ನಾವು ಸಯ್ಯದ ಬಂದರಕ್ಕೆ ಬಂದೆವು. ಇದು ಇಜಿಪ್ತ ದೇಶದ ಮುಖ್ಯ ಬಂದರವಾಗಿದೆ. ಇಲ್ಲಿಯೇ ಕಾಲುವೆಯು

ಭೂಮಧ್ಯಸಮುದ್ರವನ್ನು ಕೂಡುವದು. ನಮ್ಮ ದೇಶದಲ್ಲಿಗಿಂತ ಇಲ್ಲಿಯ ಜನರ ಮೋರೆಯ ಮೇಲೆ ಸ್ವಾತಂತ್ರ್ಯದ ಕಳೆಯು ಉಕ್ಕುತ್ತದೆ. ಭೂಮಧ್ಯಸಮುದ್ರದಲ್ಲಿ ಹಡಗು ನಡೆದಾಗ ಒಂದು ಮಧ್ಯರಾತ್ರಿಯಲ್ಲಿ ನಾನು ಪಡೆದ ರಸಾನುಭವವು ಕೆಳಗಿನ ಕವನದ ರೂಪ ತಾಳಿತು.

## ಮಧ್ಯರಾತ್ರಿ

ಮಧ್ಯರಾತ್ರಿಯಲಿ,
ಭೂಮಧ್ಯಸಮುದ್ರದ ಮಧ್ಯದಲಿ
ತೇಲುತಿಹ ಹಡಗದಲಿ ನಿದ್ರಿಸುತ
ಸವಿಗನಸು ಕಂಡು ಕಣ್ದೆರೆದು ನೋಡೆ,—
ಆಹಾ! ಎನಿತು ನಿಚ್ಚಳವಿಹುದು!
ನೆರೆದಿಹುದು ಮುಗಿಲಿನಲಿ ತಾರೆಗಳ ಸಿಬ್ಬಣವು.

ಕೋಟಿನಕ್ಷತ್ರಗಳು ಕಣ್ಣುಬಿಡುತಿವೆ ಸಭದಿ.
ಬಿಳಿಮುಸುಕನೋಸರಿಸಿ ನೋಡುತಿಹಳಿದೊ! ಇದೊ!
ಆಕಾಶಗಂಗೆ!
ಅವಳ ಕೇಶಕಲಾಪದಲ್ಲಿ ಕಣ್ಣೆವೆಯಿಕ್ಕಿ
ತೆರೆಯುತಿದೆ ನೋಡು ಕೃತ್ತಿಕೆಯ ಮೊಗ್ಗೆಮಾಲೆ!
ಕಾದಲಸಿಗಾಗಿ ದಾರಿಕಾಯುವಳು,—
ದಾರಿಕಾಯುವಳು ಆಕಾಶಗಂಗೆ!

ಓ! ಸಮುದ್ರರಾಜ! ಬರಿ ಹಸುಳೆ ನಾನು!
ನಿನ್ನ ಪ್ರಣಯಮುಹೂರ್ತವನು ಕಂಡೆನೆಂದು
ಕೋಪಿಸಬೇಡ ಕಂಡೆಯಾ!
ಪರಮಪಾವಿತ್ರ್ಯವನು ಪಡೆದಿದೆ ನನ್ನ ಕಣ್ಣೆನಲಿ,—
ನಿಮ್ಮೀರ್ವರ ನಗ್ನ-ಸೌಂದರ್ಯವಿದು!

ಇಟಲಿಯ 'ಹೆಬ್ಬೆಟ್ಟಿ'ನ ಮೇಲಿದ್ದ ಪಟ್ಟಣಗಳ ಹಾಗು ಸಿಸಿಲಿ ಯೆಂಬ ನಡುಗಡ್ಡೆಯ ತುದಿಗಿದ್ದ ಮೆಸೀನಾ ಪಟ್ಟಣದ ಸಮೀಪವೆ ಹಾಯ್ದು

ಹೋಗುವ ಸುಸಂಧಿಯೂ ನಮಗೆ ದೊರಕಿತು. ಸೂರ್ಯನ ಪ್ರಕಾಶದಲ್ಲಿ ಹೊಳೆಯುತ್ತ ಮಲಗಿದ್ದ ಈ ಪಟ್ಟಣಗಳನ್ನು ನೋಡಿ, ಇಟಲಿಯಲ್ಲಿ ಒಂದೆರಡು ವರ್ಷ ವಾಸವಾಗಿದ್ದ ಶೆಲ್ಲಿಯ ಸಾಲುಗಳು ನೆನಪಾದವು.

"The sun is warm, the sky is clear
The waves are dancing fast and bright.
Blue isles and sunny islets wear
The purple noon's transparent might"

(ಸೂರ್ಯ ಬೆಚ್ಚಬಿಸಿಯಾಗಿರುವ, ಆಕಾಶ ಶುಭ್ರವಾಗಿದೆ. ತೆರೆಗಳು ಚಪಲದಿಂದ ಹೊಳೆಯುತ್ತ ಕುಣಿಯುತ್ತವೆ. ನೀಲದ್ವೀಪ ಹಾಗೂ ಸ್ವಚ್ಛವಾದ ಮರಿದ್ವೀಪ ನಡುಹಗಲಿನ ನಿರ್ಮಲವೈಭವವನ್ನು ತಳೆದಿವೆ)

ಇಲ್ಲಿಂದ 'ಸ್ಟ್ರಾಂಬೋಲಿ'ಯೆಂಬ ಜ್ವಾಲಾಮುಖಿಯನ್ನು ಹಾದಿಯಲ್ಲಿ ಕಂಡು, ಅನೇಕ ದ್ವೀಪಗಳ ಸಮೀಪದಲ್ಲಿ ಸುಳಿದು ಮಾರ್ಸೆಲ್ ಬಂದರಕ್ಕೆ ಬಂದು ಮುಟ್ಟಿ ಹಡಗದಿಂದಿಳಿದೆವು!

ಹಡಗದ ಮೇಲೆ ಸಂಭವಿಸಿದ ಮೂರು ಸಂಗತಿಗಳನ್ನು ವಿವರಿಸಿ ಮುಂದೆ ಸಾಗುತ್ತೇನೆ. ಒಂದು,– fancy dress ball (ಫ್ಯಾನ್ಸಿ ಡ್ರೆಸ್ ಬಾಲ್) ಅಂದರೆ ಹುಚ್ಚುಚ್ಚು ವೇಷದಲ್ಲಿಯಾಗುವ ನೃತ್ಯಶಾಲೆಯ ಸಮಾರಂಭ. ಇನ್ನೊಂದು– Children's Party, (ಚಿಲ್ಡ್ರೆನ್ಸ ಪಾರ್ಟಿ)ಹುಡುಗರ ಸಮಾರಂಭ. ಮೂರನೆಯದು—ಒಬ್ಬ ಅಬಿಸೀನಿಯನ್ ತರುಣನೊಡನೆ ಆದ ಮಾತುಗಳು.

ಮಾರ್ಸೆಲ್ ಬಂದರವು ಸಮೀಪಿಸಿದಾಗ ಇಳಿಯಲಿರುವ ಪ್ರವಾಸಿಗಳಿಗೆಂದು ಈ fancy dress ball (ಫ್ಯಾನ್ಸಿಡ್ರೆಸ್ ಬಾಲ್)ದ ಏರ್ಪಾಟಾಗಿತ್ತು. ಭೋಜನಗೃಹದಲ್ಲಿ ಅಂದು ರಾತ್ರಿ ಬಣ್ಣಬಣ್ಣದ ತೆಳ್ಳನ್ನ ರಬ್ಬರು ಚಂಡುಗಳನ್ನು ಎಲ್ಲೆಡೆಗೆ ತೂಗು ಹಾಕಿದ್ದರು. ಅವನ್ನು ನೀವು ಸಿಗರೇಟು ಹಚ್ಚಿ ಒಡೆದು ಬಿಡಬಹುದು, ಇಲ್ಲವೆ ತೆಗೆದುಕೊಂಡು ಹೋಗಬಹುದು. ಅಲ್ಲದೆ ಅಂದು ಪ್ರತಿಯೊಬ್ಬರ ಪ್ಲೇಟಿನ ಹತ್ತಿರ

ಒಂದೊಂದು ಕಾಣಿಕೆಯನ್ನು ಇಟ್ಟಿದ್ದರು. ನನಗೊಂದು ಕಟ್ಟಿಗೆಯ ಗೊಂಬೆ ಸಿಕ್ಕಿತು! ನನ್ನ ಹತ್ತಿರವಿದ್ದ '—' ಎಂಬ ಸ್ನೇಹಿತರಿಗೆ ಒಂದು ತುತೂರಿಯು ಬಂತು. ಅಂದು ಭೋಜನಗೃಹದ ತುಂಬೆಲ್ಲ ತುತೂರಿಯ ಸಪ್ಪಳವೇ ಸಪ್ಪಳ! '—'ನು ಎರಡು ತುತೂರಿಗಳನ್ನು ಊದಹತ್ತಿದ. ಊಟವಾದ ಮೇಲೆ ಪರೀಕ್ಷಕರೆದುರಿಗೆ ವೇಷಧಾರಿಗಳ 'ಪರೇಡ್' ಆಯಿತು. ಒಬ್ಬ ಬಂಗಾಲಿಯು "An ass to be sold" (ಮಾರಾಟದ ಕತ್ತೆ) ಎಂದು ಬರೆದುಕೊಂಡಿದ್ದ. ಒಬ್ಬ ಆಂಗ್ಲ ಹುಡಿಗೆಯು ಹುಲಿದೊಗಲನ್ನು ಸುತ್ತಿಕೊಂಡು 'Primitive woman' (ಕಾಡು ಹೆಂಗಸು) ಎಂದು ಬಂದಿದ್ದಳು. ಒಬ್ಬ ಆಂಗ್ಲ ಸ್ತ್ರೀಯು ಸನ್ಯಾಸಿಯ ವೇಷ ಧರಿಸಿದ್ದಳು. ಇನ್ನೊಬ್ಬಳು ತುಂಬ ಮುಸುಕು ಹಾಕಿ ಕುಣಿಯುವ ಕರಡಿಯಾಗಿದ್ದಳು. ಇವಳಿಗೇ ಮೊದಲನೆಯ ಇನಾಮು ಸಿಕ್ಕಿತು. ಇದರ ವಿಷಯವನ್ನು ಮತ್ತೆ ಮುಂದಿನ ಪತ್ರದಲ್ಲಿ ಬರೆಯುವೆನು.

———

೬

......

ಆಕ್ಸಫರ್ಡ್

೧೧—೧೦—೩೬

ಹಿಂದಿನ ಪತ್ರದಲ್ಲಿ ಹಡಗದ ಕೆಲವು ವಿಚಾರಗಳನ್ನು ಬರೆದಿದ್ದೆ. ಅವನ್ನು ಮುಂದುವರಿಸುವೆನು. Dance (ಕುಣಿತ) ಎಂಬ ಆಂಗ್ಲ ಸಂಪ್ರದಾಯದಲ್ಲಿ ಅನೇಕ ಹಿಂದೂ ಹೆಣ್ಣುಮಕ್ಕಳು-ಗಂಡುಮಕ್ಕಳು ಸೇರಿದ್ದನ್ನು ನೋಡಿ ನನಗೆ ಮಿತಿಮೀರಿ ದುಃಖವಾಯಿತು. ಆಂಗ್ಲರಿಗೆ ಇದು ಯೋಗ್ಯವೋ ಅಯೋಗ್ಯವೋ ಎಂಬ ಮಾತಿನ ಬಗ್ಗೆ ನಾನು ಇನ್ನೂ ನಿರ್ಣಯಕ್ಕೆ ಬಂದಿಲ್ಲ. ಆದರೆ ನಮ್ಮ ಜನರಿಗೆ ಮಾತ್ರ ಅದು ತೀರ ಅಯೋಗ್ಯವಾದದ್ದು.

ಹುಡುಗರ ಆಟವೊಂದು ಹಡಗದ ಮೇಲಾಯಿತು. ಅದು ಪೂರ್ಣವಾಗಿ ನನ್ನ ಮನಸ್ಸಿಗೆ ಬಂತು. ಸಂಜೆ ೫ ಗಂಟೆಗೆ ಹಡಗದ ಮೇಲಿದ್ದ ಎಲ್ಲ ಸಣ್ಣ ಹುಡುಗರನ್ನು ಡೆಕ್ಕಿನ ಮೇಲೆ ಕೂಡಿ ಹಾಕಿದರು. ಆ ಹುಡುಗ-ಹುಡಿಗೆಯರ ತಾಯಿ-ತಂದೆಗಳು ತಮ್ಮ ತಮ್ಮ ಸಣ್ಣ ಮಕ್ಕಳನ್ನು ಬಗೆಬಗೆಯಾಗಿ ಸಿಂಗರಿಸಿ ಬೇರೆ ಬೇರೆ ವೇಷಹಾಕಿಕೊಂಡು ಬಂದಿದ್ದರು. ಕ್ಯಾಪ್ಟನ್ನರು ಈ ಆಟದ 'ಜಜ್' (ನಿರ್ಣಾಯಕರು) ಆಗಿದ್ದರು. ಒಬ್ಬ ಸೇವಕ ಹಾಗು ಇಬ್ಬರು ಸೇವಕಿಯರು ಹುಡುಗರನ್ನು ಆಡಿಸುತ್ತಿದ್ದರು. ಹುಡುಗರನ್ನು ಒಬ್ಬರ ಹಿಂದೆ ಒಬ್ಬರಂತೆ ತಿರುಗಾಡಿಸಲು ಪ್ರಾರಂಭವಾಯಿತು. ಬಂಗಾಲಿ ದಂಪತಿಗಳು ತಮ್ಮ ಹುಡುಗನಿಗೆ ಜರದ ರುಮಾಲು ಸುತ್ತಿ ಶೆಲ್ಲೆ ಹೊಚ್ಚಿ ಉದ್ದನ್ನ ನಿಲುವಂಗಿಯನ್ನು

ಹಾಕಿ ಬಿಟ್ಟಿದ್ದರು. (ಮುಂದೆ ಈ ಹುಡುಗನಿಗೇ ಮೊದಲನೆಯ ಇನಾಮು ದೊರೆಯಿತು. ಮುಖ್ಯತಃ ಕ್ಯಾಪ್ಟನ್ನರಿಗೆ ಈ ಭಾರತೀಯ ವೇಷವೇ ವಿಚಿತ್ರವೆನಿಸಿರಬೇಕು! ಇದೇ ಫ್ಯಾನ್ಸಿ ಡ್ರೆಸ್ಸು!) ಆಂಗ್ಲ ಹುಡುಗರಲ್ಲಿ ಒಬ್ಬನು 'Safety first' (ಸುರಕ್ಷಿತತೆ ಮುಖ್ಯ) ಎಂಬ ಲೇಖದೊಡನೆ ದೊಡ್ಡ Life-jacket (ಲೈಫ್ ಜಾಕೆಟ್) ನ್ನು ಹೊತ್ತಿದ್ದನು. ಒಬ್ಬ ಕುರುಡ-ಇನ್ನೊಬ್ಬ ಕುಂಟ-ಮತ್ತೊಬ್ಬ ನಾವಿಕ. ಒಬ್ಬ ಆಂಗ್ಲ ಬಾಲಕಿಗೆ ಹೆಕುಬಾ ರಾಣಿಯ ವೇಷವನ್ನು ಹಾಕಿತ್ತು. ಇದರಿಂದ ನೋಡುವವರಿಗೆ ಆನಂದ; ಅದರ ಇಮ್ಮಡಿಯಷ್ಟು ಹುಡುಗರಿಗೆ ಆನಂದ ವಾಗಿತ್ತು.

ಹುಡುಗರನ್ನು ಆಡಿಸುವದರಲ್ಲಿ ಆಂಗ್ಲರಿಗೆ ಲವಲವಿಕೆ ಹೆಚ್ಚು. ಸಂಪತ್ತು – ವಿರಾಮವಿದ್ದರೆ ನಮ್ಮ ಜನರೂ ಹೀಗೆ ಮಾಡುತ್ತಿದ್ದರೋ ಏನೋ! (ಮಿಸೆಸ್ ಟರ್ನರಳು- ತಮ್ಮ ಹುಡುಗರು ಸಣ್ಣವರಿದ್ದಾಗ ಅವರನ್ನು ಆಡಿಸಲೆಂದು—ಒಂದು ಸಣ್ಣ ಹೊಂಡವನ್ನು ಮನೆಯ ಮುಂದಿನ ತೋಟದಲ್ಲಿ ಕಟ್ಟಿದ್ದಾಳೆ. ಅದರಲ್ಲಿ ಮೈತೊಳೆದುಕೊಳ್ಳಲು ಇಳಿದ ಎರಡು ಗೊಂಬೆಗಳು ನಿಂತಿವೆ. ಮಳೆಯು ಬಂದಾಗ ಈ ಗೊಂಬೆಗಳ ಮೈಯ್ಯು ತಪತಪನೆ ತೊಯ್ದು ಪಟಪಟನೆ ನೀರುದುರುವುದು. ಆಗ ಇವು ಸಜೀವ ವಾಗಿ ಕಾಣುವವು! ಹಿತ್ತಲದಲ್ಲಿ ಇದಕ್ಕಿಂತ ಸ್ವಲ್ಪ ದೊಡ್ಡ ಹೊಂಡ ವಿದೆ. ಅದರಲ್ಲಿ ಒಬ್ಬ ಮೀನಗಾರನ ಗೊಂಬೆಯನ್ನು ನಿಲ್ಲಿಸಿದ್ದಾರೆ. ಅಲ್ಲದೆ ಅಲ್ಲಿ ಒಂದೆರಡು ಗವಿಗಳನ್ನು ಸಹ ಮಾಡಿದ್ದಾರೆ.)

ಹೀಗೆ ಹಡಗದ ಮೇಲೆ ನೆರೆದ ಹುಡುಗರನ್ನು ಎರಡು ತಂಡಗಳಾಗಿ ವಿಂಗಡಿಸಿದರು. ಒಬ್ಬೊಬ್ಬ ಸೇವಕಿಯು ಒಂದೊಂದು ತಂಡದ ಮುಖ್ಯಸ್ಥಳಾದಳು. ಆಮೇಲೆ ಒಂದು ಪಾರ್ಟಿಯು ಇನ್ನೊಂದು ಪಾರ್ಟಿಗೆ ಕುಣಿಯುತ್ತ ಔತಣ ಕೊಡಲು ಪ್ರಾರಂಭವಾಯಿತು:

"ಗುಜು ಗುಜು ಮಾಪುರಿಗೇನ್ನೈತೆ
ಗುಜಾನು ಮಾಪುರಿಗೇನ್ನೈತೆ" ಎಂಬಂತೆ ಏನೇನೋ ಔತಣ ಕೊಡಲು ಹಾಡುವದು ಸುರುವಾಯಿತು. ಒಂದು ಪಾರ್ಟಿಯ

ಹುಡಿಗೆಯನ್ನು ಜಗ್ಗಲು ಇನ್ನೊಂದು ಪಾರ್ಟಿಯ ಹುಡಿಗೆಗೆ ಹಚ್ಚು ತ್ತಾರೆ. ಯಾರು ಎಳೆದುಕೊಂಡು ಬರುವರೋ ಅವರು ಗೆದ್ದಹಾಗೆ. ಆಮೇಲೆ ಎಲ್ಲರೂ ಕೂಡಿ ತಿರುಗಹತ್ತುತ್ತಾರೆ. ಗಪ್ಪನೆ ಕೆಳಗೆ ಕೂಡು ವಾಗ ಕೈಬಳ್ಳಿ ಬಿಟ್ಟು ಯಾರು ಬೀಳುವರೋ ಅವರು ಬಳ್ಳಿಯ ಒಳಗೆ ನಿಲ್ಲಬೇಕು,– ಹೀಗೆ ಒಳಗೊಂದು ಬಳ್ಳಿಯಾಗುತ್ತದೆ; ಬಿದ್ದ ಹುಡುಗನು ಇನ್ನೊಬ್ಬನನ್ನು ಆರಿಸಿಕೊಂಡು ತನ್ನ ಬಳ್ಳಿಗೆ ಸೇರಿಸಬಹುದು.

ಎರಡು ಪಾರ್ಟಿಗಳನ್ನು ಮೊದಲಿಗೆ ಮಾಡುವದು ಮೋಜಿದೆ. ಇಬ್ಬರು ಸೇವಕಿಯರು ಕೈಗೆ ಕೈಹಿಡಿದು ತಿಲ್ಲಾಣ ಹೇಳುತ್ತ ಕೈಬೀಸು ತ್ತಾರೆ. ಎಲ್ಲ ಹುಡುಗರೂ ಅವರ ಕೈಕೆಳಗಿಂದ ಹಾಯ್ದು ತಿರುಗಬೇಕು; Chip-chop, Chip-chop ( ಚಿಪ್‌ಚಾಪ, ಚಿಪ್‌ಚಾಪ ) ಎಂದು ತಿಲ್ಲಾಣ ವನ್ನು ಮುಗಿಸಿ ಸೇವಕಿಯರು ಕೈ ಕೆಳಗೆ ಬಿಟ್ಟು ಯಾರು ಸಿಗುವರೋ ಅವರನ್ನು ಹಿಡಿದು "ನೀನು ಯಾರ ಕಡೆಗೆ?" ಎಂದು ಕೇಳುತ್ತಾರೆ. ಇಬ್ಬರು ಸೇವಕಿಯರಲ್ಲಿ ಒಬ್ಬಳ ಕಡೆಗೆ ಮಗುವು ಹೋಗುತ್ತದೆ. ಹೀಗೆ ಎರಡು ಬಣಗಳಾಗುತ್ತವೆ. ಇಂಥ ಆಟಗಳು ನಮ್ಮ ಸಮಾಜದಲ್ಲಿಯೂ ಇದೇ ತರಹದ ವ್ಯವಸ್ಥೆಯಿಂದ ಬೆಳೆಯಬೇಕು.

ನಾನು ಹೇಳಬೇಕಾಗಿದ್ದ ಮೂರನೆಯ ಮಾತು ಒಬ್ಬ ಅಬಿಸಿನಿ-ಯನ್ ತರುಣನನ್ನು ಕುರಿತು ಇತ್ತು. ಅವನಿಗೆ ಸುಮಾರು ೩೦ ವಯ ಸ್ಸಾಗಿರಬಹುದು. ಸುಡ್ಯಾನ್ ಬಂದರದಲ್ಲಿ ಅವನು ಹಡಗವೇರಿದ. ಲಂಡನ್ನದಲ್ಲಿದ್ದ ತನ್ನ ತಂದೆಯ ಕಡೆಗೆ ಆತ ನಡೆದಿದ್ದ. ಅವನ ಅಕ್ಕ ಹಾಗು ಅಣ್ಣ-ತಮ್ಮಂದಿರು ಇಟ್ಯಾಲಿಯನ್ನರೊಡನೆ ಆದ ಯುದ್ಧದಲ್ಲಿ ತೀರಿಕೊಂಡರಂತೆ. ಅವರ ಕುಟುಂಬದ ಕೆಲವು ಜನ ಹೆಣ್ಣುಮಕ್ಕಳು ಇನ್ನೂ ಅಬಿಸಿನಿಯಾದಲ್ಲಿ ಇದ್ದಾರೆ. ಈ ತರುಣನ ಮೋರೆಯು ತ್ರಿಕೋ ಣಾಕಾರವಾಗಿತ್ತು. ತಲೆಯ ಮೇಲಿನ ಕೂದಲು ಉಣ್ಣೆಯಂತಿತ್ತು. ಅವನ ಕಿಸೆಯೊಳಗಿನ ಗಡಿಯಾರದ ಮೇಲೆ ರಾಸತಫಾರಿಯ ಚಿತ್ರವಿತ್ತು. ಅಲೆಕ್ಝಾಂಡ್ರಿಯಾದಲ್ಲಿ ಇದ್ದ ಒಂದು ಆಂಗ್ಲ ಶಾಲೆಯಲ್ಲಿ ಇವನ ಶಿಕ್ಷಣ ವಾಯಿತಂತೆ. ಅದೊಂದು ದೊಡ್ಡ ಶಾಲೆ. ಮೊನ್ನೆ ಆದ ಎಂಗ್ಲೋ-ಇಜಿಪ್ಶಿಯನ್ ಒಪ್ಪಂದವನ್ನು ಸಹಿ ಹಾಕಿದ ಇಜಿಪ್ಶಿಯನ್ನನು ನಪ

ಅದೇ ಶಾಲೆಯವನಂತೆ. ಆ ಶಾಲೆಯಿಂದ ಈ ತರುಣನು ಆಕ್ಸಫರ್ಡಿಗೆ ಹೋದ. ಅಲ್ಲಿ ಮೂರು ವರ್ಷ ಇತಿಹಾಸವನ್ನು ಅಭ್ಯಾಸಿಸಿದ. ಪಾಸಾಗಲಿಲ್ಲ. ಹಿಂದುಸ್ಥಾನದ ಬಗ್ಗೆ ಅವನಿಗೆ ವಿಚಿತ್ರ ಕಲ್ಪನೆಗಳಿದ್ದವು. ಅಲ್ಲಿಯ ಹೆಣ್ಣುಮಕ್ಕಳೆಲ್ಲ ರತ್ನಗಳನ್ನು ಧರಿಸುವರೇನೆಂದು ಕೇಳಿದ! ವಿಲಾಯತಿಯ ಕೆಲವು ಭಾರತೀಯ 'ಮಾದರಿ' ಗಳನ್ನು ಮಾತ್ರ ಆತನು ಕಂಡಿರಬೇಕು! ಅಬಿಸೀನಿಯದ ಸ್ವಾತಂತ್ರವನ್ನು ಗಳಿಸುವದು ಇನ್ನು ಅಶಕ್ಯವಾದ ಮಾತೆಂದು ಆತನು ಮರುಗಿದ. "Those who feel safe are there, who dont, are out of it" (ತಾವು ಸುರಕ್ಷಿತವೆಂದು ತಿಳಿದವರು ಅಲ್ಲಿದ್ದಾರೆ, ಉಳಿದವರು ಹೊರಗೆ ಹೋಗಿರುವರು) ಎಂದು ನಗುತ್ತ ನುಡಿದ. ಇಟ್ಯಾಲಿಯನ್ ಸರಕಾರವು ಇವನ ಮೇಲೂ ಕಣ್ಣಿಟ್ಟಿರಬೇಕು!

"I had long desired to come to India" (ನಾನು ಹಿಂದುಸ್ಥಾನಕ್ಕೆ ಬರಬೇಕೆಂದು ಹಿಂದೆ ಮನಸ್ಸು ಮಾಡಿದ್ದೆ) ಎಂದು ಅವನೆಂದ. "What do you intend doing in future?" (ನೀನು ಮುಂದೇನು ಮಾಡಬೇಕೆನ್ನುವಿ?) ಎಂದು ನಾನು ಕೇಳಿದೆ.

ಅವನ ಮೋರೆಯು ಬತ್ತಿತು. ನೆಟ್ಟಗೆ ತನ್ನೆದುರಿಗೆ ಆತನು ಮುಗಿಲಿನ ಕಡೆಗೆ ನೋಡಿ: "Nothing. I may come to India and serve as a waiter in some restaurant" (ಏನೂ ಇಲ್ಲ. ನಾನು ಹಿಂದುಸ್ಥಾನಕ್ಕೆ ಬಂದು ಒಂದು ಉಪಹಾರಗೃಹದಲ್ಲಿ ಚಾಕರನಾಗಬಹುದು) ಎಂದು ನುಡಿದ. ಅವನ ನಗೆಯಲ್ಲಿ ವಿಷಾದವಿತ್ತು. "Why not work in your own country?" (ನಿನ್ನ ದೇಶದಲ್ಲಿಯೇ ಯಾಕೆ ಕೆಲಸ ಮಾಡಬಾರದು?) ಎಂದು ನಾನು ಕೇಳಿದೆ.

"What, with the Italians?" (ಏನು? ಇಟ್ಯಾಲಿಯನ್ನರ ಕೂಡ?) ಎಂದು ಕೆಣಕಿದ ಸರ್ಪದಂತೆ ಅವನು ಮೈಮೇಲೆ ಬಂದ. ಸಿಟ್ಟು ಬೆಂಕಿಯಾಗಿದ್ದ!

ಅವನನ್ನು ನೋಡಿ ನನ್ನ ಕರುಣೆಯು ಉಕ್ಕಿ ಬಂದಿತು!

---




'ನಾತರ್‌ದಾಮ್' ದೇವಾಲಯದ ಶಿಖರದ
ಮೇಲಿನ ಮೂರ್ತಿ

( ಪುಟ ೩೩ )

## ೭

. . . . . .

ಆಕ್ಸಫರ್ಡ್

೧೦—೧೧—೩೬

ಸಪ್ಟಂಬರ್ ೨೫ನೆ ತಾರೀಖಿನ ಮುಂಜಾನೆ ನಾವು ಮಾರ್ಸೆಲ್ ಬಂದರಕ್ಕೆ ತಲುಪಿದೆವು. ಒಂದು ಗುಡ್ಡದ ಕೆಳಗೆ ಬಂದರವಿದೆ. ಒಂದು ಟ್ಯಾಕ್ಸಿ ಮಾಡಿಕೊಂಡು ಪಟ್ಟಣವನ್ನೆಲ್ಲ ಸುತ್ತಾಡಿದೆವು. ಒಂದು ದೊಡ್ಡ Cathedral (ಕ್ಯಾಥಿಡ್ರಲ್) ಎಂದರೆ ಕ್ರಿಸ್ತದೇವಾಲಯವಿದೆ. ತಲೆಯೆತ್ತಿ ಅದರ ಗುಮ್ಮಟವನ್ನು ನೋಡಬೇಕು! ಒಂದು ಸಲ ಮೆಲ್ಲನೆ ಕೂಗಿದರೆ ಆರೇಳುಸಲ ಪ್ರತಿಧ್ವನಿಯಾಗುವದು. ಕಾಜುಗಳ ಮೇಲೆ ಬಣ್ಣ ಬಣ್ಣದ ಚಿತ್ರಗಳನ್ನು ಬರೆದಿದ್ದಾರೆ,– ಕ್ರಿಸ್ತ ಪುರಾಣದಿಂದ. ಇದು ಬಹುಶಃ ಮಧ್ಯಯುಗದ ಕಟ್ಟಡವಿರಬೇಕು. ಇಂಥ ಇನ್ನೊಂದು ಕಟ್ಟಡವೂ ಕಣ್ಣಿಗೆ ಬಿತ್ತು. ಆದರೆ ಅದು ಗ್ರೀಕ್ ವಾಸ್ತು ಶಿಲ್ಪದ ಮಾದರಿಯೆಂದು ತೋರುತ್ತದೆ. ಅನಂತರ 'ಸೀಜರ'ನ ಪ್ರತಿಮೆಯಿದ್ದ ತೋಟಕ್ಕೆ ಹೋದೆವು. (ಇಲ್ಲೆಲ್ಲ 'ಹೋದೆವು' ಎಂದರೆ ನಾವು ನಾಲ್ಕೈದು ಗೆಳೆಯರು ಎಂದರ್ಥ). ಅಲ್ಲಿ ಐದು ನಿಮಿಷದಲ್ಲಿ ಒಬ್ಬನು ನಮ್ಮ ಫೋಟೋ ತಗೆದುಕೊಟ್ಟ! ಆ ಮೇಲೆ ಇಲ್ಲಿಯ ತಿರುಪತಿ ಗಿರಿ-ರಾಮೇಶ್ವರದಷ್ಟು ಪವಿತ್ರವಾದ 'ನಾತರ್ ದಾಮ್' ಎಂಬ ಪ್ರಸಿದ್ಧ ದೇವಾಲಯವನ್ನು ನೋಡಿದೆವು.

ಊಟದ ಹೊತ್ತಾದದ್ದರಿಂದ ಹೋಟೆಲ್ಲನ್ನು ಹುಡುಕುತ್ತ ತಿರುಗಾಡಿದೆವು. ಫ್ರೆಂಚ್ ಭಾಷೆಯು ಬರದ ಮೂಲಕ ತ್ರಾಸಾಯಿತು. ಕೊನೆಗೆ ಗಟ್ಟಿಧೈರ್ಯಮಾಡಿ ಒಂದು ಹೋಟೆಲ್ಲನ್ನು ಪ್ರವೇಶಿಸಿದೆವು. ಅದರ ಮಾಲಿಕಳಾದ ಹೆಣ್ಣುಮಗಳೊಡನೆ ನಾನು ಇಂಗ್ಲಿಷಿನಲ್ಲಿ ಮಾತ ನಾಡಲು ಪ್ರಾರಂಭಿಸಿದೆ. ಆಕೆಯು 'ಆಂಗ್ಲ! ಆಂಗ್ಲ!' ಎಂದು ಏನೇನೋ ಅಂದು ನಕ್ಕು ಒಂದು ಕಡೆಗೆ ಬೊಟ್ಟುಮಾಡಿ ತೋರಿಸಿದಳು.

ಅಲ್ಲಿ ಅನೇಕರು ಊಟಕ್ಕೆ ಕೂತಿದ್ದರು. ಎಲ್ಲರ ಟೊಪ್ಪಿಗೆಯನ್ನು ಇಸಿದುಕೊಳ್ಳಲು ಬಾಗಿಲಲ್ಲಿ ಒಬ್ಬ ಹೆಣ್ಣುಮಗಳನ್ನು ನಿಲ್ಲಿಸಿರುತ್ತಾರೆ. ಇದಾವುದೂ ನಮಗೆ ಗೊತ್ತಿರಲಿಲ್ಲ. ನೆಟ್ಟಗೆ ಮುಂದೆ ಸಾಗಿದೊಡನೆ "ಮುಸ್ಯೂ! ಮುಸ್ಯೂ!" ಎಂದು ಹೆಣ್ಣುಮಗಳು ಜೀವ ಹೋಗುವ ಹಾಗೆ ಒದರಿಕೊಂಡಳು! ಇದರ ಉಸಾಬರಿಯೇ ಬೇಡವೆಂದು ಅಲ್ಲಿಂದ ಹೊರಟು ಒಂದು ಚಹದಂಗಡಿಗೆ ಹೋಗಿ 'ಬ್ರೆಡ್-ಚಹ'ದ ಮೇಲೆ ಮಧ್ಯಾಹ್ನದ ಊಟವನ್ನು ಮುಗಿಸಿದೆವು.

ಸ್ಟೇಶನ್ನಿನಲ್ಲಿ ಸಂಜೆಯ ಕಡೆಗೆ ಆಲ್ಗಿಯರ್ಸ್ ಪಟ್ಟಣದ ಒಬ್ಬ ಮುಸಲ್ಮಾನನು ಭೆಟ್ಟಿಯಾದ. ಅವನು ಗಾಂಧಿಯವರ ವಿಷಯಕ್ಕೆ ಅನೇಕ ಪ್ರಶ್ನೆಗಳನ್ನು ಕೇಳಿದನು! ಇಲ್ಲಿಯ 'ಕುಕ್' ಕಂಪನಿಯ ಏಜಂಟನನ್ನು ನೋಡಿ ನನಗೆ ವಿಂಕಾವಬರನ ನೆನಪಾಯಿತು. ಅವನ ಗಡಿಬಿಡಿ, ಮಾತಿನ ರೀತಿ, ಸುಳ್ಳು ವಿನಯ ಇತ್ಯಾದಿ. ಸಂಜೆಗೆ ಮಾರ್ಸೆಲ್ ಪಟ್ಟಣವನ್ನು ಬಿಟ್ಟ ಗಾಡಿಯು ಮುಂಜಾನೆ ನಮ್ಮನ್ನು ಪ್ಯಾರಿಸಕ್ಕೆ ಒಯ್ದು ಮುಟ್ಟಿಸಿತು. ಒಂದಿಬ್ಬರು ಭಾರತೀಯ ಮಹಿಳೆಯರು ಇದೇ ಗಾಡಿಯಿಂದ ಇಳಿದರು. ಅವರನ್ನು ನೋಡಲು ಇಡಿಯ ನಿಲ್ಮನೆಯೇ ತಿರುಗಿ ನಿಂತಿತು!

ಇನ್ನು ಮುಂದೆ ಪ್ಯಾರಿಸ್‌ದಿಂದ ಬೋಲೋನಿಗೆ ಹೋಗುವ ಗಾಡಿಯನ್ನು ಹತ್ತಬೇಕು. ವೇಟಿಂಗ್ ರೂಮಿನಲ್ಲಿ ಕುಳಿತುಕೊಂಡಿದ್ದೆ. ಅಲ್ಲಿ ಒಬ್ಬ ಝೆಕೊಸ್ಲೊವ್ಹೇಕಿಯನ್ ಗೃಹಸ್ಥನು ತನ್ನ ಹೆಂಡತಿ ಹಾಗು ಮೂವರು ಮಕ್ಕಳನ್ನು ಕರೆದುಕೊಂಡು ಬಂದ. ಮನೆ-ಮಾರನ್ನೆಲ್ಲ ಕಿತ್ತು ಕೊಂಡು ಅವನು ಹೊರಟಿದ್ದ. ನಮ್ಮನ್ನು ನೋಡಿ ಮಾತನಾಡಿಸಬೇಕೆಂಬ ಲವಲವಿಕೆಯು ಅವನಲ್ಲಿ ಉತ್ಪನ್ನವಾಯಿತು. "Are you an Indian?" (ನೀವು ಹಿಂದುಸ್ಥಾನದವರೇ?) ಎಂದು ಅಕಸ್ಮಾತ್ತಾಗಿ ಅವನು ನನ್ನನ್ನು ಕೇಳಿದ. ನಮ್ಮಲ್ಲಿ ಇನ್ನೊಬ್ಬರನ್ನು ಮಾತನಾಡಿಸಿದ್ದರೆ ಮುಂದೆ ನಾನು ಹೇಳುವ ಚಮತ್ಕಾರವೇ ಒದಗಿ ಬರುತ್ತಿರಲಿಲ್ಲ. ಹೌದೆಂದು ನಾನು ಉತ್ತರ ಕೊಟ್ಟೆ.

"I have escaped from death" ( ನಾನು ಸಾವಿನ ಕೈಯಿಂದ ಪಾರಾಗಿರುವೆ ) ಎಂದು ಅವನು ಉದ್ಗಾರ ತೆಗೆದ. ಅಂಜಿಕೆಯ ಕುರುಹು ಇನ್ನೂ ಅವನ ಕಣ್ಣುಗಳಲ್ಲಿತ್ತು. ಕುತ್ತಿನಿಂದ ಪಾರಾಗಿ ಪುನರ್ಜನ್ಮವನ್ನು ಪಡೆದವರಂತೆ ಅವನ ಮುಖಚಿಹ್ನೆಯಿತ್ತು. ಸ್ಪೇನ್ ಸರಕಾರದ ಸೇವಕನಾತ. ಬಂಡಾಯದಲ್ಲಿ ಅಲ್ಲೋಲ-ಕಲ್ಲೋಲವಾಯಿತು. ಅವನಿರುವ ಬಿಲ್‌ಬಾವೊ (Bilbao) ಪಟ್ಟಣದ ಮೇಲೆ ವಿಮಾನದಿಂದ ಗುಂಡು ಮಳೆಗರೆಯಬೇಕೆಂದು ಬಂಡುಗಾರರು ಗೊತ್ತುಮಾಡಿದರು. ಆಗ ಸರಕಾರವು ತನ್ನ ನೌಕರರನ್ನು ಅಲ್ಲಿಂದ ಬಿಡಿಸಿ ಕಳಿಸಿತು. ಈತನಿಗೆ ಜರ್ಮನಿಗೆ ಹೋಗಲು ಅಪ್ಪಣೆಯಾಗಿತ್ತು. ಆ ರೀತಿಯಾಗಿ ಮನೆ-ಮಾರನ್ನೆಲ್ಲ ಬಿಟ್ಟು ಜರ್ಮನಿಗೆ ಹೊರಟಿದ್ದೇನೆಂದು ಹೇಳಿದ. ಅವನಿಗೆ ಸಾಧಾರಣವಾಗಿ ಇಂಗ್ಲಿಷು ಬರುತ್ತಿತ್ತು. ಫ್ರಾನ್ಸಿಸ್ ಮಾಕ್ರಿ(Francis Mokry ) ಎಂದು ತನ್ನ ಹೆಸರನ್ನು ಹೇಳಿದ. "Do you know Mr. Karant?" (ನಿಮಗೆ ಕಾರಂತರು ಗೊತ್ತೇ?) ಎಂದು ಪ್ರಶ್ನೆ ಮಾಡಿದ.

ನನಗೆ ಮೈಯ್ಯೆಲ್ಲ ರೋಮಾಂಚವೆದ್ದಿತು! ಶಿವರಾಮ ಕಾರಂತರ ವಿಷಯ ಮಾಕ್ರಿಗೇನು ಗೊತ್ತು? ಆದರೆ ಕಾರಂತರು ನಾರದರು-ತ್ರಿಭುವನ ಸಂಚಾರಿಗಳು-ಕಾರಂತರವರು! ಅವರು ನನ್ನ ಸ್ನೇಹಿತರೆಂದು ನಾನು ಆಶ್ಚರ್ಯದಿಂದ ಉತ್ತರ ಕೊಟ್ಟೆ.

ಮಾಕ್ರಿ ಹಿಂದುಸ್ಥಾನಕ್ಕೆ ಬಂದಿದ್ದನಂತೆ. ಮುಂಬಯಿಯಲ್ಲಿ ಕಾರಂತರ ಭೆಟ್ಟಿಯಾಯಿತಂತೆ. ಜರ್ಮನಿಯಲ್ಲಿ ಸಿನೇಮಾ ಸ್ಟೂಡಿಯೋದವರೊಡನೆ ತಮ್ಮ ಗುರುತು ಮಾಡಿಕೊಡಬೇಕೆಂದು-ದೃಢ ಸ್ನೇಹವಾದ ನಂತರ-ಕಾರಂತರು ಅವನಿಗೆ ಕೇಳಿದರಂತೆ. ಅವನೂ ಇನ್ನೂ ಜರ್ಮನಿಯಲ್ಲಿಯ ಸಿನೇಮಾ ಮಾಲಿಕರೊಡನೆ ಪತ್ರವ್ಯವಹಾರ ನಡೆಸಿದ್ದ. ಇನ್ನು ಮೇಲಾದರೂ ಸಾಧಿಸಲು ಪ್ರಯತ್ನಿಸುವೆನೆಂದು ಹೇಳಿದ. ಕಾರಂತರ ಪರಿಚಯವಿದ್ದ ಗೃಹಸ್ಥನೆಂದು ನನ್ನ ಪರಿಚಯವನ್ನು ತನ್ನ ಪತ್ನಿಗೆ ಮಾಡಿಕೊಟ್ಟ! ಪತ್ರಬರೆಯುವೆನೆಂದು ಹೇಳಿದ. ಗಾಡಿಯು ಬಿಡುವ

ಹೊತ್ತಾದ್ದರಿಂದ ಆವನು ಜರ್ಮನಿಗೆ ನಡೆದ. ನಾವು ಇತ್ತ ಬೋಲೊನ್ (Bouglone) ಪಟ್ಟಣಕ್ಕೆ ಹೋಗುವ ಗಾಡಿಯಲ್ಲಿ ಕೂತು ಮುಂದೆ ನಡೆದೆವು! ಇದೆಂಥ ವಿಚಿತ್ರ!

ಹಾದಿಯಲ್ಲೆಲ್ಲ ಫ್ರಾನ್ಸ ದೇಶದ ಚೆಲುವು ಹೃದಯವನ್ನು ತೆರೆದು ನಿಂತಿದೆ. (ಇಂಗ್ಲೆಂಡಿಗಿಂತ ಮಿಗಿಲಾದ ಹಳ್ಳಿಗಾಡಿನ ಸೌಂದರ್ಯವು ಇಲ್ಲಿದೆ.) ಸೀಳು ದಾರಿಯಂತಿರುವ ಉತ್ತಮ ರಸ್ತೆ–ಎಡಬದಿಗೆ ಹಚ್ಚನ್ನ ಹೊಲ, ಹೂದೋಟ-ಅಡವಿ, ನದಿ, ಭೂಲೋಕದ ನಂದನವನವೆನಿಸು ತ್ತಿದೆ ಫ್ರಾನ್ಸು!

---

೮

......

ಆಕ್ಸಫರ್ಡ್
೧೬—೧೧—೩೬

ಬೋಲೋನಿಗೆ ಒಂದು ಮುಟ್ಟಿದ ವಿಷಯವನ್ನು ಬರೆದಿದ್ದೆನಷ್ಟೆ? ಅಲ್ಲಿಂದ ಸಣ್ಣ ಉಗಿದೋಣಿಯಲ್ಲಿ ಬ್ರಿಟಿಶ್ ಚ್ಯಾನೆಲನ್ನು ದಾಟಿದೆವು; ದಾಟಿ ಫೋಕ್‌ಸ್ಟೋನ್ ಎಂಬ ಬ್ರಿಟಿಶ್ ಬಂದರಕ್ಕೆ ಬಂದಿಳಿದೆವು. ಈಗ ಗಾಡಿಗೆ ಗಾಡಿಯೇ ಲಂಡನ್ನಿನಿಂದ ಪ್ಯಾರಿಸಕ್ಕೆ ನೀರೊಳಗಿಂದ ಸಹ ಹೋಗುವ ಹಾಗೆ ಮಾಡಿದ್ದಾರೆ! ಮಲಗಿಕೊಂಡು ಸಹ ಪ್ಯಾರಿಸದವರೆಗೆ ಹೋಗಬಹುದು. ಬದಲಾಯಿಸುವ ಕಾರಣವಿಲ್ಲ!

ಕಾಲೇಜಿನಲ್ಲಿ ಹೋದ ಟರ್ಮಿನ ನಾನು 'Kipps' (ಕಿಪ್ಸ) ಎಂಬ ಕಾದಂಬರಿಯನ್ನು ಕಲಿಸುತ್ತಿದ್ದೆ. ಆದರಲ್ಲಿ ಮುಖ್ಯವಾಗಿ ಫೋಕ್ ಸ್ಟೋನ್ ಬಂದರದ ವರ್ಣನೆಯಿದೆ. ಆ ದೃಶ್ಯವೆಲ್ಲ ಕಣ್ಣೆದುರು ಬಂದಿತು. ಆಂಗ್ಲಭೂಮಿಯ ಮೇಲೆ ನಾನು ಮೊದಲು ಆಡಿಯಿಟ್ಟದ್ದೆಂದರೆ

ಅಲ್ಲಿಯೇ ! ಫೋಕ್‌ಸ್ಟೋನದಿಂದ ಲಂಡನ್ನಿನವರೆಗೆ ಸುಂದರವಾದ ಹಳ್ಳಿ ಗಾಡು ಸೀಮೆಯ ನಡುವೆ ಗಾಡಿಯು ಹಾಯ್ದು ಹೋಗುತ್ತದೆ. ಅಲ್ಲಲ್ಲಿ ಕುರಿಗಳಿಂದ ಚಿಕ್ಕೆಚಿಕ್ಕೆಯಾದ ಹಚ್ಚಹಸಿರು ಹೊಲಗಳು, ಸೀಳು ದಾರಿಯಂತೆ ಕಂಡರೂ ಮೋಟರುಗಳಿಗೆ ಅತ್ಯನುಕೂಲವಾದ ಟಾರ್ ರಸ್ತೆಗಳು, ಕಟ್ಟಡವಿಗಳು, ನದಿಗಳು, ನದಿಯನ್ನೇ ಮುಚ್ಚುವಂತೆ ಸಾಗಿದ ವ್ಯಾಪಾರದ ದೋಣಿಗಳು, ಎಲ್ಲವೂ ಅಂದವಾಗಿತ್ತು. ಅಲ್ಲಿಂದ ವ್ಹಿಕ್ಟೋರಿಯಾ ಸ್ಟೇಶನ್ನಿಗೆ ಗಾಡಿ ಹೋಯಿತು. ಬಂದ ಗೆಳೆಯರೊಡನೆ ನನಗಾಗಿ ಕಾದಿಟ್ಟ ಸ್ಥಳಕ್ಕೆ ಹೋದೆ. ಅಲ್ಲಿಂದ ಊಟ ಮುಗಿಸಿಕೊಂಡು 'ಹ್ಯಾಂಪ್‌ಸ್ಟೆಡ್‌ಹೀತ್' ಮುಂತಾದ ಪ್ರಸಿದ್ಧ ಸ್ಥಳಗಳಲ್ಲಿ ತಿರುಗಾಡಿದೆವು. ಹ್ಯಾಂಪ್‌ಸ್ಟೆಡ್‌ದ ಆಕಾಶದಲ್ಲಿ ಶರತ್ಕಾಲದ ಚಂದ್ರನು ಥಳಥಳಿಸುತ್ತಿದ್ದ. ನಾವು ಚಳಿ ಹತ್ತಿ ನಡುಗುತ್ತಿದ್ದೆವು !

ಲಂಡನ್ ಪಟ್ಟಣವೆಂದರೆ ಒಂದು ಸ್ವತಂತ್ರ ಜಗತ್ತು. ಇಲ್ಲಿಯ ರಸ್ತೆಗಳಲ್ಲಿ ವ್ಯಾಪಾರವು ತುಂಬಿ ಟ್ರ್ಯಾಮ್ ಬಸ್ಸುಗಳಿಗೆ ಸಕಾಲಕ್ಕೆ ಹೋಗುವದಾಗುವದಿಲ್ಲ; ಬಹಳ ಹೊತ್ತು ನಡುನಡುವೆ ನಿಲ್ಲಬೇಕಾಗುತ್ತದೆ. ಇದನ್ನು ತಪ್ಪಿಸುವದಕ್ಕಾಗಿ ಭೂಗರ್ಭದಲ್ಲಿ ಗಾಡಿಯನ್ನು ಒಯ್ದಿದ್ದಾರೆ! ಹಳಿ, ಇಲೆಕ್ಟ್ರಿಕ್‌ಗಾಡಿ, ನಿಲ್ಮನೆ, ಎಲ್ಲ ಒಳಗೆ ! ಒಮ್ಮೊಮ್ಮೆ ನೆಲದ ಕೆಳಗೆ ಐವತ್ತು ಫೂಟು ಹೋಗಿರುತ್ತೇವೆ ! ಜೋರಾಗಿ ಗಾಳಿ ಬೀಸುವಷ್ಟು ಹವೆಯಾಡುವಂತೆ ಇಲ್ಲಿ ವ್ಯವಸ್ಥೆಯನ್ನು ಮಾಡಿದ್ದಾರೆ. ನಿಮಿಷಕ್ಕೊಂದರಂತೆ ಕತ್ತಲು ಗವಿಗಳೊಳಗಿಂದ ಹಾಯ್ದು ಗಾಡಿಗಳು ಧಡಧಡ ಹೋಗುತ್ತಿರುತ್ತವೆ ! ವಿಚಿತ್ರಸೃಷ್ಟಿ !

ಇಷ್ಟು ಕೆಳಗೆ ಹಗಲೆಲ್ಲ ಹತ್ತಿ ಇಳಿಯುವದು ಹೇಗೆ ? ಅದಕ್ಕಾಗಿ 'Escalators' (ಎಸ್ಕಲೇಟರ್ಸ್) ಎಂಬ ಮೆಟ್ಟಲುಗಳನ್ನು ಮಾಡಿದ್ದಾರೆ. ಇವು ಒಂದೇ ಸಮನೆ ತಿರುಗುತ್ತಿರುತ್ತವೆ. ಒಂದು ಮೆಟ್ಟಲಿನ ಮೇಲೆ ಹೋಗಿ ನಿಂತರೆ ತೀರಿತು; ಅನಾಯಾಸವಾಗಿ ಮೇಲೆ ಇಲ್ಲವೆ ಕೆಳಗೊಯ್ದು ಬಿಡುತ್ತವೆ !

ಪೇಟೆಯಲ್ಲಿ ತಿರುಗಾಡಿದೆ. 'ವೂಲವರ್ಥ' ಎಂಬ 'ಸ್ಟೋರ್ಸ' ಅಂಗಡಿಯು ನೋಡುವ ಹಾಗಿದೆ. ಎಲ್ಲ ತರಹದ ಸಾಮಾನುಗಳನ್ನು ಇಲ್ಲಿ ಒಂದು ಪೆನಿಯಿಂದ ಆರು ಪೆನಿಯವರೆಗೆ ಮಾರುತ್ತಾರೆ. ಈ ಅಂಗಡಿಯ ವಿಧವಿಧದ ವಿಭಾಗಗಳನ್ನು ನಿರ್ಮಿಸಿದ ಬುದ್ಧಿಯ ಚಮತ್ಕಾರವು ನೋಡತಕ್ಕಂತಹದು. ಪ್ರಾಚೀನ ಮಹಾಕಾವ್ಯದಂತೆ ಇದೊಂದು ಮಹಾಕೋಶವಾಗಿದೆ: ಬೂಟು, ಕಾಲಚೀಲ, ಚಣ್ಣ, ಸಾಬಾಸು, ಔಷಧ, ಪುಸ್ತಕ, ಅಡಿಗೆಯ ಪಾತ್ರೆ, ಇಲೆಕ್ಟ್ರಿಕ್ ದೀಪದ ಸಾಮಾನು, ಫೋಟೊ, ಹಜಾಮತಿಯ ಸಾಧನ, ಆಡವಿಯ ಹೂವು, ಯುದ್ಧದ ಸಾಮಗ್ರಿ, ಎಲ್ಲವೂ ಇಲ್ಲಿ ದೊರೆಯುತ್ತವೆ!

ಸ್ಟ್ರ್ಯಾಂಡ್‌ದಲ್ಲಿಯ ಸ್ಯಾವ್ಹೋಯ್ ಸಿಂಪಿಗರು ಇಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾರೆ. ಇಲ್ಲಿಯ ಒಂದು ಸಾದಾ ಸೂಟು ಹೊಲಿಸಬೇಕಾದರೂ ಸುಮಾರು ನೂರು ರೂಪಾಯಿ ಬೇಕು! ಆದರೆ "Fifty shillings Tailors" (ಐವತ್ತು ಸಿಲಿಂಗಿನ ಸಿಂಪಿಗಳು) ಎಂಬ ಒಂದು ಸಂಸ್ಥೆಯ ಶಾಖೆಗಳೂ ಎಲ್ಲ ಕಡೆಗೆ ಇವೆ!

ಇಲ್ಲಿಯ ಪೋರ್ಟರರು ಕೂಡ ಒಲು 'ಪೋಕ್ತಾ'ಗಿರುತ್ತಾರೆ. ಯಾರು ಆಳುಗಳೆಂಬುದು ಗೊತ್ತೇ ಆಗುವದಿಲ್ಲ! ಅಂತೇ ಹಿಂದುಸ್ತಾನದ ಹಾಯ್ ಕಮಿಶನರನ ಕಚೇರಿಯಲ್ಲಿಯ ಸಿಪಾಯಿಗಳನ್ನು ಕೂಡ ನಮ್ಮ ಕಡೆಯ ವಿದ್ಯಾರ್ಥಿಗಳು ಒಮ್ಮೊಮ್ಮೆ 'ಸರ್' ಎಂದು ಸಂಬೋಧಿಸುತ್ತಾರೆ. ಇದನ್ನು ನೆನೆದಾಗ ಕರ್ನಾಟಕ ಕಾಲೇಜಿನ ಒಂದು ವಿನೋದವು ನೆನಪಾಗುತ್ತದೆ. ಒಬ್ಬ ವಿದ್ಯಾರ್ಥಿಯು ಪ್ರಿನ್ಸಿಪಾಲರ ಕಡೆಗೆ ಹೋಗಿದ್ದ. ಅವರು ಮನೆಯಲ್ಲಿಲ್ಲವೆಂದು ಹೇಳಲು ಅವರ ಪತ್ನಿಯವರು ಹೊರಗೆ ಬಂದರು. "Good Morning, Sir" (ಗುಡ್‌ಮಾರ್ನಿಂಗ, ಸರ್) ಎಂದು ಅವನು ಅವರಿಗೆ ಶರಣು ಹೊಡೆದನಂತೆ!

ಇಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚಿದ್ದ ಹಾಗೆ ಕಾಣುತ್ತದೆ. ಎಲ್ಲ ಅಂಗಡಿಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರೇ ಕೆಲಸ ಮಾಡುತ್ತಾರೆ. ಉಪಹಾರಗೃಹಗಳಲ್ಲಿ ಇಲ್ಲಿ 'ಮಾಣಿ'ಗಳಿಲ್ಲ; ಬೆಂಗಳೂರಿನ ಮಾತಿನಲ್ಲಿ

ಹೇಳುವದಾದರೆ "ಅಮ್ಮಣ್ಣಿ"ಗಳಿರುತ್ತಾರೆ; ಯಾವುದಾದರೊಂದು ದೊಡ್ಡ ಅಂಗಡಿಗೆ ಹೋದರೆ ಅಲ್ಲಿಯ ಟೈಪಿಸ್ಟ್ ಕಾರಕೂನ, ಒಬ್ಬ ಹೆಣ್ಣುಮಗಳು. ಸಿನೇಮಾಗೃಹದಲ್ಲಿ ನಿಮ್ಮ ಜಾಗವನ್ನು ಹುಡುಕಿ ಕೊಡುವವರು ಹೆಣ್ಣು! ನಮ್ಮ ಕಾಲೇಜಿನಲ್ಲಿ ಸಹ ವಿದ್ಯಾರ್ಥಿನಿಯರ ಅನುಕೂಲಕ್ಕಾಗಿ ಸಿಪಾಯಿಣಿಯರನ್ನಿಟ್ಟಿದ್ದಾರೆ! 'ಹೆಣ್ಣುಮಕ್ಕಳನ್ನು ಅತ್ಯಾದರದಿಂದ ನಡೆಯಿಸಿಕೊಳ್ಳುವ ಸಂಸ್ಕೃತಿಯ ಶಿಖರವನ್ನು ಇಂಗ್ಲಂಡದಲ್ಲಿಯೇ ಕಾಣಬೇಕೆಂದು ಆಂಗ್ಲರ ಮತ. ಇದೀಗ ಹೆಣ್ಣನ್ನು ಸತ್ಕರಿಸುವ ರೀತಿಯಿದು. ಅವರನ್ನು ಪೋಲೀಸ್ ಹಾಗು ಬಸ್ ಡ್ರೈವ್ಹರ್ ಮಾಡುವದೊಂದು ಉಳಿದಿದೆ!

ಇಲ್ಲಿಯ ಇಂಡಿಯಾ ಆಫೀಸು ನೋಡುವ ಹಾಗಿದೆ; ವಾಚನಾಲಯದಲ್ಲಿ ಅನೇಕ ಮಹತ್ವದ ಪುಸ್ತಕಗಳಿವೆ; ಕರ್ನಾಟಕದ ವಿಷಯವಾಗಿ ಎಷ್ಟೋ ಹೊಸ ಮಾತುಗಳು ಇಲ್ಲಿ ಗೊತ್ತಾಗಬಹುದೆಂದು ಕಾಣುತ್ತದೆ. ಇಲ್ಲಿಯ ವಸ್ತುಸಂಗ್ರಹಾಲಯದಲ್ಲಿ ಹಿಂದುಸ್ತಾನದ ಲಲಿತ ಕಲೆಯ ಹಾಗು ಇನ್ನುಳಿದ ಮಾರ್ಗಗಳ ಮಾದರಿಗಳು ನೋಡಲು ದೊರೆಯುತ್ತವೆ. ಎಲ್ಲ ಮುಖ್ಯ ಇಂಗ್ಲಿಷ್ ವರ್ತಮಾನ ಪತ್ರಗಳು ಬರುತ್ತವೆ (ಹಿಂದುಸ್ತಾನದಲ್ಲಿ ಪ್ರಕಟವಾಗುವಂಥವು). ಈ ಕಚೇರಿಯಿದ್ದ 'ಚೇರಿಂಗ್ ಕ್ರಾಸ್' ಎಂಬ ಓಣಿಯಲ್ಲಿ ಆಂಗ್ಲರ ಸಾಮ್ರಾಜ್ಯವೈಭವವು ಕಂಡು ಬರುವದು! ಇಂಡಿಯಾ ಆಫೀಸಿನ ಹತ್ತಿರ ಆಫ್ರಿಕನ್ ಕಚೇರಿ, ಇನ್ನೊಂದು ವಸಾಹತಿನ ಕಚೇರಿ—ನೂರೆಂಟು ಬ್ಯಾಂಕುಗಳು—ಪಿ. ಎಂಡ್. ಓ. ಮುಂತಾದ ದೊಡ್ಡ ಕಂಪನಿಗಳ ಕಚೇರಿಗಳು, ಎಲ್ಲವೂ ದಂಗುಬಡಿಸುವಂತೆ ನೆರೆದಿವೆ! ಒಂದೊಂದು ದೇಶದ ಮೇಲಿನ ಪ್ರಭುತ್ವವು ಇಲ್ಲಿಯ ಒಂದೊಂದು ಕಚೇರಿಯಿಂದ ನಡೆಯುತ್ತಿದೆ! ಈ ದೊಡ್ಡ ಬೀದಿಯು ಸಾಮ್ರಾಜ್ಯದ ಬೀದಿ.

ನಗರದ ಪ್ರತಿಯೊಂದು ಕೂಟಕ್ಕೆ ಒಂದು ಹೆಸರೇನಾದರೂ ಇದ್ದೇ ಇರುತ್ತದೆ. 'Trafalgar Square' (ಟ್ರಾಫಲ್ಗಾರ ಸ್ಕ್ವೇರ) ಎಂಬಲ್ಲಿ ನೆಲ್ಸನ್ನನ ಮೂರ್ತಿಯಿದೆ. ಈ ಶಿಲಾಮೂರ್ತಿಯ ಕೆಳಬದಿಗೆ ಅವನ

ಜೀವನದಲ್ಲಿಯ ಮಹತ್ವದ ಸನ್ನಿವೇಶಗಳನ್ನು ಕಲ್ಲಿನಲ್ಲಿ ಅರಳಿಸಿದ್ದಾರೆ. ಇಲ್ಲಿಂದ ತುಸು ದೂರಕ್ಕೆ ವೆಲಿಂಗ್ಟನ್ನನ ಶಿಲಾಪ್ರತಿಮೆ. ಬೀದಿ-ಬೀದಿಗೆ ಮೂಲೆ-ಮೂಲೆಗೆ ಇತಿಹಾಸ ಪ್ರಸಿದ್ಧ ಪುರುಷರು—ತಮ್ಮ ದೇಶಕ್ಕಾಗಿ ಜೀವವನ್ನು ಲೆಕ್ಕಿಸದೆ ದುಡಿದವರು ನಿಂತು ಕೈಯೆತ್ತಿ ಹೇಳುತ್ತಿರುವಂತೆ ತೋರುತ್ತದೆ : "ನಿಮ್ಮ ದೇಶದ ಗೌರವವನ್ನು ಕಾಯಿರಿ! ಇದು ದೊಡ್ಡದಾದ ರಾಷ್ಟ್ರ!" ಎಂದು. ಹೆಜ್ಜೆಹೆಜ್ಜೆಗೆ ಇತಿಹಾಸದ ಅಡಿಗಲ್ಲುಗಳು ದೊರೆಯುತ್ತವೆ.

ಬೀದಿಯಲ್ಲಿ ಲಕ್ಷಾನುಲಕ್ಷ ಜನರು ತಿರುಗಾಡುತ್ತಾರೆ, ಅವಸರದಿಂದ ಓಡುತ್ತಾರೆ. Time! Time! Time is money. (ಹೊತ್ತು! ಹೊತ್ತು! ಹೊತ್ತೇ ಹಣ) ಇದು ಅಕ್ಷರಶಃ ವಿಲಾಯತಿಯಲ್ಲಿ ನಿಜವಾಗಿದೆ. ಇಲ್ಲಿಯ ಹೆಣ್ಣುಮಕ್ಕಳ ಟೊಪ್ಪಿಗೆಯನ್ನು ಕುತೂಹಲದಿಂದ ನೋಡಿದೆ. ಒಂದು ಟೊಪ್ಪಿಗೆಯಂತೆ ಇನ್ನೊಂದಿರುವದಿಲ್ಲ! ಟೊಪ್ಪಿಗೆಯಲ್ಲಿ ಸಿಗಿಸಿದ ಪುಚ್ಛವಾದರೂ ಕನಿಷ್ಠ ಪಕ್ಷಕ್ಕೆ ಬೇರೆಯಾಗಿರುತ್ತದೆ! ಕೋಟ್ಯಾವಧಿ ಟೊಪ್ಪಿಗೆಗಳನ್ನು ಬೇಕಾದರೆ ಪರೀಕ್ಷಿಸಿ ಇದನ್ನು ಮನಗಾಣಬಹುದು. ಮನುಷ್ಯನಂತೆ ಟೊಪ್ಪಿಗೆಯಲ್ಲವೆ? ಒಬ್ಬ ಮನುಷ್ಯಳಂತೆ ಇನ್ನೊಬ್ಬಳಿಲ್ಲ!

ಮುಂದಿನ ಪತ್ರದಲ್ಲಿ 'ವ್ಹಾಯಿಟ್ ಹಾಲ'ದ ವಿಷಯವನ್ನು ಬರೆಯುತ್ತೇನೆ.

———

೬

. . . . . .

ಆಕ್ಸ್‌ಫರ್ಡ್

೨೩—೧೧—೩೬

ಹಿಂದಿನ ಪತ್ರದಲ್ಲಿ ಲಂಡನ್ನದಲ್ಲಿ ತಿರುಗಾಡಿದ ವಿಷಯವನ್ನು ತಿಳಿಸಿದ್ದೆ. ‘ಕ್ಯಾಮ್ಡನ್ ಟಾವುನ್’ ಎಂಬ ಭಾಗದಲ್ಲಿ Shearn's Vegetarian Restaurant (ಶಿಯರ್ನ್ಸ್ ವ್ಹೆಜಿಟೇರಿಯನ್ ರಿಸ್ಟಾರಂಟ) ಎಂಬ ಉಪಹಾರಗೃಹವಿದೆ. ಇಲ್ಲಿ ಎಲ್ಲ ತರಹದ ಶಾಕಾಹಾರವು ದೊರೆಯುತ್ತದೆ. ಆಂಗ್ಲರೀತಿಯಲ್ಲಿಯೇ ಅದನ್ನು ಸಿದ್ಧಪಡಿಸುತ್ತಾರೆ. ‘Chicken’ (ಚಿಕೆನ್) ಬದಲು ‘Mock Chicken’ (ಮಾಕ್ ಚಿಕೆನ್) ಮುಂತಾದ ಮಾದರಿಗಳನ್ನು ಇಟ್ಟಿದ್ದಾರೆ. ಇಲ್ಲಿಯ ಊಟದ ಪತ್ರಿಕೆಯನ್ನು ನೋಡಬೇಕು! ನೂರಾರು ಜಿನಸುಗಳ ಯಾದಿಯನ್ನು ಮಾಡಿ ಪ್ರತಿಯೊಂದು ಟೇಬಲ್ಲಿನ ಮೇಲೆ ಇಟ್ಟಿರುತ್ತಾರೆ. ಸಾವಿರಾರು ಜನ ಆಂಗ್ಲರು-ಗಂಡು ಹೆಣ್ಣು ಕೂಡಿ-ಇಲ್ಲಿ ಊಟ ಮಾಡಲು ಬರುತ್ತಾರೆ. ಊಟದ ಈ ವೈವಿಧ್ಯವನ್ನು ನೋಡಿ ಕುಮಾರವ್ಯಾಸ-ಲಕ್ಷ್ಮೀಶರ ವರ್ಣನೆಗಳ ನೆನಪಾಯಿತು ನನಗೆ. ಸಾಮ್ರಾಜ್ಯಶಾಲಿಗಳ ರಸಿಕತೆಯು ಊಟದಲ್ಲಿ ಸಹ ಹೇಗೆ ತೋರಿಬರುತ್ತಿದೆಯೆಂಬುದನ್ನು ಇಲ್ಲಿ ಕಣ್ಣಾರೆ ಕಾಣಬಹುದು.

ಇಲ್ಲಿಯ ವಾಸ್ತುಶಿಲ್ಪವು ಅಷ್ಟೊಂದು ಮನೋಹರವಾಗಿಲ್ಲ. ದೊಡ್ಡ ದೊಡ್ಡ ಕಟ್ಟಡಗಳೇನೋ ಇವೆ. ಆದರೆ ಅಲ್ಲಿ ಕೆತ್ತನೆಯ ಕುಸುರಿಲ್ಲ, ಮೂರ್ತಿಶಿಲ್ಪದ ಮಾಟದೊಡನೆ ಇಲ್ಲಿಯ ವಾಸ್ತುಶಿಲ್ಪವು ಕಂಗೊಳಿಸುವದಿಲ್ಲ. ಎರಡೂ ಬೇರೆಬೇರೆಯಾಗಿ ನಿಂತಿವೆ. ‘White-hall’ (ವ್ಹಾಯಿಟ್ ಹಾಲ)ದ ಜಾಗದಲ್ಲೆಲ್ಲ ತಿರುಗಾಡಿದೆ. Home office (ಹೋಮ್ ಆಫೀಸ್) Foreign office (ಫಾರೆನ್ ಆಫೀಸ್) ಮೊದಲಾದ ಕಚೇರಿಗಳ ಭವ್ಯಶಿಲಾಮಂದಿರಗಳು ಇಲ್ಲಿ ಕಿಕ್ಕಿರಿದು ನೆರೆದಿವೆ. ಇಲ್ಲಿಂದ ಜಗತ್ತಿನ ರಾಜನೀತಿಯ ಯಂತ್ರವೆಲ್ಲ ನಡೆಯುತ್ತದೆ! ಸ್ಕಾಟಲಂಡ್

ಯಾರ್ಡ ಎಂಬ ಪ್ರಸಿದ್ಧ ಪೋಲೀಸ್ ಕಚೇರಿಯ ಹತ್ತಿರ 'Horse Guards, (ಹಾರ್ಸಗಾರ್ಡ್ಸ: ಕುದುರೆ ಸವಾರರು) ಎಂಬ ಸಿಪಾಯಿಗಳು ಮಧ್ಯಯುಗದ ವೇಷದಲ್ಲಿ ಯಾವಾಗಲೂ ಕುದುರೆಯನ್ನೇರಿ ನಿಂತಿರುತ್ತಾರೆ! ಅವರ ಚಿತ್ರವಿಚಿತ್ರ ವೇಷವನ್ನು ನೋಡಲು ಇಲ್ಲಿಯ ಚಿಕ್ಕ ಮಕ್ಕಳೆಲ್ಲ ನೆರೆದಿರುತ್ತಾರೆ!

ಈ ಕಟ್ಟಡಗಳಿಂದ ತುಸು ದೂರಕ್ಕೆ 'Buckingham Palace' (ಬಕಿಂಗಹ್ಯಾಮ್ ಪ್ಯಾಲೇಸ್) ಎಂಬ ಪ್ರಸಿದ್ಧ ಸಮ್ರಾಟ್‌ನಿವಾಸವಿದೆ. ಹೊರಗೆ ನೋಡಲು ಇದೇನು ಅಂಥ ದೊಡ್ಡ ಕಟ್ಟಡವಾಗಿ ಕಾಣುವದಿಲ್ಲ. ಜಗತ್ತಿನಲ್ಲಿ ಎಲ್ಲರಿಗಿಂತ ಶ್ರೇಷ್ಠನಾದ ಸಮ್ರಾಟನು ಇಲ್ಲಿರುವನೇ ಎಂದು ಆಶ್ಚರ್ಯವಾಗುತ್ತದೆ! ಆದರೆ ಅರಮನೆಯೆದುರಿನ ರಾಜಮಾರ್ಗಗಳ ಕೂಟಕ್ಕೆ ಮಹಾದ್ವಾರಗಳಿವೆ. ಒಂದು 'ಇಂಡಿಯಾ ಗೇಟ್'; ಇನ್ನೊಂದು 'South African' (ಸಾವುಥ್ ಅಫ್ರಿಕನ್) ಗೇಟ್; ಮುಂತಾಗಿ. ಈ ದ್ವಾರಗಳಿಂದ ಹಾಯ್ದುಹೋಗುವಾಗ ಒಂದೊಂದು ಸಾಮ್ರಾಜ್ಯದೊಳಗಿಂದ ಹಾಯ್ದುಹೋದಂತೆ ಭಾಸವಾಗುತ್ತದೆ!

'ಡಾವುನಿಂಗ್ ಸ್ಟ್ರೀಟ್' ಎಂಬ ಪ್ರಸಿದ್ಧ ಓಣಿಯಲ್ಲಿ Number I0 (ಸಂಖ್ಯೆ ೧೦) ಹಾಗು Number 11 (ಸಂಖ್ಯೆ ೧೧) ಎಂಬ ಮನೆಗಳನ್ನು ನೋಡಿದೆ. ಇಲ್ಲಿ ಮುಖ್ಯ ಮಂತ್ರಿ ಹಾಗು Chancellor of the Exchequer (ಚ್ಯಾನ್ಸಲರ ಆಫ ದಿ ಎಕ್ಸಚೇಕರ) ಇವರು ಇರುತ್ತಾರೆ. ತೀರ ಸಾದಾ ಮನೆಗಳಿವು. ಬಹಳ ಹಳೆಯ ಕಟ್ಟಡಗಳಿರಬೇಕು, ಜೀಳ ಲಾಗಿವೆ! ನಾವು ಹೋದಾಗ ಚಾರ್ಲ್ಡ್ವಿನ್ನರ ಮನೆಯು ರಿಪೇರಿಯು ನಡೆದಿತ್ತು! ಇಂಥ ಸಾದಾ ಮನೆಯಲ್ಲಿ ನಿಂತುಕೊಂಡು ಮಹಾಮಂತ್ರಿಗಳು ಜಗತ್ತಿನ ರಾಜ್ಯಸೂತ್ರವನ್ನು ನಡೆಸುತ್ತಾರೆ! ವಿದ್ಯಾರಣ್ಯನೆಂಬ ಬಡ ಬ್ರಾಹ್ಮಣನು ವಿಜಯನಗರ ಸಾಮ್ರಾಜ್ಯದ ಸ್ಥಾಪಕನಾಗಿದ್ದನೆಂದರೆ ನಾವು ನಗುತ್ತೇವೆ!

ಇಲ್ಲಿಂದ 'ವೆಸ್ಟ್‌ಮಿನಿಸ್ಟರ್' ಸೇತುವೆಗೆ ಹೋದೆ. ಈ ಸೇತುವೆಯ ಒಂದು ತುದಿಗೆ ಹತ್ತಿ ಪಾರ್ಲಿಮೆಂಟು ನಿಂತಿದೆ! ನಾನು ಸೇತುವೆಗೆ

ಹೋದಾಗ ಮಧ್ಯಾಹ್ನವಾಗಿತ್ತು. ಸುದೈವದಿಂದ ಬಿಸಿಲಿತ್ತು. ವರ್ಡ್ಸ್‌ವರ್ಥ ಕವಿಯ ಸುನೀತೆಯು ನನಗೆ ನೆನಪಾಯಿತು! "And all that mighty heart is lying still!" (ಆ ದೊಡ್ಡ ಹೃದಯವೆಲ್ಲ ಸುಮ್ಮನೆ ಮಲಗಿರುವುದು) ಆದರೆ ನಾನು ನೋಡಿದಾಗ ಲಂಡನ್ನ ನಗರವು ಎದ್ದು ಧುಮುಕಾಡುತ್ತಿತ್ತು. ವರ್ಡ್ಸ್‌ವರ್ಥನು ಇಲ್ಲಿಂದ ಕಂಡ ಸೂರ್ಯೋದಯವು ಈಗ ಕಾಣಲಾರದೆಂದು ತೋರುತ್ತದೆ. ದೊಡ್ಡ ದೊಡ್ಡ ಕಟ್ಟಡಗಳು ನಡುವೆ ಬಂದು ಮುಗಿಲ ಮೇರೆಯನ್ನು ಮುಚ್ಚಿವೆ.

ನಾವು ಹೋದಾಗ ಪಾರ್ಲಿಮೆಂಟಿನ ಸಭಾಮಂದಿರವು ತೆರೆದಿರಲಿಲ್ಲ. ಕಟ್ಟಡದ ಸುತ್ತಲೂ ರಣಸಿಂಹ ರಿಚರ್ಡ್, ಕ್ರಾಮವೆಲ್ ಮೊದಲಾದವರ ಸುಂದರ ಪ್ರತಿಮೆಗಳಿವೆ. ಪ್ರವೇಶದ್ವಾರದ ಹತ್ತಿರ "London, thou art the flower of cities all" (ಲಂಡನ್ನೇ, ನೀನು ಎಲ್ಲ ನಗರಗಳ ನಡುವೆ ಹೂವಾಗಿರುವೆ) ಎಂಬ ಡನ್‌ಬಾರ ಕವಿಯ ಸಾಲನ್ನು ಬರೆದಿದ್ದಾರೆ. 'ವೆಸ್ಟ್ಮಿನಿಸ್ಟರ್ ಹಾಲಿ' ನಲ್ಲಿ ಮಾತ್ರ ನೋಡಲು ನಮ್ಮನ್ನು ಒಳಗೆ ಬಿಟ್ಟರು. ಹೆಜ್ಜೆ ಹೆಜ್ಜೆಗೂ ಇಲ್ಲಿ ಇತಿಹಾಸವು ಮೂಡಿದೆ. ಈ ಮಂದಿರದ 'ಓಕ್' ಕಟ್ಟಿಗೆಯ ಕಮಾನುಗಳು ಬಹಳ ಹಳೆಯ ಕಾಲದವು. ಇನ್ನೂವರೆಗೂ ಅಚ್ಚಳಿಯದೆ ಉಳಿದಿವೆ! ಒಂದು ವಿಶೇಷ ಪ್ರಕಾರದ ಗೆದ್ದಲಿಯು ಈ ಕಟ್ಟಿಗೆಗೆ ಹತ್ತಿತ್ತಂತೆ. ಆಗ ಅನೇಕ ವಿಜ್ಞಾನಿಗಳು ಕೂಡಿ ಅದನ್ನು ಸಂಹರಿಸುವ ಬಗೆಯನ್ನು ಕಂಡು ಹಿಡಿದರು. ಕೆಟ್ಟಿದ್ದ ಕಟ್ಟಿಗೆಯ ತುಂಡುಗಳನ್ನು ಜನರಿಗೆ ತೋರಿಸಲೆಂದು ಅಲ್ಲಿ ತೆಗೆದಿಟ್ಟಿದ್ದರು.

ಇಲ್ಲಿಯ ನೆಲದ ಪ್ರತಿಯೊಂದು ಗೇಣಿನಮೇಲೆ ಒಂದೊಂದು ಲೇಖವಿದೆಯೆಂದು ಹೇಳಬಹುದು. 'Earl of strafford' (ಅರ್ಲ ಆಫ ಸ್ಟ್ರಾಫೋರ್ಡ) ಎಂಬವನ ವಿಚಾರಣೆಯಾದಾಗ ಅವನು ಇಲ್ಲಿ ನಿಂತಿದ್ದ; ಮೊದಲನೆಯ ಚಾರ್ಲಸನ ವಿಚಾರಣೆಯಾದಾಗ ಅವನನ್ನು ಈ ಜಾಗದಲ್ಲಿ ನಿಲ್ಲಿಸಿದ್ದರು; ವಾರನ್ ಹೇಸ್ಟಿಂಗ್ಸನ ಪ್ರಕರಣವು ನಡೆದಾಗ ಅವನು

ಇಲ್ಲಿ ನಿಲ್ಲಬೇಕಾಗುತ್ತಿತ್ತು, ಮುಂತಾಗಿ ಲೇಖಗಳಿವೆ. ಇದನ್ನೆಲ್ಲ ನೋಡುವಾಗ ಇಲ್ಲಿಯ ಇತಿಹಾಸದ ಘನತೆಯು ಕಣ್ಣುಕಟ್ಟುತ್ತದೆ.

ಆ ಮೇಲೆ 'ವೆಸ್ಟ್ ಮಿನಿಸ್ಟರ್ ಅಬೆ' ಎಂಬ ಕ್ರಿಸ್ತ ಪ್ರಾರ್ಥನಾ ಮಂದಿರವನ್ನು ನೋಡಲು ಹೋದೆ. ಇದರ ವಿಷಯವನ್ನು ಮುಂದಿನ ಸಲ ಬರೆಯುತ್ತೇನೆ; ಆ ಮೇಲೆ ಹಿಂದಕ್ಕುಳಿದ ವಿಡನ್ನಿನ ವಿಷಯವನ್ನು.

---

## ೧೦

...... ಆಕ್ಸಫರ್ಡ್

೩೦—೧೧—೩೬

ಹಿಂದಿನ ಪತ್ರದಲ್ಲಿ 'ವೆಸ್ಟ್ ಮಿನಿಸ್ಟರ್ ಅಬೆ' ಎಂಬ ಪ್ರಾರ್ಥನಾ ಮಂದಿರದ ವಿಷಯವನ್ನು ಬರೆಯುವೆನೆಂದು ಹೇಳಿದೆನಷ್ಟೆ. ಕನಿಷ್ಠ ಒಂದು ಸಾವಿರ ವರ್ಷದಷ್ಟು ಪುರಾತನವಾದ ಮಂದಿರವಿದು. ಕೆಲವೊಂದು ಭಾಗಗಳ ದುರಸ್ತಿಯನ್ನು ಬಿಟ್ಟರೆ ಇಂದಿಗೂ ಅಚ್ಚಳಿಯದೆ ಉಳಿದಿದೆ. ಇಲ್ಲಿ, ಸತ್ತ ಸಾರ್ವಭೌಮರು ಮಲಗಿರುವರು; ಕವಿ ಪುಂಗವರು ಒರಗಿರುವರು. ಸತ್ತವರ ಸ್ಮಾರಕವೆಂದು ಇದಕ್ಕಿಂತ ಘನತರವಾದ ಮಂದಿರವು ಜಗತ್ತಿನಲ್ಲಿ ಇನ್ನೆಲ್ಲಿಯೂ ಇರಲಾರದು.

"Mortality behold and fear

What a litt'r of tombs is here" (ಮರ್ತ್ಯತ್ವವೆ, ಎಷ್ಟು ಗೋರಿ ಗುಂಪುಗಳು ಇಲ್ಲಿವೆ ನೋಡಿ ಅಂಜು) ಎಂದು ೩೦೦ ವರ್ಷಗಳ ಹಿಂದೆ ಬ್ಯೂಮಾಂಟ್ ಎಂಬ ಕವಿಯು ಹಾಡಿದನು. ಗೋಲ್ಡ್‌ಸ್ಮಿಥ್ ಹಾಗು ಎಡಿಸನ್ ಎಂಬ ಪ್ರಖ್ಯಾತ ಸಾಹಿತಿಗಳು 'A visit to westminister Abbey' (ವೆಸ್ಟಮಿನಿಸ್ಟರ ಅಬೆಯ ಸಂದರ್ಶನ) ಎಂಬ ವಿಷಯದ ಮೇಲೆ ಉತ್ತಮವಾದ ನಿಬಂಧಗಳನ್ನು ಬರೆದಿದ್ದಾರೆ. ಇಂದಿಗೂ ಇದು ಕಬ್ಬಿಗರ ಸ್ಫೂರ್ತಿಯ ತವರುಮನೆಯಾಗಿದೆ!

ಹೊರಗಿನಿಂದ ಉತ್ತಮವಾಗಿ ಶೃಂಗರಿಸಿದ ಸಣ್ಣ ಬಾಗಿಲೊಂದು ಕಾಣುತ್ತಿದೆ. ಒಳಗೆ ಮಾತ್ರ ಕಟ್ಟಡವು ಭವ್ಯವಾಗಿದೆ. ನಾವು ಹೋದಾಗ ಪಾದ್ರಿಯು ಪ್ರಾರ್ಥನೆಯನ್ನು ಓದುತ್ತಿದ್ದನು. ಕೇಳಲೆಂದು ನೂರಾರು ಜನರು–ಗಂಡು ಹೆಣ್ಣು ಕೂಡಿ–ನೆರೆದಿದ್ದರು. 'ಸರಕಾರಿ ಡಾಕ್ಟರ' ರಂತೆ ಇಲ್ಲಿ 'ಸರಕಾರಿ ವೈದಿಕ'ರೂ ಇರುತ್ತಾರೆ. ಜನರ ಆತ್ಮಗಳ ಆರೋಗ್ಯವನ್ನು ಕಾಯುವದೇ ಅವರ ಕೆಲಸ. ಇದು ಎಷ್ಟರ ಮಟ್ಟಿಗೆ ಸಾಧಿಸುವದೋ ದೇವರೇ ಬಲ್ಲ! ಬಹು ಜನರು ಪ್ರಾರ್ಥನೆಗಿಂತ ಪ್ರಾರ್ಥನಾ ಮಂದಿರವನ್ನು ನಮ್ಮಂತೆ ನೋಡಲು ಬಂದಿದ್ದರೆಂದು ತೋರಿತು. ಪಾದ್ರಿಯ ಪ್ರಾರ್ಥನೆಯು ಮುಗಿದೊಡನೆ ದುಡು ದುಡು ತಮ್ಮ ಮನಸ್ಸೆಳೆದ ಮೂಲೆಗೆ ಅವರು ಸಾಗಿದರು!

ನಡುವೆ ಬಿಟ್ಟ ಸಣ್ಣ ಹಾದಿಯ ಎಡಬಲಕ್ಕೆ ರಾಜಕಾರಣಚತುರರ ಶಿಲಾಮೂರ್ತಿಗಳಿವೆ. ಮೊದಲು ಕಣ್ಣಿಗೆ ಬೀಳುವ ದೃಶ್ಯವೇ ಇದು. ರಾಜರಿಗಿಂತ, ಕವಿಗಳಿಗಿಂತ, ಇವರೇ ಆಂಗ್ಲರ ಕೀರ್ತಿಧ್ವಜವನ್ನು ನಿಲ್ಲಿಸಿದರೆಂದು ಇಲ್ಲಿಯವರ ಅಭಿಪ್ರಾಯವೆಂದು ಕಾಣುತ್ತದೆ. ಪ್ರಾರ್ಥನೆಯು ನಡೆದಾಗ ನಾನು ಮೆಲ್ಲನೆ ಒಳಗೆ ನುಸುಳಿ ಬಾಗಿಲ ಹತ್ತಿರದಲ್ಲಿಯೇ ನಿಂತಿದ್ದೆ. ಸಹಜವಾಗಿ ಮೇಲಕ್ಕೆ ಮೋರೆಯೆತ್ತಿ ನೋಡಲು, ಅಲ್ಲಿ Earl of Chatham (ಅರ್ಲ ಆಫ್ ಚ್ಯಾಟ್ಹ್ಯಾಮ)ನು ನನ್ನ ಕಡೆ ನೋಡುತ್ತ ನಿಂತಿದ್ದನು! ಹಾಗೇ ಎದುರಿಗೆ ನಿಟ್ಟಿಸಿ ನೋಡಿದೆ. ಗ್ಲ್ಯಾಡ್‌ಸ್ಟನ್, ವೂಲ್ಫ್, ಡಿಸ್‌ರೇಲಿ ಮೊದಲಾದವರು ಕಣ್ಣಿಗೆ ಬಿದ್ದರು! ಪ್ರಾರ್ಥನೆಯು ಮುಗಿದಿಂದ ಇವೇ ಮೊದಲಾದ ಶಿಲಾ ಮೂರ್ತಿಗಳ ನಡುವೆ ಹಾಯ್ದು ಪಾದ್ರಿಯ ಆಸನದ ಕಡೆಗೆ ಹೋದೆ. ಅಲ್ಲಿ ಉತ್ತಮವಾದ ಕೆತ್ತನೆಯ ಕೆಲಸವು ಕಣ್ಣಿಗೆ ಬಿತ್ತು. ಬಂಗಾರದ ಬಣ್ಣವನ್ನು ಅದಕ್ಕೆ ಕೊಟ್ಟಿದ್ದರು.

ಆ ಮೇಲೆ ನನಗೆ ಮುಖ್ಯವಾಗಿ ಬೇಕಾದ Poets' Corner (ಪೊಯೆಟ್ಸ ಕಾರ್ನರ), ಕವಿಗಳ ಮೂಲೆಗೆ ಹೋದೆ. ಮೊನ್ನೆ ಮೊನ್ನೆ ತೀರಿಕೊಂಡ ಕಿಪ್ಲಿಂಗ್ ಕವಿಯ ಮೇಲೆ ಹಾಕಿದ ಕಲ್ಲು ಅಲ್ಲಿ ಕಣ್ಣಿಗೆ

ಬಿತ್ತು. ಅದಕ್ಕೆ ತುಸು ದೂರದಲ್ಲಿಯೇ ಹಾರ್ಡಿಯು ಒರಗಿದ್ದನು! Macaulay (ಮ್ಯಾಕಾಲೆ) Johnson (ಜಾನ್ಸನ್) Goldsmith (ಗೋಲ್ಡ್‌ಸ್ಮಿಥ್) Dryden (ಡ್ರ್ಯಾಯ್‌ಡೆನ್), ಎಲ್ಲರಿಗೂ ಒಂದೊಂದು ಹಿಡಿ ಮಣ್ಣನ್ನು ನಾವು ಕೊಡುವಂತೆ ಒಂದೊಂದು ಕಲ್ಲನ್ನು ಇಲ್ಲಿ ಕೊಟ್ಟಿದ್ದಾರೆ. ಈ ಕಲ್ಲಿನ ಮೇಲೆ ಹಾಯ್ದಾಡುತ್ತ ನಾವು ಹೋಗು ತ್ತೇವೆ! ಪ್ರತಿಯೊಂದು ಹೆಜ್ಜೆಯು ಬುಡಕ್ಕೆ ಬಿಜ್ಜೆ (ವಿದ್ಯೆ)ಯ ಭಾರ ವನ್ನು ತುಳಿಯುತ್ತೇವೆ! ಅಡಿಗಡಿಗೆ ಇತಿಹಾಸವನ್ನು ದಾಟುತ್ತೇವೆ! ಎಂಥ ವಿಚಿತ್ರ! ನಾನು ಹಾಯ್ದುಹೋಗುವಾಗ ಒಂದು ಸಣ್ಣ ಕಲ್ಲು ಪಾಟಿಯ ಮೇಲೆ ಸಣ್ಣವಾದ ಅಕ್ಷರಗಳಿದ್ದವು. ತುಳಿಯುವಷ್ಟರಲ್ಲಿಯೇ ಅವು ನನ್ನ ಕಣ್ಣಿಗೆ ಬಿದ್ದವು. ಓದಿದೆ: “Oh rare Ben Jonson” (ಓ ಅಪರೂಪ ಬೆನ್‌ಜಾನ್ಸನ್) ಎಂದಿತ್ತು. ಎಂಥ ಪ್ರಖ್ಯಾತ ನಾಟಕ ಕಾರನನ್ನು ಕಾಲ್ಕೆಳಗೆ ಹಾಕಿ ತುಳಿಯುತ್ತಿದ್ದೆನಲ್ಲ, ಎಂದುಕೊಂಡೆ! ಯಾರ ಕಣ್ಣಿಗೂ ಸಹಜವಾಗಿ ಬೀಳದ ಒಂದು ಶಿಲಾಮೂರ್ತಿಯು ಮೂಲೆಯಲ್ಲಿತ್ತು. ಮಣಿದು ಅದನ್ನು ನೋಡಿದೆ. ವರ್ಡ್ಸ್‌ವರ್ಥನು ಅಲ್ಲಿ ತಪಶ್ಚರ್ಯಕ್ಕೆ ಕುಳಿತಿದ್ದನು! ‘ಡ್ಯೂಕ್’ ‘ಲಾರ್ಡ’ ಆಗಿದ್ದು ಕಾವ್ಯ ಯೋಗ್ಯತೆಯು ಅಷ್ಟೊಂದು ಇರದ ಕವಿಗಳಿಗೆ ಸಹ ಇಲ್ಲಿ ಜಾಗ ದೊರ ಕಿದೆ. ಇಷ್ಟೇ ಅಲ್ಲ, ವರ್ಡ್ಸ್‌ವರ್ಥನಂಥವರನ್ನು ಅವರು ಮೂಲೆಗೊತ್ತಿ ಬಿಟ್ಟಿದ್ದಾರೆ! ಆದರೂ ಈ ಕವಿಗಳ ಮೂಲೆಯಲ್ಲಿ ನಡೆದಾಗ ಭವ್ಯತೆಯು ಒಂದು ಕಣ್ಣೆದುರು ನಿಲ್ಲುತ್ತದೆ. ಹೃದಯವು ಕಂಪಿಸುತ್ತದೆ. ತಪ್ಪು ಹೆಜ್ಜೆ ಹಾಕಬಹುದೆಂಬ ಹೆದರಿಕೆಯು ಹಿಡಿದು ನಿಲ್ಲಿಸುತ್ತದೆ. ಕಡೆಗೆ ದಿಕ್ಕು ತಪ್ಪಿದಂತಾಗಿ-ಯಾರನ್ನು ತುಳಿದರೇನು? ಎಲ್ಲಿ ಹೆಜ್ಜೆ ಹಾಕಿದ ರೇನು? ಎಲ್ಲವೂ ಅಷ್ಟೆ! ಮಣ್ಣು, ಮಣ್ಣು! ಎಂದು ಮನಸ್ಸಿಗೆ ಬಂದಂತೆ ಮನುಷ್ಯನು ನಡೆಯಹತ್ತುತ್ತಾನೆ.

ಇದಕ್ಕೆ ಸಮೀಪವಾಗಿ ವೈಜ್ಞಾನಿಕರ ಮೂಲೆಯಿದೆ. ಇಲ್ಲಿ ನ್ಯೂಟನ್ನನ ದೊಡ್ಡದಾದ ಶಿಲಾಮೂರ್ತಿಯನ್ನು ನಿಲ್ಲಿಸಿದ್ದಾರೆ. ಡಾರ್ವಿನ್, ಹರ್ಶೆಲ್ ಮೊದಲಾದವರ ಮೇಲೆ ಕಲ್ಲೊಗೆದಿದ್ದಾರೆ. ಇದಕ್ಕೆ

ಹತ್ತಿರದಲ್ಲಿ ವ್ಯಾಪಾರಿಗಳು, ವಾಸ್ತುಶಿಲ್ಪಿಗಳು, ಸರದಾರರು, ಸೇನಾಪತಿಗಳು ಮೊದಲಾದ ಅನೇಕರಿಗೆ ಜಾಗವು ದೊರೆತಿದೆ. ಇವರಲ್ಲಿ ಎಲ್ಲರೂ ಅಷ್ಟೊಂದು ಹೆಸರುವಾಸಿಯಾದವರಲ್ಲ. 'ವಶೀಲಿ'ಯ ಮೇಲೆ ಜಾಗವು ದೊರೆತಂತೆ ಕಾಣುತ್ತದೆ! ಇಂಥ ವಶೀಲಿಯ ಕಲ್ಲುಗಳೇ ಇಲ್ಲಿ ಬಹಳವಾಗಿವೆ. ಅಥವಾ ಅವರಿಗೆ ಇಲ್ಲಿ ಆಸ್ಪದ ಕೊಟ್ಟಾಗ ಈ ಮಂದಿರವು ಇಷ್ಟು ಘನತೆಗೇರಬಹುದು, ಇಲ್ಲಿಯ ಒಂದು ಗೇಣು ನೆಲಕ್ಕಾಗಿ ಪ್ರತಿಭಾಶಾಲಿಗಳು ಸಹ ಅಪ್ರತಿಭರಾಗಿ ಆಶಿಸಬಹುದು ಎಂದು ಅನಿಸಿರಲಿಲ್ಲವೆಂದು ಕಾಣುತ್ತದೆ!

ಆ ಮೇಲೆ ಅರಸರ ಅರಮನೆಗೆ ಹೋದೆ. "Sceptre and crown must tumble down" (ರಾಜದಂಡವೂ ಕಿರೀಟವೂ ಕೆಳಕ್ಕುರುಳಲೇಬೇಕು) ಎಂಬುದು ನಿಜವಾಗಿದ್ದರೂ ಸತ್ತ ಮೇಲೆ ಸಹ ಅವರಿಗೊಂದು ವಿಶಿಷ್ಟಸ್ಥಾನವನ್ನು ಕಲ್ಪಿಸಿದ್ದಾರೆ. ಇದಕ್ಕೆ 'Royal Chapel' (ರಾಜವಿಭಾಗ) ಎಂದು ಹೆಸರು. ಬೆನ್ ಜಾನ್‌ಸನ್ನನನ್ನು ಜನರು ತುಳಿದಾಡುತ್ತ ನಡೆಯುತ್ತಾರೆ. ವರ್ಡ್ಸ್‌ವರ್ಥನು ಹೆದರಿ ಒಂದು ಮೂಲೆಯಲ್ಲಿ ಕುಳಿತಿದ್ದಾನೆ! ಆದರೆ ಪಾಪಿಷ್ಠರಾದ ಅರಸರಿಗೂ ಸಹ ಇಲ್ಲಿ ಶ್ರೇಷ್ಠವಾದ ಸ್ಥಾನವನ್ನು ಕಲ್ಪಿಸಿದ್ದಾರೆ. "ಯೋವಾಕೋವಾ ಭವಾಮ್ಯಹಮ್" ಎಂದು ಇಲ್ಲಿ ಹೇಳಿ ನಡೆಯುವ ಹಾಗಿಲ್ಲ. ಜಾಗವನ್ನು ಕೊಡುವವರೊಂದು ಕೊಡಗೈಯ ಕರ್ಣರಾಗಬೇಕಲ್ಲ! ಈ ರಾಜಮಂದಿರದಲ್ಲಿ Richard the Lion-hearted (ಸಿಂಹದೆದೆಯ ರಿಚಾರ್ಡ) ೩ನೆಯ ಎಡ್ವರ್ಡ, ಅರ್ಲ ಆಫ್ ಸ್ಟ್ಯಾಫೋರ್ಡ, ರಾಣಿ ಎಲಿಝಾಬೇಥ್ ೧ನೆಯ ಜೇಮ್ಸ್, ಮೊದಲಾದ ಅರಸು-ಅರಸಿಯರು ಒರಗಿದ್ದಾರೆ. ಮುಖ್ಯತಃ ಗೋರಿಯ ಮೇಲೆ ಆ ಆ ವ್ಯಕ್ತಿಯು ಮಲಗಿಕೊಂಡಂತೆ ಮೂರ್ತಿಯನ್ನು ಕಟೆದಿದ್ದಾರೆ. ಈ ಗೋರಿಗಳ ನಡುವೆ ಹಾಯ್ದು ಅರಸರ ಪ್ರಾರ್ಥನಾ ಮಂದಿರಕ್ಕೆ ಹೋಗಬಹುದು. ಇಲ್ಲಿಯ ಕೆತ್ತನೆಯ ಕೆಲಸವೆಲ್ಲ ಬಂಗಾರದ ಬಣ್ಣದಲ್ಲಿಯೇ ಆಗಿದೆ. ಮಂದಿರದ ಹಿಂದೆ ಭವ್ಯವಾಗಿ ೭ನೆಯ ಹೆನ್ರಿಯ ಗೋರಿಯು ನಿಂತಿದೆ.

ಸಮ್ರಾಟರ ಪಟ್ಟಾಭಿಷೇಕವಾಗುವಾಗ ಅವರ ಸಿಂಹಾಸನದ ಮೇಲೆ ಒಂದು ಕಲ್ಲುಪಾಟಿಯನ್ನು ಹಾಕುತ್ತಾರೆ. ಪಟ್ಟಾಭಿಷೇಕವಾಗುವಾಗ ಮಾತ್ರ ಸಮ್ರಾಟರು ಇದರ ಮೇಲೆ ಕೂಡಬೇಕು. ಈ ಶಿಲೆಯನ್ನು ಒಳಗೊಂಡ ಸಿಂಹಾಸನವು ವೆಸ್ಟ್‌ಮಿನಿಸ್ಟರ್ ಮಂದಿರದಲ್ಲಿಯ ಒಂದು ಭಾಗದಲ್ಲಿಯಿದೆ. 'Stone of Scone' (ಸ್ಟೋನ ಆಫ ಸ್ಕೋನ್) ಎಂದು ಇದರ ಹೆಸರು. ಮೂರನೆಯ ಎಡ್‌ವರ್ಡನು ಸ್ಕಾಟಲಂಡಿನ ಅರಸರಿಂದ ಇದನ್ನು ಕಿತ್ತುಕೊಂಡು ಬಂದಂತೆ ಕಾಣುತ್ತದೆ. ಅಂದಿನಿಂದ ಎಲ್ಲ ಸಮ್ರಾಟರ ಅಭಿಷೇಕವು ಈ ಕಲ್ಲಿನ ಮೇಲೆಯೇ ಆಗಿದೆ. ಅದರಲ್ಲಿ ಯಾವ ಸಿದ್ಧಿಯಿದೆಯೋ, ಯಾವ ಮಂತ್ರವಿದೆಯೋ ನಾನರಿಯೆ. ಇಂಗ್ಲಂಡಿನ ಅತುಲ ವೈಭವವನ್ನು ನೋಡಿದರೆ ಇಂಥದೊಂದು ವಿಶೇಷವೇನಾದರೂ ಅದರಲ್ಲಿರಬೇಕೆಂದೆನಿಸುತ್ತದೆ!

ಇಲ್ಲಿಗೆ ನನ್ನ ಪ್ರವಾಸದ ವರ್ಣನೆ ಮುಗಿಯಿತು. ಇಷ್ಟು ಸ್ವಲ್ಪ ದಿವಸಗಳಲ್ಲಿ ನನ್ನ ಮನಸ್ಸು ಎಷ್ಟು ವಿಕಾಸವನ್ನು ಹೊಂದಿದೆ! ನನ್ನ ದೃಷ್ಟಿಯು ಎಷ್ಟು ವಿಶಾಲವಾಗಿದೆ! ನನ್ನ ಸಂಸ್ಕೃತಿಯು ಎಂತಹ ಒರೆಗಲ್ಲಿನ ಮೇಲೆ ನಿಂತಿದೆ! ಇದನ್ನೆಲ್ಲ ನೆನಿಸಿದಾಗ "Travelling is a part of education" (ಪ್ರವಾಸವು ಶಿಕ್ಷಣದ ಒಂದು ಭಾಗವಾಗಿದೆ) ಎಂದು ಬೇಕನ್ನನು ಹೇಳಿದ ಮಾತು ನೆನಪಾಗುತ್ತದೆ. "Home-keeping youths have ever homely wits" (ಮನೆ ಹಿಡಿದು ಇರುವ ತರುಣರ ಬುದ್ಧಿ ಮನೆಯ ಮಟ್ಟದ್ದೇ) ಎಂಬ ಶೇಕ್ಸಪಿಯರನ ನುಡಿಯು ಮನಸ್ಸಿನಲ್ಲಿ ನಡುತ್ತದೆ.

---

## ೧೧

ಲಂಡನ್

೨—೧೦—೩೬

. . . . . .

ಇಂದು ನನ್ನ ಹಾಗು ನನ್ನ ಗೆಳೆಯರ ಮಧ್ಯಾಹ್ನದ ಊಟವು Lyons'(ಲ್ಯಾನ್ಸ)ಹೋಟೆಲ್ಲಿನಲ್ಲಿಆಯ್ತು. ಪ್ರತಿಯೊಂದು ಓಣಿಗೆ ಮೂರು ನಾಲ್ಕು Lyons' (ಲ್ಯಾನ್ಸ) ಹೊಟೆಲ್ಲುಗಳಿವೆ. ವಿಲಾಯತಿಯ ತುಂಬ ಸಾವಿರಾರು ಇವೆಯಂತೆ. ಇಂಥ ಶಿಸ್ತಿಗಾಗಿ ಮೇಲ್ಪಜ್ತಿಯನ್ನು ಆಂಗ್ಲ ರಲ್ಲಿಯೇ ಕಾಣಬೇಕು. ಹೀಗೆ ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ಶಾಖೋಪಶಾಖೆಯಾಗಿ ಬೆಳೆದ ಸಂಸ್ಥೆಗಳು ವಿಲಾಯತಿಯಲ್ಲಿ ಸಾವಿರಾರಿವೆ.

ಊಟಕ್ಕೆ ಹೋದಾಗ ಇಬ್ಬರು ನಾವು ಒಂದು ಮೇಜಿನ ಹತ್ತಿರ ಕುಳಿತೆವು. ಇನ್ನೆರಡು ಕುರ್ಚಿಗಳು ಅಲ್ಲಿ ತೆರವಾಗಿದ್ದವು. ಒಬ್ಬ ಆಂಗ್ಲ ಗೃಹಸ್ಥನು ಅವುಗಳಲ್ಲೊಂದನ್ನು ಆಕ್ರಮಿಸಿದನು. ತುಸು ಹೊತ್ತು ನಮ್ಮ ಮೋರೆಯನ್ನು ನೋಡಿ ಇನ್ನೊಂದು ಕಡೆಗೆ ನಡೆದನಾತ. ನಮಗೆ ಚಾಕು-ಫೋರ್ಕ ಉಪಯೋಗಿಸಲು ಬರುವದಿಲ್ಲವೆಂದೊ? ಏನು ನಾವು ಭಾರತೀಯರೆಂದೊ? ನಮ್ಮ ಗುಲಾಮಗಿರಿಯು ಇಲ್ಲಿ ಪ್ರತಿನಿಮಿಷವೂ ನಮ್ಮ ಕಣ್ಣಲ್ಲಿ ಒತ್ತುತ್ತದೆ. ಒಬ್ಬ ಆಂಗ್ಲನು ಒಂಬತ್ತು ಮಂದಿ ಭಾರತೀಯರನ್ನು ಆಳುವನೆಂಬ ಮಾತು ಇಲ್ಲಿಯ ಕೂಲಿಯಾಳಿಗೂ ಗೊತ್ತಿದೆ!

ನಂಜೆಯ ಕಡೆಗೆ ನನ್ನ ವಿದ್ಯಾರ್ಥಿಯಾಗಿದ್ದ ಒಬ್ಬ ಆಯ್. ಸಿ. ಎಸ್. ಸ್ನೇಹಿತನ ಕಡೆಗೆ ಹೋಗಿದ್ದೆ. ಆತನಿರುವದು Warwick Avenue (ವಾರವಿಕ್ ಎವ್ಹೆನ್ಯೂ) ಓಣಿಯಲ್ಲಿ. ಅದು ಲಂಡನ್ನಿನ ಶ್ರೀಮಂತರೆಲ್ಲ ಇರುವ ಬಾಗವೆಂದು ಕಾಣುತ್ತದೆ. ಹಲಕೆಲವು ಕಿರಾಣಿ ಹಾಗು ಹಣ್ಣಿನ ಅಂಗಡಿಗಳು ಮಾತ್ರ ಮೂಲೆಯಲ್ಲಿದ್ದವು. ಇಲ್ಲದಿದ್ದರೆ ಉದ್ದಕ್ಕೆ ಎರಡೂ ಮಗ್ಗಲು ದೊಡ್ಡ ದೊಡ್ಡ ಮನೆಗಳ ಸಾಲೇ ಸಾಲು. ಉಳಿದ ದೇಶಗಳ ದುಡ್ಡೆಲ್ಲ ಇಲ್ಲಿ ಬಂದು ಹೇಗೆ ಬಿದ್ದಿದೆಯೆಂಬುದನ್ನು ಕಣ್ಣಾರೆ ಕಾಣ

ಬಹುದು. ನನ್ನ ಸ್ನೇಹಿತನಿರುವದು ಒಂದು ಆಂಗ್ಲ ಕುಟುಂಬದ ಅತಿಥಿಯೆಂದು. ಅವನನ್ನು ಬರಮಾಡಿಕೊಂಡಿರುವದು ಗುಡ್ಡದಷ್ಟು ಉಪಕಾರ ಹೊರಿಸಿದಂತಾಯ್ತೆಂದು ಅವರು ತಿಳಕೊಂಡಿರಬೇಕು!

ನನ್ನ ಸ್ನೇಹಿತನು ಮನೆಯಲ್ಲಿರಲಿಲ್ಲ. ಒಂದು ಪತ್ರವನ್ನು ಬರೆದಿಡುವದಿದೆಯೆಂದು ನಾನು ಕೆಲಸಗಿತ್ತಿಗೆ ಹೇಳಿದೆ. ಕೂಡಲೆ ಆಕೆಯು ಲೇಖನ ಸಾಮಗ್ರಿಯನ್ನು ತಂದಳು. ಕಾಗದವನ್ನಿಟ್ಟ ರಟ್ಟಿನ ಮೇಲೆ 'Two pennies for a call' (ಒಂದು ಕರೆಗೆ ಎರಡಾಣೆ!) ಎಂದು ಬರೆದಿತ್ತು! ನಿರ್ವಾಹವಿಲ್ಲದೆ ಪತ್ರದೊಡನೆ ಅಷ್ಟು ದುಡ್ಡನ್ನೂ ಇಟ್ಟು ನಡೆದೆ. ಭಾರತೀಯರು ವಿಲಾಯತಿಗೆ ಬಂದು ಊಟ ಮಾಡಿದರೆ ದುಡ್ಡು, ಉಗುಳಿದರೆ ದುಡ್ಡು, ಉಶ್! ಉಶ್ಶೆಂದರೆ ದುಡ್ಡು!

'Supplementary' (ಸಪ್ಲಿಮೆಂಟರಿ) ಲಿಸ್ಟಿನಲ್ಲಿ ಒಬ್ಬನ ಹೆಸರು ಬಂದಿದೆ, ಆಯ್. ಸಿ. ಎಸ್. ಪಾಸಾಗಿದ್ದಾನೆಂದು. ಅವನು ಇಂದು ತನ್ನ ಗೆಳೆಯರಿಗೆಲ್ಲ 'ಪಾರ್ಟಿ' ಕೊಟ್ಟಿದ್ದಾನೆ. ಒಬ್ಬ ಹಿಂದೂ ವಿದ್ಯಾರ್ಥಿನಿಯು ಸಮಾರಂಭದ ಹೊತ್ತಿಗೆ ನರ್ತಿಸುವಳಂತೆ. ಆಂಗ್ಲರು ತಾವು ತಿಂದು ನಮ್ಮೆಡೆಗೆ ಎರಚಿದ ಎಂಜಲದಿಂದ ನಮ್ಮ ಹೊಟ್ಟೆ ತುಂಬಿ ಸಂತೋಷವಾಗಬೇಕು. ಆ ಸಂತೋಷವನ್ನು ನಾವು ಆಂಗ್ಲರ ರೀತಿಯಲ್ಲಿಯೇ ವ್ಯಕ್ತಗೊಳಿಸಬೇಕು!

ಇಂದು ರಾತ್ರಿ ಊಟದ ಹೊತ್ತಿಗೆ 'By a gipsy caravan' (ಬಾಯ್ ಏ ಜಿಪ್ಸಿ ಕ್ಯಾರವಾನ್) ಎಂಬ ಇಂಗ್ಲಿಷ ಗೀತೆಯ ಸುಂದರ 'ರಿಕಾರ್ಡು' ಕೇಳಿದೆ. ಆಂಗ್ಲರ ರಾಜನೀತಿಯು ಅಮಾವಾಸ್ಯೆಯಷ್ಟು ಕಗ್ಗತ್ತಲೆ. ಆದರೆ ಅವರ ಕಾವ್ಯ, ಸಂಗೀತ, ನಾಟಕ, ಅವರ್ಣನೀಯ ಸೌಂದರ್ಯವದು! ಅವರ ಜೀವನಕ್ಕೇ ಒಂದು ವೈಶಾಲ್ಯವು ಬಂದಿದೆ. ಆಂಗ್ಲ ಸ್ತ್ರೀಯರು "ನಾನು ಆಸ್ಟ್ರೇಲಿಯಾದಲ್ಲಿದ್ದಾಗ", "ನಾನು ಆಫ್ರಿಕಾದಲ್ಲಿದ್ದಾಗ" ಎಂದು ಸಹಜವಾಗಿ ಮಾತನಾಡುತ್ತಾರೆ. ಆಂಗ್ಲ ಸೈನಿಕನ ಹಿಂದೆ ಅವನ ಹೆಂಡತಿ-ಮಕ್ಕಳು ಹೋಗಿ ಅವನ ಸುಖ-ದುಃಖಗಳನ್ನು ಕಂಡಿದ್ದಾರೆ. ಅಂತೇ ಆಂಗ್ಲ ಸಂಸ್ಕೃತಿಗೆ ಇಂಥ ವೈಶಾಲ್ಯವು ಬಂದಿದೆ.

---

## ೧೨

...... ಲಂಡನ್

೩—೧೦—೩೬

'ಏನ್' ಎಂಬ ಕೆಲಸಗಿತ್ತಿಯಿರುವಳಲ್ಲವೆ ಇಲ್ಲಿ? ಮಿಸ್. ಲಿಂಚ್ ಎಂಬವಳು ಈ ಖಾನಾವಳಿಯನ್ನು ನಡೆಸಿರುವಳು. 'ಏನ್' ಹಾಗು 'ಏನಿ' ಎಂಬವರಿಬ್ಬರು ಅವಳ ದೂತಿಯರು. ಮುಂಜಾನೆಯಿಂದ ಹಿಡಿದು ಸಂಜೆಯವರೆಗೆ ಅವರು ಹುರುಪಿನಿಂದ ದುಡಿಯುತ್ತಾರೆ. ಎಲ್ಲಕ್ಕೂ ಕೆಳಗೆ (ರಸ್ತೆಗಿಂತ ಕೆಳಗೆ) ಮಿಸ್. ಲಿಂಚಳ ಕೋಣೆಗಳು ಹಾಗು ಖಾನಾವಳಿಯ ಅಡುಮನೆಗಳಿವೆ. ಅಡುಮನೆಯ ತಲೆಕಟ್ಟನ್ನು ಒಂದು ಪೆಟ್ಟಿಗೆಯ ಬಾಗಿಲಷ್ಟು ಕೊರೆದಿದ್ದಾರೆ. ಹಾಗು ತಲೆಕಟ್ಟಿನವರೆಗೆ ಕಟ್ಟಿಗೆಯ ಪಾವಟಣಿಗೆಗಳನ್ನು ಏರ್ಪಡಿಸಿದ್ದಾರೆ. ಮಿಸ್. ಲಿಂಚಳು ಸಾಮಾನುಗಳನ್ನು 'ಏನಿ'ಯ ಕೈಯಲ್ಲಿ ಕೊಡುವಳು. 'ಏನಿ'ಯು ಪಾವಟಣಿಗೆ ಹತ್ತಿ ಆ ಕಿಂಡಿಯೊಳಗಿಂದ 'ಏನ್'ಳ ಕಡೆಗೆ ಸಾಗಿಸುವಳು. ಮೇಲಿದ್ದ ಊಟದ ಮನೆಯಲ್ಲಿ 'ಏನ್'ಳು ಎಲ್ಲರಿಗೂ ಬಡಿಸುವಳು. ಊಟದ ಮನೆಯನ್ನು ಅಚ್ಚುಕಟ್ಟಾಗಿ ಸಿದ್ಧಪಡಿಸಿದ್ದಾರೆ. ಕಲ್ಲಿದ್ದಲಿಯ ಒಲೆ, Book of 'Knowledge' (ಜ್ಞಾನದ ಹೊತ್ತಿಗೆ) ಮೊದಲಾದ ಪುಸ್ತಕಗಳಿದ್ದ ಒಂದು ಕಪಾಟು, ಒಲೆಯ ಎದುರಿಗೆ ಕೂಡಲು ಉತ್ತಮವಾದ 'ಕೋಚು', ರೇಡಿಯೊ, ಗ್ರಾಮೋಫೋನ್, ಕಿಂಡಿಯ ಹತ್ತಿರ ಬಡಿಸುವ ಸಾಮಾನುಗಳನ್ನಿಡಲು ಕಟ್ಟಿಗೆಯ ಬೆಂಚು, ಇಷ್ಟೆಲ್ಲವನ್ನು ಈ ನಡುಮನೆಯು ಒಳಗೊಂಡಿದೆ. ಊಟಕ್ಕೆ ಕೂಡಲು ಅನೇಕ ಮೇಜು ಕುರ್ಚಿಗಳಿವೆ.

ಇಲ್ಲಿಯ ಸ್ನಾನಗೃಹದಲ್ಲಿ ಒಂದು ಮೋಜಿದೆ. ಬಿಸಿ ನೀರು ಬೇಕಾದರೆ ಒಂದು ತೂತಿನಲ್ಲಿ ಒಂದು penny (ಒಂದಾಣೆ) ಒಗೆಯಬೇಕು. ಅಂದರೆ ಬಿಸಿ ನೀರು ಸುರಿಯುತ್ತದೆ. ಕೋಣೆಗಳಲ್ಲಿ ಕಾಸಿಕೊಳ್ಳಲು 'ಗ್ಯಾಸಿ'ನ ಒಲೆಗಳಿವೆ. ಒಂದು ಶಿಲಿಂಗ್ ಆದರಲ್ಲಿ ಸೇರಿಸಿದರೆ

ಆರು ತಾಸು ಉರಿಯುತ್ತವೆ. ಇಲ್ಲಿಯ ನಿಲ್ದಾಣಗಳಲ್ಲಿ ಮಿಠಾಯಿಯ ಅಂಗಡಿಗಳಿವೆ. ನಿಮಗೆ ಬೇಕಾದ ಜಿನಸಿನ ಹೆಸರಿನ ಕೆಳಗೆ ಒಂದು 'ಪೆನಿ' ಯನ್ನು ಸೇರಿಸಿದರೆ ಆ ಜಿನಸು ಹೊರಗೆ ಬಂದು ಬೀಳುತ್ತದೆ! ಅಂಗಡಿಗಳಲ್ಲಿ ಚಿಲ್ಲರನ್ನು ಕೊಡಬೇಕಾದರೆ ಸಹ ಯಂತ್ರವನ್ನು ಉಪಯೋಗಿಸುತ್ತಾರೆ! ಒಮ್ಮೆ ಅರಿವೆಯ ಅಂಗಡಿಗೆ ಹೋಗಿದ್ದೆವು. ಖರೀದಿಯಾಯಿತು. ನಮ್ಮ 'ಬಿಲ್ಲಿ' ನೊಡನೆ ನಾವು ಕೊಟ್ಟ ದುಡ್ಡನ್ನು ಆ ಅಂಗಡಿಕಾರನು ಒಂದು ಕೊಳವಿಯಲ್ಲಿಟ್ಟನು. ಕೂಡಲೆ ಅದು ಮಾಯ ವಾಯಿತು! ಮರುಕ್ಷಣದಲ್ಲಿ ಮುಖ್ಯಸ್ಥನ ಸಹಿಯಾಗಿ ನಮಗೆ ಬರಬೇಕಾದ ದುಡ್ಡಿನೊಡನೆ ಆ 'ಬಿಲ್ಲು' ತಿರುಗಿ ಬಂದಿತು! ಹೀಗೆ ಯಂತ್ರದ ಮೇಲೆ ನಡೆದಿದೆ ಇಲ್ಲಿಯ ವ್ಯಾಪಾರ. ಒಂದು ಅಂಗಡಿಯಲ್ಲಿ ಅನೇಕ ಅಂತಸ್ತುಗಳಿರುತ್ತವೆ. ಒಂದರಿಂದ ಇನ್ನೊಂದಕ್ಕೆ ಗಿರಾಕಿಗಳನ್ನು 'ಲಿಫ್ಟ' ನಲ್ಲಿ ಒಯ್ಯುತ್ತಾರೆ.

ಆದರೆ ಇಲ್ಲಿ ನಾನು ಬರೆಯಬೇಕಾಗಿದ್ದು 'ಏನ್' ಳ ವಿಷಯವಾಗಿ. ಅವಳನ್ನು ನೋಡಿದಾಗೊಮ್ಮೆ ಇಂಗ್ಲಿಷ ಕಾದಂಬರಿಗಳಲ್ಲಿ, ಕವಿತೆಗಳಲ್ಲಿ ವರ್ಣಿತಳಾದ ವಿಲಾಯತಿಯ ಹಳ್ಳಿಗಾಡಿನ ಹುಡಿಗೆಯ ನೆನಪಾಗುತ್ತದೆ. ಅವಳ ಹುರುಪು, ಹಾಸ್ಯ, ವಿನಯ, ಮಂದಸ್ಮಿತ ಎಲ್ಲವೂ ಮೋಹಕ ವಾಗಿವೆ. 'ಏನ್' ಳು 'It is perfectly alright' (ಅದು ತುಂಬಾ ಚೆನ್ನಾಗಿದೆ) 'Thank you' (ಉಪಕಾರವಾಯ್ತು) ಎಂದು ಹೇಳುವ ದನ್ನು ಕೇಳಬೇಕು. 'No' (ನೋ) ಎಂದು ದನಿತೆಗೆಯುವದನ್ನು ಆಲಿಸಬೇಕು. ಅವನ್ನು ಕೇಳಿದಷ್ಟು ಸಲ ಆನಂದವಾಗುತ್ತದೆ! ನಮ್ಮಲ್ಲಿ ಒಬ್ಬರು ದಿನಾಲು ಮುಂಜಾನೆ ಚಹದ ಬದಲುಹಾಲು ಕುಡಿಯುತ್ತಾರೆ. ಅವರಿಗೆ 'Milk, baby, milk' (ಹಾಲು ಕೂಸೇ, ಹಾಲು) ಎಂದು ಛೇಡಿಸುತ್ತಾಳೆ ಏನ್! 'If you say that, I will have to call you an old woman' (ನೀನು ಹಾಗೆಂದರೆ ನಿನಗೆ ಮುದುಕಿಯೆಂದು ಕರೆದೇನು) ಎಂದು ಅವರು ಹೇಳಿದಾಗ ಮಾತ್ರ ಆಕೆ ಸುಮ್ಮನಾದಳು! 'Tell Miss. Lynch that I will linch her' (ಮಿಸ್. ಲಿಂಚ್

ಅವಳಿಗೆ ಹೇಳು ಅವಳನ್ನು ಸುಲಿ ಯುವೆನೆಂದು) ಎಂದು ಗೆ. '—' ಚೇಷ್ಟೆ ಮಾಡಿದಾಗ, "You tell her" (ನೀನೇ ಹೇಳು) ಎಂದು ಅವಳು ನಗುತ್ತ ಉತ್ತರಕೊಟ್ಟಳು. ಗೆ. '—'ರಗೆ ಒಂದು ದಿವಸ ಜ್ವರ ಬಂದಾಗ ತಂಗಿಯಂತೆ ಎನ್ನಳು ಅವರನ್ನು ಶುಶ್ರೂಷಿಸಿದಳು.

ಇಂದು ಮುಂಜಾನೆ ಒಂದು ವಿಶೇಷ ಸಂಗತಿಯು ಸಂಭವಿಸಿತು. ನಾಲ್ಕು ಮಂದಿ ಒಂದು ಮೇಜಿನ ಸುತ್ತಲು ಮುಂಜಾವಿನ ತಿಂಡಿಗಾಗಿ ಕುಳಿತಿದ್ದರು. ಶ್ರೀ. 'ಬ—'ಜರವರು ಬಂದು ಐದನೆಯ ಕುರ್ಚಿಯೊಂದನ್ನು ಅಲ್ಲಿಯೇ ಹಾಕಿ ಅವರೊಡನೆ ಮಾತನಾಡುತ್ತ ಕುಳಿತರು. ಅಲ್ಲಿಯೇ ಐದನೆಯವರಿಗೆ ಬಡಿಸುವದೆಂದರೆ ಎಲ್ಲರಿಗೂ ಅಡಚಣಿಯಾಗುತ್ತಿತ್ತು. ಶ್ರೀ. 'ಬ—'ಜರವರು ಅಲ್ಲಿಯೇ ಆಗಬೇಕೆಂದರು. ಇನ್ನೊಂದು ಮೇಜಿಗೆ ಹೋದರೆ ಸೆಟ್ಟಿಗಾದೀತೆಂದು ಎನ್ನಳು ಹೇಳಿದಳು. ಶ್ರೀ. 'ಬ—'ಜರವರು ಕೇಳಲಿಲ್ಲ. ಎನ್ನಳು ಬಿಡಲಿಲ್ಲ. ಈ ನ್ಯಾಯವು ಮಿಸ್. ಲಿಂಚಳವರೆಗೆ ಹೋಯಿತು. ಕೊನೆಯವರೆಗೂ ಎನ್ನಳು ಅಲ್ಲಿ ಬಡಿಸಲಿಲ್ಲ. ಊಟದ ಮನೆಯನ್ನು ಬಿಟ್ಟು ಕಣ್ಣೀರು ಸುರಿಸುತ್ತ ಸಿಟ್ಟಿನಿಂದ ಎದ್ದು ಹೋದಳು. 'ಎನಿ'ಯು ಬಂದು ಎಲ್ಲರಿಗೂ ಬಡಿಸಬೇಕಾಯಿತು! ಮಧ್ಯಾಹ್ನದ ಊಟಕ್ಕೆ ಸಹ ಎನ್ನಳು ಬಡಿಸಲಿಲ್ಲ. ಎನ್ನಳೇ ಬರಬೇಕೆಂದು ಅನೇಕರು ಗುಣಗುಟ್ಟಿದರು. ಅವಳಿಲ್ಲದೆ ಅವರಿಗೆ ಊಟವೇ ಹೋದಂತೆ ಕಾಣಲಿಲ್ಲ! ಎನ್ನಳ ವ್ಯಕ್ತಿತ್ವದ ವರ್ಚಸ್ಸು ಅಷ್ಟು ಬಲವಂತವಾದದ್ದು!

ಇಂದು ಸಂಜೆಯ ಕಡೆಗೆ 'Gower Street' (ಗಾವರ ಸ್ಟ್ರೀಟ) ದಲ್ಲಿ ತಿರುಗಾಡಿದೆನು. ಭವ್ಯವಾದ ಯುನಿವ್ಹರ್ಸಿಟಿ ಕಾಲೇಜನ್ನು ನೋಡಿ ಅದರ ಹತ್ತಿರವಿದ್ದ ಭಾರತೀಯ ವಿದ್ಯಾರ್ಥಿಗಳ ವಸತಿಗೃಹವನ್ನು ಸಂದರ್ಶಿಸಿದೆನು. ಈ ವಸತಿಗೃಹದ ಪಕ್ಕದಲ್ಲಿ ಡಾರ್ವಿನ್ ಎಂಬ ಪ್ರಸಿದ್ಧ ವಿಜ್ಞಾನ-ವಿಶಾರದನು ೧೮೩೮ ರಿಂದ ೧೮೪೨ ರವರೆಗೆ ಇದ್ದ ಮನೆಯಿದೆ! ತುಸು ಮುಂದಕ್ಕೆ 'ಥ್ಯಾಕರೇ' ಎಂಬ ಆಂಗ್ಲ ಕಾದಂಬರಿಕಾರನ ಹೆಸರಿನಲ್ಲಿ ನಡೆಯುತ್ತಿದ್ದ ಭವ್ಯವಾದ ಹೋಟೆಲ್ಲಿದೆ. ಆ ಮೇಲೆ ಬ್ರಿಟಿಶ್ ವಸ್ತು-ಸಂಗ್ರಹಾಲಯವು ಕಣ್ಣಿಗೆ ಬಿತ್ತು. ಆಯುಷ್ಯವನ್ನೆಲ್ಲ ಇಲ್ಲಿ ವೆಚ್ಚ

ಮಾಡಿದರೂ ಇಲ್ಲಿರುವ ಜ್ಞಾನವನ್ನೆಲ್ಲ ಸಂಪಾದಿಸುವದು ದುಸ್ತರ ವಾದೀತು! ಗತಿಸಿದ ಸಾಮ್ರಾಜ್ಯಗಳ ಅಸ್ಥಿಪಂಜರವೆಲ್ಲ ಇಲ್ಲಿ ಪ್ರದರ್ಶಿತ ವಾಗಿದೆ. ಬೇರೆ ದೇಶದಿಂದ ತಂದ Mummy (ಮಮಿ–ಗೊಂಬೆ) ಇಲ್ಲವೆ ಸುಸ್ಥಿತಿಯಲ್ಲಿದ್ದ ಶವಗಳು ಇಲ್ಲಿ ನೋಡಲಿಕ್ಕೆ ಸಿಗುವವು. ಅಲ್ಲದೆ ಆಂಗ್ಲ ಸಾಮ್ರಾಜ್ಯದ ಜೀವಂತ ವೈಭವವೂ ಕಣ್ಣುಕಟ್ಟುವದು. ಶೆಲ್ಲಿ, ಕೀಟ್ಸ್, ಕೋಲರಿಜ್ ಮೊದಲಾದ ಪ್ರಸಿದ್ಧ ಲೇಖಕರ ಪತ್ರಗಳನ್ನು ಇಲ್ಲಿ ಅನಾಯಾಸವಾಗಿ ಓದಬಹುದು! ಅಂತೂ ಇನ್ನೊಮ್ಮೆ ಬಂದು ಈ ಸಂಗ್ರಹಾಲಯವನ್ನು ಕಣ್ತುಂಬ ನೋಡಬೇಕು.

---

## ೧೩

ಆಕ್ಸಫರ್ಡ್

೪—೧೦—೩೬

. . . . . .

ಇಂದು ಗೆ. ' — ' ರೊಡನೆ ನಾನು ಆಕ್ಸ್‌ಫರ್ಡಿಗೆ ನಡೆದೆನು. ನಮ್ಮನ್ನು ಕಳಿಸಲೆಂದು ಬೆಲ್‌ಸಾಯಿಜ್ ಎವೆನ್ಯೂದ ವಸತಿಗೃಹ ದಲ್ಲಿಯ ಗೆಳೆಯರೆಲ್ಲ ಬಂದು ಬಾಗಿಲಲ್ಲಿ ನಿಂತಿದ್ದರು. ಮಿಸ್. ಲಿಂಚಳು ಸಹ ಮಮತೆಯನ್ನು ತೋರಿಸಿದಳು.

ಆಕ್ಸ್‌ಫರ್ಡಿಗೆ ಸಮೀಪವಾಗಿ ಗಾಡಿ ಬಂದ ಕೂಡಲೆ 'ಮ್ಯಾಥ್ಯೂ ಅರ್ನಾಲ್ಡ' ನು ವರ್ಣಿಸಿದ 'The dreaming spires of oxford' (ಆಕ್ಸ್‌ಫರ್ಡಿನ ಸ್ವಪ್ನಿಸುವ ಶಿಖರಗಳು) ಕಾಣತೊಡಗಿದವು! ಸರಸ್ವತಿಯ ಮಂದಿರವು—'The home of lost causes' (ಸೋತ ವಿಷಯಗಳ ತವರು) ಮೆಲ್ಲಮೆಲ್ಲನೆ ಗೋಚರವಾಯಿತು. ಓರಿಯಲ್ ಕಾಲೇಜಿನಲ್ಲಿ, ಒಬ್ಬ ಸ್ನೇಹಿತರಲ್ಲಿ ಸಾಮಾನುಗಳನ್ನಿಡಿಸಿ ಗೆ. ' — ' ರನ್ನು ಒಳ ಸೇರಿಸಿಕೊಂಡು 'ಹಾರಫರ್ಡ್' ಕಾಲೇಜಿಗೆ ನಡೆದವು. ಇಲ್ಲಿಯ

ಕಾಲೇಜೆಂದರೆ ಹಾಸ್ಟೆಲ್ಲು; ಹಾಸ್ಟೆಲ್ಲೆಂದರೆ ಕಾಲೇಜು! ಮಧ್ಯಯುಗದ ಕಟ್ಟಡಗಳು ಇಲ್ಲಿ ಇನ್ನೂವರೆಗೆ ನಿಂತಿವೆ. ೭೦೦–೮೦೦ ವರ್ಷಗಳಿಂದ ಅಖಂಡ ವಿದ್ಯಾದಾನವನ್ನು ಮಾಡುತ್ತಿವೆ. ಭಾರತದಲ್ಲಿ ಹಿಂದಕ್ಕೆ ಇಂಥ ವಿಶ್ವವಿದ್ಯಾಲಯಗಳಿದ್ದಿಲ್ಲವೆಂತಲ್ಲ. ಆಕ್ಸಫರ್ಡನ್ನು ಮೆಟ್ಟಿ ನಿಲ್ಲುವಂಥ ಸಂಸ್ಥೆಗಳಿದ್ದವು. ಆದರೆ ಅವೆಲ್ಲ ಇಂದಿಗೆ ಹಾಳಾಗಿವೆ. ಅಲ್ಲಿಯ ಸಾಮಾನ್ಯಜೀವನವು ಹೇಗಿತ್ತೆಂಬುದರ ಕಲ್ಪನೆಯು ಕೂಡ ಈಗ ಬರುವಂತಿಲ್ಲ. ಆ ಸಂಸ್ಕೃತಿಯು ಜೀವಂತವಿದ್ದಾಗ ಹೇಗಿದ್ದಿರಬಹು ದೆಂಬುದರ ಕಲ್ಪನೆಯು ಬರಬೇಕಾದರೆ ನೋಡಬೇಕು–ಆಕ್ಸಫರ್ಡನ್ನು! ದೇಶ-ಕಾಲ-ಪರಿಸ್ಥಿತಿಯ ಭೇದಗಳಿರಬಹುದು. ಆದರೆ ಜೀವಂತ ಸಂಸ್ಕೃತಿ ಗಿರುವ ಕಳೆಯಿದೆ.

ಇದೇ ವಿಶ್ವವಿದ್ಯಾಲಕ್ಕೆ ಹೊಂದಿದ ೩೦ ಕಾಲೇಜುಗಳು ಒಂದರ ಹತ್ತಿರ ಒಂದಾಗಿ ನಿಂತಿವೆ; ನಟ್ಟನಡುವೆ ಪ್ರಖ್ಯಾತವಾದ 'ಬಾಡ್ಲೆಯನ್' ಲೈಬ್ರರಿಯಿದೆ; ಸೇಂಟ್‌ಮೇರಿ ಕ್ರಿಸ್ತಾಲಯವೂ ಸಹ ಇದೆ. ಪ್ರಸಿದ್ಧವಾದ ಮೋಟರು ಕಾರಖಾನೆ ಮೊದಲಾದ ಉದ್ಯೋಗಗಳಿಂದ ಆಕ್ಸಫರ್ಡ್ ನಗರವು ಎಷ್ಟೋ ಪಟ್ಟು ಬೆಳೆದಿದೆ. ಆದರೆ ಈ ವಿಶ್ವವಿದ್ಯಾಲಯವೇ ನಗರದೇವಿಯ ಕುಂಕುಮವಿದ್ದಂತೆ. ಆ ಭವ್ಯಮಂದಿರಗಳ ನೆರಳಿನಲ್ಲಿ ತಿರುಗಾಡುವಾಗ ಒಂದು ಅನುಪಮ ಸುಖವಾಗುವದು.

ಕಾಲೇಜಿನಿಂದ ಕಾಲೇಜಿಗೆ ತಿರುಗಾಡುತ್ತ ನಾವು ಯುನಿವ್ಹರ್ಸಿಟಿ ಕಾಲೇಜಿಗೆ ಹೋದೆವು. ಇಲ್ಲಿ ಶೆಲ್ಲಿ ಕವಿಯ ಸ್ಮಾರಕಮಂದಿರವಿದೆ. ಶೆಲ್ಲಿಯು ಇದೇ ಕಾಲೇಜಿನ ವಿದ್ಯಾರ್ಥಿ. ಈ ಕಾಲೇಜಿನ ಬಾಗಿಲಲ್ಲಿಯೇ ನಿಂತುಕೊಂಡು 'The Necessity of Atheism' (ನಾಸ್ತಿಕವಾದದ ಆವಶ್ಯಕತೆ) ಎಂಬ ಪುಸ್ತಕದ ಪ್ರತಿಗಳನ್ನು ಹಂಚಿದ್ದ! ಅದಕ್ಕಾಗಿ ಕಾಲೇಜಿನ ಅಧಿಕಾರಿಗಳು ಅವನನ್ನು ಹೊರಗೆ ಹಾಕಿದರು. ಆದರೆ ಅದೇ ಕಾಲೇಜಿನಲ್ಲಿ ಅವನದೊಂದು 'ಸ್ಮಾರಕಮಂದಿರ'ವಿದೆಯೀಗ! ಒರ್ವ ಮೂರ್ತಿ ಶಿಲ್ಪಿಯು ಶೆಲ್ಲಿಯ ಪ್ರತಿಮೆಯನ್ನು ಬಿಳಿಕಲ್ಲಿನಲ್ಲಿ ಸುಂದರವಾಗಿ ಕಟೆದಿದ್ದಾನೆ. ನಗ್ನವಾಗಿ ಒರಗಿದ ಶೆಲ್ಲಿಯ ಮೃತದೇಹವೇ ಈ ಪ್ರತಿಮೆ.

ಹತ್ತಿರ ಕಾವ್ಯವನಿತೆಯು (The Muse) ಅಳುತ್ತ ಕುಳಿತಿದ್ದಾಳೆ. ಲೇಡಿ ಶೆಲ್ಲಿಯು ಈ ಮೂರ್ತಿಯನ್ನು ಕಾಲೇಜಿಗೆ ಕಾಣಿಕೆಯಾಗಿ ಕೊಟ್ಟಳಂತೆ. ಅಲ್ಲಿಯೇ ಇರಿಸಿದ ಪರಿಚಯ ಪತ್ರಿಕೆಯಲ್ಲಿ ಶೆಲ್ಲಿಯು ಕೀಟ್ಸ್ ಕವಿಯ ಬಗ್ಗೆ ಬರೆದ ಸಾಲುಗಳನ್ನು ಉದ್ಧರಿಸಿದ್ದಾರೆ!

"He has outsoared the shadow of our night.
Envy and calumny and hate and pain
Will touch him not."

(ಅವನು ನಮ್ಮ ರಾತ್ರಿಯ ನೆರಳನ್ನು ಮೀರಿ ಹಾರಿರುವನು. ಅಸೂಯೆ ಅಪವಾದ ದ್ವೇಷ ವ್ಯಥೆ ಅವನನ್ನು ಸೋಂಕಲಾರವು) ಈ ಅವತರಣಿಕೆಯಲ್ಲಿ ಎಷ್ಟು ಔಚಿತ್ಯವಿದೆ! ಒರ್ವ ಮಹಾಕವಿಯನ್ನು ಅವಮಾನಗೊಳಿಸಿದ ಕಾಲೇಜು ಇನ್ನಾವ ರೀತಿಯಲ್ಲಿ ತನ್ನ ಪಶ್ಚಾತ್ತಾಪವನ್ನು ವ್ಯಕ್ತಗೊಳಿಸಬೇಕು? ಮತ್ತಾವ ರೀತಿಯಲ್ಲಿ ಆ ಕವಿಯನ್ನು ಮನ್ನಿಸಬೇಕು?

ನನ್ನ ಸ್ನೇಹಿತರು ಕಾಲೇಜಿನಲ್ಲಿಯೇ ಕೋಣೆಗಳನ್ನು ಹಿಡಿದಿದ್ದರು. ನನಗೆಂದು ಊರಲ್ಲಿ ಕೋಣೆಗಳನ್ನು ನೋಡಬೇಕೆಂದು ಗೊತ್ತಾಯಿತು. ಇಲ್ಲಿಯ ಉತ್ತಮ ಓಣಿಗಳಲ್ಲಿ ತಿರುಗಾಡಿದೆವು. ನಮ್ಮ ಮೋರೆಗಳನ್ನು ನೋಡಿದ ಕೂಡಲೆ: "We are full up" (ನಮ್ಮಲ್ಲಿ ತುಂಬಿದೆ) ಎಂದು ಅನೇಕರು ಹೇಳುತ್ತಿದ್ದರು. ದೊಡ್ಡ ಮನೆಗಳನ್ನು ಕಟ್ಟಿಸಿಕೊಂಡು 'ಪೆನ್‌ಶನ್' ಪಡೆದ ಮುದುಕರು ಇಲ್ಲಿರುವರೆಂದು ತೋರುತ್ತದೆ. ಮುದುಕಿಯರೇ ಎಲ್ಲ ಕಾರಭಾರವನ್ನು ಮಾಡುತ್ತಾರೆ. ನಮ್ಮನ್ನು ನೋಡಿ ಇಬ್ಬರು ಮೂವರು ಮುದುಕಿಯರು ಮೋರೆ ಗಂಟಿಕ್ಕಿದರು. ಒಂದೆಡೆಗೆ ಮಾತ್ರ ಒರ್ವ ವೃದ್ಧಸ್ತ್ರೀಯು ಬಹಳ ಅಂತಃಕರಣ ಮಾಡಿದಳು. ಒಮ್ಮೆ ಭಾರತೀಯ ವಿದ್ಯಾರ್ಥಿಗಳನ್ನು ಮನೆಯಲ್ಲಿ ಇರಗೊಟ್ಟ ಮೇಲೆ ಅವರ ಸದ್ಗುಣಗಳನ್ನು ತಿಳಿದು ವರ್ಣ ದ್ವೇಷವು ಮಾಯವಾಗುವದು. ಹೀಗೆ ಆರ್ಯ ಶೀಲವನ್ನು ತಿಳಿದವರಲ್ಲಿ ಆ ಮುದುಕಿಯು ಒರ್ವಳೆಂದು ತೋರುತ್ತದೆ. 'We are home to

you' (ನಾವು ನಿನಗೆ ಮನೆಯವರಂತೆ ಬರ ಮಾಡುತ್ತೇವೆ) ಎಂದು ಹೇಳಿದಳು. ಆದರೆ ವಾರಕ್ಕೆ ಎರಡೂವರೆ ಪೌಂಡಿನಂತೆ ಅವಳ ದರ! ಅಲ್ಲಿಂದ ಹೊರಟು ನಾನೀಗ ಇರುತ್ತಿರುವ ಮನೆಗೆ ಬಂದೆವು.

ಇದು ಕಾಲೇಜಿನಿಂದ ಎರಡು ಮೈಲು ದೂರವಿದೆ. 'ಬೋಟ್ಲಿ' ಎಂಬುದು ಆಕ್ಸಫರ್ಡಿನ ಹತ್ತಿರ ಇರುವ ಸಣ್ಣ ಹಳ್ಳಿಯೊಂದು. ಸುಂದರ ವಾಗಿದೆ ನೋಡಲಿಕ್ಕೆ-ಇರಲಿಕ್ಕೆ ಸಹ! ಇದು ಹಳ್ಳಿಯಾದರೂ ನಮ್ಮ ಲ್ಲಿಯ ದೊಡ್ಡ ಪಟ್ಟಣಗಳಲ್ಲಿ ಸಿಗದ ಸೌಕರ್ಯಗಳು ಇಲ್ಲಿ ಸಿಕ್ಕುತ್ತವೆ. ಎಲ್ಲ ಜನರು ಶ್ರೀಮಂತರಿದ್ದಾರೆ. ೫–೧೦ ನಿಮಿಷಕ್ಕೊಮ್ಮೆ ಆಕ್ಸಫರ್ಡ್ ಹಾಗು ಏಕರ್‌ರಾಯಿಜ್ ಎಂಬ ಊರಿನ ನಡುವೆ ಹಾಯ್ದಾಡುವ ಬಸ್ಸು ಇಲ್ಲಿ ನಿಲ್ಲುತ್ತದೆ. ಎರಡು 'ಪೆನಿ' ಕೊಟ್ಟರೆ ಐದು ನಿಮಿಷದಲ್ಲಿ ಕಾಲೇಜು ಮುಟ್ಟಬಹುದು. ಗೆ. '—' ರು ಒಂದು ಟರ್ಮಿನವರೆಗೆ ಇಲ್ಲಿದ್ದರು.

ಇಲ್ಲಿ ನಾನು ಅತಿಥಿಯಾಗಿದ್ದ ಮನೆತನದ ಪರಿಚಯವನ್ನಷ್ಟು ಬರೆದಿಡುವದು ಒಳ್ಳೇದು. ಮಿಟರ್ನರ್ ಎಂಬಾತ ಈ ಮನೆಯ ಯಜಮಾನ. ಆತನಿಗೆ ಸುಮಾರು ೬೦ ವರ್ಷಗಳಾಗಿರಲಿಕ್ಕೆ ಸಾಕು. ಬಡಿಗನಾಗಿ ಕೆಲಸ ಮಾಡಿದ. ದುಡ್ಡನ್ನು ಸಂಗ್ರಹಿಸಿದ. ಈ ದೊಡ್ಡ ಮನೆಯನ್ನು ತಾನೇ ನಿಂತು ತನಗಾಗಿ ಕಟ್ಟಿಸಿಕೊಂಡ. ಮನೆಯಲ್ಲಿಯ ಉತ್ತಮ 'ಫರ್ನಿಚರ್' ಎಲ್ಲವನ್ನು ಸ್ವತಃ ತಾನೇ ಮಾಡಿದ! ಈಗ ಹಿತ್ತಲದಲ್ಲಿ ಒಂದು ದೊಡ್ಡ ಹಣ್ಣಿನ ತೋಟವಿದೆ.—ಪೀಚ್, ಸೇಬು ಮೊದಲಾದ ಹಣ್ಣುಗಳು ತೂಗಾಡುತ್ತಿದ್ದವು ನಾವು ಹೋದಾಗ. ಮನೆಯ ಮುಂದೆ ಒಂದು ದೊಡ್ಡ ಹೂದೋಟವಿದೆ. ತನ್ನ ಉಪಯೋಗ ಕ್ಕಾಗಿ ಮಿ. ಟರ್ನರನು ಒಂದು ಮೋಟರನ್ನು ಕೊಂಡಿದ್ದಾನೆ! ಇದ್ದ ಒಬ್ಬ ಮಗಳ ಲಗ್ನವಾಗಿದೆ. ಆಕೆಯ ಮನೆಯೂ ಪಕ್ಕದಲ್ಲಿದೆ. ಅವರೂ ಶ್ರೀಮಂತರೆಂದು ಕಾಣುತ್ತದೆ. ಸ್ವತಃ ಒಂದು ಮೋಟರನ್ನು ಇಟ್ಟಿ ದ್ದಾರೆ. ಆದರೂ ಆ ಹೆಣ್ಣುಮಗಳು ಕೆಲಸವನ್ನು ಬಿಟ್ಟಿಲ್ಲ: "Ladies Hairdresser" (ಹೆಣ್ಣುಮಕ್ಕಳ ಕೂದಲ ಕೆಲಸದಾಕೆ) ಎಂದು ಪಾಟಿ ಯೊಂದನ್ನು ಹಚ್ಚಿದ್ದಾಳೆ!

ಮಿ. ಟರ್ನರನಾದರೂ ಸುಖದಿಂದ ಇರಬಹುದಾಗಿತ್ತು. ಆದರೆ ಇನ್ನೂ ಹರಕು ಅಂಗಿ ಹಾಕುವದನ್ನು ಆವನು ಬಿಟ್ಟಿಲ್ಲ! ಕೂಲಿಯಂತೆ ಕಾಣುತ್ತಾನೆ. ಇಬ್ಬರು ಮೂವರು ಅತಿಥಿಗಳನ್ನು ಮನೆಯಲ್ಲಿ ಇಟ್ಟು ಕೊಳ್ಳುತ್ತಾನೆ. ನನಗೆ ಎರಡು ಕೋಣೆಗಳನ್ನು ಕೊಟ್ಟಿದ್ದಾರೆ—ಕೂಡಲು ಹಾಗು ಮಲಗಲೆಂದು. ಅಲ್ಲದೆ ಸ್ನಾನಗೃಹವೊಂದಿದೆ. ದಿನಾಲು ಮುಂಜಾನೆ ಫಲಾಹಾರವನ್ನು ಕೊಡಬೇಕು. ಇಷ್ಟಕ್ಕಾಗಿ ಪ್ರತಿವಾರಕ್ಕೆ ನಾನು ೩೦ ಶಿಲಿಂಗ್ ಕೊಡುತ್ತಿರುವೆನು. (ತಿಂಗಳಿಗೆ ಸುಮಾರು ನೂರು ರೂಪಾಯಿಯಾಯಿತು! ಮಧ್ಯಾನ್ಹದ ಊಟವನ್ನು ನಾನು ಹೋಟೆಲ್ಲಿ ನಲ್ಲಿ ಮಾಡುತ್ತೇನೆ: ರಾತ್ರಿಯದನ್ನು ಕಾಲೇಜಿನಲ್ಲಿ). ಬೇರೆ ಆಳು ಮಕ್ಕಳನ್ನು ಸಹ ಈತನು ಇಟ್ಟುಕೊಂಡಿಲ್ಲ. ಮುಂಜಾವಿನಲ್ಲೆದ್ದು ನಾನು ಕೂಡುವ ಕೋಣೆಯನ್ನು ತಾನೇ ಸರಿಪಡಿಸುವನು. ಇದನ್ನು ನಾನು ನೋಡಬಾರದೆಂದು ಅವನ ಮನಸ್ಸು. ನಾನು ಮಲಗುವ ಕೋಣೆಯಿಂದೆದ್ದು ಬರುವಷ್ಟರಲ್ಲಿಯೇ ತನ್ನ ಕೆಲಸವನ್ನು ಮುಗಿಸಲು ಪ್ರಯತ್ನಿಸುವನು. ಅವನ ಎಣಿಕೆಗಿಂತ ಮೊದಲೇ ನಿದ್ದೆತಿಳಿದೆದ್ದು ಕೂಡುವ ಕೋಣೆಯನ್ನು ಅವನು ಸರಿಪಡಿಸುವಾಗ ನಾನು ಪ್ರವೇಶಿ ಸಿದೆನು. ಆಗ ಟರ್ನರನು ನಾಚಿ ಅತ್ತಿತ್ತ ತಿರುಗಾಡುವದನ್ನು ನೋಡಿ ನನಗೆ ನಗೆ ಬಂದಿತು!

ಹೀಗೆ ಮುಂಜಾನೆಯ ಕೆಲಸವನ್ನು ಮುಗಿಸಿಕೊಂಡು ಬಾಯಲ್ಲಿ ಒಂದು 'ಪಾಯಿಪ್' ಇಟ್ಟು ಟರ್ನರನು ಊರ ಪ್ರದಕ್ಷಿಣೆ ಹಾಕಲು ಹೊರಟನೆಂದರೆ ತಿರುಗಿ ಮಧ್ಯಾನ್ಹದ ಊಟದ ಹೊತ್ತಿಗೆ ಮನೆಗೆ ಬರುವ ನೆಂದು ಕಾಣುತ್ತದೆ. ಮಿ. ಟರ್ನರನು ವಿನಯಶಾಲಿ, ಒಂದಿಷ್ಟಾದರೂ ಸೊಕ್ಕಿಲ್ಲ. ಆರೋಗ್ಯವಂತವನು, ಬಲವಂತ.

ಮಿಸೆಸ್. ಟರ್ನರಳ ಸ್ವಭಾವವು ಇನ್ನೂ ಅಭ್ಯಸಿಸುವ ಹಾಗಿದೆ. ನಾವು ಕೋಣೆಗಳನ್ನು ನೋಡಲೆಂದು ಬಂದಾಗ ಹರಕು ಬಟ್ಟೆ ಧರಿಸಿ ಗಂಡಹೆಂಡಿರಿಬ್ಬರು ತೋಟದಲ್ಲಿಯ ಹಣ್ಣನ್ನು ಹರಿದು ಚಳಿಗಾಲಕ್ಕಾಗಿ ಕಾಯ್ದಿಡಲೆಂದು ಅವುಗಳನ್ನು ಸೀಸೆಗಳಲ್ಲಿ ತುಂಬಿಡಹತ್ತಿದ್ದರು.

ಮಿಸೆಸ್. ಟರ್ನರಳಿಗೆ ೫೬ ವರ್ಷಗಳಾಗಿವೆ. ನಾವು ಗಂಟೆ ಬಾರಿಸಿದೆವು. ಅವರಿಬ್ಬರ ಎದೆಯು ಧಡಲ್ಲೆಂದು ಹಾರಿರಬೇಕು! ಇಂಥ ವೇಷದಲ್ಲಿ ಬಂದ ಅತಿಥಿಗಳನ್ನು ಬರಮಾಡಿಕೊಳ್ಳುವದು ಹೇಗೆ? ಕಡೆಗೆ ತೋಟದ ಮರೆಗೆ ನಿಂತು ಅಪರಾಧಿಯಂತೆ ಮಿ. ಟರ್ನರನು ನಮ್ಮನ್ನು ನೋಡಿದನು! ಆಗ ಅವನ ಅಂಜಿಕೆಗಳೆಲ್ಲ ದೂರವಾದವು. ಯಾವ ವೇಷದಲ್ಲಿದ್ದರೂ ನಾವೇನು ತಪ್ಪು ತಿಳಿಯುವದಿಲ್ಲವೆಂದು ಅವನಿಗೆ ಗೊತ್ತು. ಸಕಾಲಕ್ಕೆ ನಡುಮನೆಗೆ ಬಂದು ನಿಂತಿದ್ದ ಮಿಸೆಸ್. ಟರ್ನರಳ ಕಡೆಗೆ ನಮ್ಮನ್ನು ಕರೆದುಕೊಂಡು ಹೋದ.

ಮಿಸೆಸ್. ಟರ್ನರಳು ಅತ್ಯಾದರದಿಂದ ನಮ್ಮನ್ನು ಸ್ವಾಗತಿಸಿದಳು. ಹಣ್ಣುಗಳನ್ನು ಅತ್ತಿತ್ತ ಹರವಿದ್ದಕ್ಕಾಗಿ ಬಹು ಸಂಕೋಚಪಟ್ಟುಕೊಂಡಳು. ತನ್ನ ವೇಷಕ್ಕಾಗಿ ಮರುಗಿದಳು. ನಾನು ಇಲ್ಲಿ ಇರಲು ಬಂದ ಪ್ರಸ್ತಾಪವನ್ನೆತ್ತಿದ ಕೂಡಲೆ ಆನಂದದ ಉದ್ಗಾರಗಳನ್ನು ತೆಗೆದಳು: "I like Indians. I admire them. I think them great." (ಹಿಂದೂ ಜನರೆಂದರೆ ನನಗೆ ಸೇರಿಕೆ, ನಾನವರನ್ನು ಕೊಂಡಾಡುತ್ತೇನೆ. ಅವರು ದೊಡ್ಡವರೆಂದು ನನ್ನ ತಿಳಿವಳಿಕೆ) ಎಂದು ಮುಂತಾಗಿ ಹೇಳಿದಳು. ಇದೇ ಕೋಣೆಗಳಲ್ಲಿ ಹಿಂದಿದ್ದ ಭಾರತೀಯರ ಛಾಯಾಚಿತ್ರಗಳನ್ನು ತೋರಿಸಿದಳು. ಅಲಾಹಾಬಾದಿನಿಂದ ಬಂದ ಒಬ್ಬ ಪ್ರೊಫೆಸರ್ ಹಾಗು ಅವರ ಹೆಂಡತಿ ಇಲ್ಲಿದ್ದರಂತೆ. ಆ ಪ್ರೊಫೆಸರರ ಹೆಂಡತಿಯ ಸದ್ಗುಣಗಳನ್ನು ಮಿಸೆಸ್. ಟರ್ನರಳು ಬಹಳವಾಗಿ ವರ್ಣಿಸಿದಳು: "I do not know why Indian boys fall in love with English girls. Grace, my daughter is a little vixen, but even she said: "I only wish we were half as nice as she is." (ಹಿಂದುಸ್ಥಾನದ ಹುಡುಗರು ಯಾಕೆ ಇಂಗ್ಲಿಶ್ ಹುಡಿಗೆಯರ ಪ್ರೀತಿಜಾಲದಲ್ಲಿ ಸಿಲುಕುವರೋ ನಾನರಿಯೆ. ಅಯ್ಯೋ, ನನ್ನ ಮಗಳೆಂದರೆ ಇಂಥ ತುಂಟಳು! ಅವಳಾದರೂ ಅಂದಳು 'ಅವಳ(ಆ ಪ್ರೊಫೆಸರನ ಹೆಂಡತಿ) ಅರ್ಧದಷ್ಟು ಲೇಸಾಗಿ ನಾವು ಇರಬಾರದೇ ಎಂದು ಬಯಸುತ್ತೇನೆ'). ಆ ಬಣ್ಣವೊಂದೇ

ಅವಳನ್ನು ಬೇರೆಯಾಗಿಸಿತ್ತು. ಒಂದು ಬುರುಖೆಯನ್ನು ಮೋರೆಗೆ ಹಾಕಿದರೆ,—ಇವಳು ಆಂಗ್ಲ ಸ್ತ್ರೀಯೆಂದು ಎದೆ ತಟ್ಟಿ ಹೇಳಬಹುದಾಗಿತ್ತು ಎಂದುಮುಂತಾಗಿ ಮಿಸೆಸ್. ಟರ್ನರಳು ಉದ್ಘೋಷಿಸಿದಳು. ಮಾತಿನಭರದಲ್ಲಿ ಅವಳ ಪರಿವೆಯೇ ಅವಳಿಗುಳಿಯಲಿಲ್ಲ. ಬುರುಖೆಯನ್ನು ಹಾಕಿದರೆ ಭಾರತೀಯ ರಮಣಿಯು ಆಂಗ್ಲ ಸ್ತ್ರೀಯಂತೇಕೆ, ಯಾರು ಯಾರಂತೆಯೂ ಕಾಣಬಹುದು! ಈ ಕಟು ಸತ್ಯವು ಮಿಸೆಸ್. ಟರ್ನರಳಿಗೆ ಹೊಳೆದಂತೆ ತೋರಲಿಲ್ಲ. ಡಿಕೆನ್ಸನ ಕಾದಂಬರಿಗಳಲ್ಲಿಯ ಮಿಸೆಸ್ ಗ್ಯಾಂಪ್ 'Ain't I voluble?' (ನಾನು ಮಾತಾಳಿಯಿಲ್ಲವೇ?) ಮೊದಲಾದ ಪಾತ್ರಗಳಂತೆ ಅಗಾಧವಾದ ಮಾತಿನ ಹುಚ್ಚು ಹೊಳೆಯನ್ನು ಹರಿಸಿಬಿಟ್ಟಳು.

ಸುಮಾರು ಇನ್ನೂರು ಕೋಳಿಗಳನ್ನು ಸಾಕಿದ್ದಾಳೆ ಮಿಸೆಸ್ ಟರ್ನರಳು! ಕೋಳಿಯ ಮಾತನ್ನೆತ್ತಿದಾಗ ಆಕೆಗೆ ಎಷ್ಟು ಸಂತೋಷವಾಯಿತು! ಬೆಳೆಯುತ್ತಿರುವ ಕೋಳಿಯ ಸಂಸಾರವನ್ನೆಲ್ಲ ಹುರುಪಿನಿಂದ ಬಣ್ಣಿಸಿದಳು. ಗುಬ್ಬಿಗಳು ಹಣ್ಣನ್ನು ಕುಕ್ಕಿ ಕೆಡಹುವ ಮಾತು ಬಂದಿತು "It is mischief. The sparrows here are mischievous They destroy the fruit, like this (ಅದು ತುಂಟತನ. ಇಲ್ಲಿಯ ಗುಬ್ಬಿಗಳು ತುಂಟ ಇವೆ. ಹಣ್ಣು ಹಾಳುಮಾಡುತ್ತವೆ ಹೀಗೆ) (ಮೇಜಿನ ಮೇಲಿಟ್ಟ ಹೂವಿನ ಹೂಜಿಯೊಳಗಿಂದ ಒಂದು ಹೂವನ್ನು ಕಿತ್ತು ಕೆಳಗೊಗೆದು ತೋರಿಸಿದಳು ಮಿಸೆಸ್. ಟರ್ನರಳು.) They are destructive. Are'nt the sparrows in India destructive?' (ಅವು ಖೋಡಿ ಇವೆ. ಹಿಂದುಸ್ಥಾನದಲ್ಲಿ ಗುಬ್ಬಿ ಹೀಗಿಲ್ಲವೇ? ಎಂದು ಕೇಳಿದಳು.

'ಹೌದು' ಎಂದು ನಾವು ಉತ್ತರ ಕೊಟ್ಟೆವು. ಇದೇ ರೀತಿಯಾಗಿ ಮಾತು ಬೆಳೆದಿತು.

ನಾನು ಮಲಗುವ ಕೋಣೆಯನ್ನು ಸ್ವಚ್ಛಮಾಡುವ ಕೆಲಸವು ಹಾಗೆಯೇ ಉಳಿದಿದೆ. ಇಂಥ ಚಿಲ್ಲರೆ ಕೆಲಸವನ್ನು ತಾನೇ ಮಾಡಿ ಆಳಿಗೆ ಕೊಡಬಾರದೆಂದು ಮಿಸೆಸ್. ಟರ್ನರಳ ಇಚ್ಛೆ. ಆದರೆ ಆಕೆ ತಾನೇ

ಮಾಡಿದಳೆಂಬುದು ನನಗೂ ಗೊತ್ತಾಗಿರಬಾರದು! "Are you up this morning? We have yet to air your room. There is a woman coming this morning and she will do it." 'ನೀವು ಎದ್ದಿರಾ? ನಿಮ್ಮ ಕೋಣೆಯನ್ನು ಇನ್ನೂ ಸ್ವಚ್ಛಮಾಡಬೇಕು. ಈ ಬೆಳಿಗ್ಗೆ ಒಬ್ಬ ಹೆಂಗಸು ಬಂದು ಮಾಡುತ್ತಾಳೆ' ಎಂದು ಹೇಳಿದಳು. ನಾನು ಇಲ್ಲಿ ಕೆಳಗಿನ ಕೋಣೆಯಲ್ಲಿ ಬರೆಯುತ್ತ ಕುಳಿತಿದ್ದೇನೆ. ಅಲ್ಲಿ ತಾನೇ ದುಡಿಯುತ್ತಿದ್ದಾಳೆ, ಮಿಸೆಸ್. ಟರ್ನರಳು!

ಏನೇ ಇರಲಿ. ಗಂಡ-ಹೆಂಡಿರಿಬ್ಬರೂ ಉದ್ಯೋಗಪ್ರಿಯರು. ಮುಂಜಾವಿನಿಂದ ಬಂದೇ ಸಮನೆ ದುಡಿಯುವದರಲ್ಲಿ ಅವರ ಹೊತ್ತೆಲ್ಲ ಕಳೆಯುವದು. "ಉಳಿದ ಹೆಣ್ಣುಮಕ್ಕಳಂತೆ ಚಂದನ್ನ ಅರಿವೆಯ ಮೇಲೆ ನಾನೇನು ದುಡ್ಡು ಖರ್ಚು ಮಾಡಲಿಲ್ಲ. ದೊಡ್ಡ ಮನೆ ಕಟ್ಟಿಸಿಕೊಂಡೆ." ಎಂದು ಆಕೆ ಹೇಳುವದು ಅಕ್ಷರಶಃ ನಿಜ. ಸಂಜೆಯವರೆಗೆ ದುಡಿದು ರಾತ್ರಿ ಊಟದ ಹೊತ್ತಿಗೆ 'ರೇಡಿಯೋ' ಕೇಳುತ್ತ ಕೂಡುತ್ತಾರೆ ಪತಿಪತ್ನಿಯರು ಅಡುಮನೆಯಲ್ಲಿ.

ಆಂಗ್ಲರ ಸಾಮ್ರಾಜ್ಯವು ಬೆಳೆದಂದಿನಿಂದ ಹೊಸ ಸ್ವಭಾವದ ಮಾದರಿಗಳು ಇಲ್ಲಿ ಉದ್ಭವಿಸಿವೆ. ಟರ್ನರನ ಮನೆತನವನ್ನೇ ತೆಗೆದು ಕೊಳ್ಳೋಣ. ತೀರ ಸಾದಾ ಮನೆತನವಿದು. ಸಾಮ್ರಾಜ್ಯವೈಭವದ ಮಹಾಪೂರದಲ್ಲಿ ಇವರಿಗೂ ಸಂಪತ್ತು ಬಂದಿದೆ. ಹಳ್ಳಿಗಾಡಿನಲ್ಲಿ ಬೆಳೆದವರಿವರು. ಇವರ ಉಚ್ಚ ಸ್ಥಿತಿಯಲ್ಲಿಯೂ ಕೂಡ ಮೊದಲಿಗಿದ್ದಿರ ಬಹುದಾದ ಸದ್ಗುಣಗಳೂ ಸ್ವಭಾವವೈಚಿತ್ರ್ಯಗಳೂ ಒಡೆದುಕಾಣುತ್ತವೆ.

ಉದ್ಯೋಗಪ್ರಿಯತೆಯಂತೆ ರಸಿಕತೆಯೂ ಇವರಲ್ಲಿ ಮನೆಮಾಡಿ ಕೊಂಡಿದೆ. ಇವರು ಕೋಣೆಗಳನ್ನು ಸಿಂಗರಿಸಿರುವ ರೀತಿಯು ತಲೆದೂಗು ವಂತಹದು. ನನ್ನ ಕೋಣೆಯೆದುರು ಗೊಂಬಿಯಾಟದ ಹೊಂಡ ವೊಂದನ್ನು ರಚಿಸಿದ್ದಾರೆ. ಅದರಲ್ಲಿ ಸ್ನಾನಕ್ಕಿಳಿದ ಎರಡು ಪ್ರತಿಮೆಗಳು ನಿಂತಿವೆ! ಎರಡೂ ಹೆಣ್ಣು. ಮಿಸೆಸ್. ಟರ್ನರಳೊಡನೆ ಮಾತನಾಡಿದಾಗ ಈ ಹೊಂಡದ ವರ್ಣನೆಯನ್ನು ಕೇಳುವ ಸುಸಂಧಿಯು ದೊರೆಯಿತು.

ಅದರಲ್ಲಿದ್ದ ಐದು ಕೆಂಪು ಮೀನಗಳನ್ನು (gold-fish) ಆಕೆ ತೋರಿಸಿದಳು. ಮಳೆ ಬಂದು ಆ ಪ್ರತಿಮೆಗಳ ಮೈಮೇಲಿಂದ ಹನಿಗಳು ಉದುರುತ್ತಿರುವಾಗ ಅವು ನಿಜವಾಗಿ ಮೈತೊಳೆದುಕೊಳ್ಳುವಂತೆ ಕಾಣುತ್ತವೆಂದು ಹೇಳಿದಳು. ತನ್ನ ಮನೆಯ, ಸನ್ನ ಕೋಣೆಯ ಹಾಗು ತನ್ನ ಛಾಯಾ ಚಿತ್ರಗಳನ್ನು ಕೊಟ್ಟು ಅವನ್ನು ಊರಿಗೆ ನನ್ನ ಮನೆಯವರಿಗೆ ನೋಡಲಿಕ್ಕೆಂದು ಕಳಿಸಲು ಹೇಳಿದಳು. ಮಿ. ಟರ್ನರರ ಫೋಟೋವನ್ನು ಕೊಡಲಿಲ್ಲ. ಇದ್ದ ಫೋಟೋದಲ್ಲಿ ಮೋರೆ ಸೊಟ್ಟ ಮಾಡಿ ಕುಳಿತಿರುವನೆಂದು ಗಂಡನನ್ನು ಅಣಕಿಸಿ ತೋರಿಸಿದಳು! ಅದನ್ನು ಆಕೆ ಕೊಡಲಿಲ್ಲ! ಅದಕ್ಕಿಂತ ಸರಿಯಾದುದನ್ನು ಕೊಡುವೆನೆಂದು ಹೇಳಿದಳು.

ನನ್ನ ಮಕ್ಕಳ ಛಾಯಾಚಿತ್ರವನ್ನು ಮಿಸೆಸ್. ಟರ್ನರಳು ನೋಡಿದಳೆಂದು ಬರೆದಿದ್ದೆನಷ್ಟೆ? ಅದನ್ನು ಎದೆಗವಚಿಕೊಂಡು "two little scamps! loyely!" (ಎರಡು ಚಿಕ್ಕ ಠಕ್ಕರು! ಛೆಂದಾಗಿದೆ!) ಎಂದು ಉದ್ಗಾರತೆಗೆದಳು. ಆ ಮೇಲೆ ಆಕೆಗೆ ಒಂದು ಸಂಶಯ ಬಂದಿತು: "you know what scamps mean! we call little children scamps, rogues,- it is purely out of love." (ಸ್ಕ್ಯಾಂಪ್ಸ ಅಂದರೇನು ನಿನಗೆ ಗೊತ್ತಿದೆಯೇ? ಚಿಕ್ಕಮಕ್ಕಳಿಗೆ ನಾವು ಸ್ಕ್ಯಾಂಪ್ಸ (ಠಕ್ಕರು) ಎನ್ನುತ್ತೇವೆ. ಅದೂ ಅಕ್ಕರತೆಯಿಂದ ಮಾತ್ರ) ಇಂಥ ವಿರೋಧಾಭಾಸವು ನಮ್ಮ ಭಾಷೆಗೂ ಅಪರಿಚಿತವಲ್ಲವೆಂದು ನಾನು ಮಿಸೆಸ್. ಟರ್ನರಳಿಗೆ ಹೇಳಿದೆ.

'Did you never wish that you had a boy' (ನಿನಗೆ ಹುಡುಗ ಆಗಬೇಕೆಂದು ನಿನಗೆ ಎಂದೂ ಅನಿಸಲಿಲ್ಲವೇ?) ಎಂದು ಒಮ್ಮೆಲೆ ಆಕೆ ಪ್ರಶ್ನಿಸಿದಳು.

ಹೆಣ್ಣೇನು, ಗಂಡೇನು, ಎಲ್ಲವೂ ನನಗೆ ಒಂದೇ ಎಂದು ನಾನು ಉತ್ತರ ಕೊಟ್ಟೆ.

"Yes, when I married, I made up my mind that I would have a boy and a girl. I would rather like a daughter much better than a son for girls continue to love us. A boy



ಟರ್ನರರ ಮನೆಯ ಒಳಭಾಗ

( ಪುಟ ೫೯ )



ಗೋಕಾಕರು ಅತಿಥಿಯಾಗಿದ್ದ ಟರ್ನರರ ಮನೆ

( ಪುಟ ೪೯ )

takes to wife, and then they seem to forget" (ಹೌದು, ನಾನು ಮದುವೆಯಾದಾಗ, ಒಂದು ಗಂಡು, ಒಂದು ಹೆಣ್ಣು ಆಗಬೇಕೆಂದು ಮನಸ್ಸು ಮಾಡಿದೆ. ಆದರೆ ಹೆಣ್ಣು ನನಗೆ ಹೆಚ್ಚು ಸೇರಿಕೆ. ಯಾಕೆಂದರೆ ಹುಡುಗಿಯರು ಯಾವಾಗಲೂ ನಮ್ಮನ್ನು ಪ್ರೀತಿಸುವರು. ಹುಡುಗ ನಾದರೊ, ಮದುವೆಯಾಗುವನು-ಆ ಮೇಲೆ ನಮ್ಮನ್ನು ಮರೆತು ಬಿಡ ಬಹುದು.) ಎಂದು ಮಿಸೆಸ್. ಟರ್ನರಳು ಹೇಳಿದಳು. ಈಗ ಅವಳಿಗೆ ಒಬ್ಬ ಮಗಳಿದ್ದಾಳೆ. ಒಬ್ಬ ಮಗನಿದ್ದಾನೆ, ಬರ್ಮಿಂಗ್ಹ್ಯಾಮಿನಲ್ಲಿ. ಇಬ್ಬರದೂ ಲಗ್ನವಾಗಿದೆ. ಇನ್ನೊಬ್ಬ ಮಗಳಿದ್ದಳಂತೆ: ಅತಿ ಸುಂದರಿ ಯಾದ, ಸದ್ಗುಣಿಯಾದ ಮಗಳು,— 'A god above all gods' (ದೇವರುಗಳ ಮೇಲಿನ ದೇವತೆ) ಎಂದು ಮಿಸೆಸ್. ಟರ್ನರಳು ಅವಳನ್ನು ನೆನೆಸುತ್ತಾಳೆ. ಹದಿನಾಲ್ಕು ವರ್ಷದವಳಿರುವಾಗ ಆ ಮಗಳು ತೀರಿ ಹೋದಳಂತೆ. ಇದನ್ನೆಲ್ಲ ಹೇಳುವಾಗ ಮುದುಕಿಯ ಕರಳು ಕುದಿ ಯಿತು, ಕಣ್ಣೀರು ಬಂತು. ತಾಯ್ಗರುಳು ಎಲ್ಲೆಡೆಗೂ ಒಂದೇ!

ಐದನೆಯ ತಾರೀಖಿನ ಮುಂಜಾನೆ ವಿಲಾಯತಿಯಲ್ಲಿ ಚಳಿಗಾಲವು ಸುರುವಾಯಿತು. ದೇಶದ ತುಂಬೆಲ್ಲ ಗಡಿಯಾಳುಗಳನ್ನು ಒಂದು ತಾಸು ಹಿಂದೆ ಸರಿಸುವರು ಈ ಹೊತ್ತು! "Winter starts on Sunday!" (ಆದಿತ್ಯವಾರ ದಿನ ಚಳಿಗಾಲಕ್ಕೆ ಆರಂಭ) ಎಂದು ಚಳಿಗಾಲದ ನಿಲುವಂಗಿಯ ಜಾಹಿರಾತಿನಲ್ಲಿ ಸಹ ನೋಡಿದೆ. ಇಷ್ಟೇ ಅಲ್ಲ, ಲಾಯನ್ಸ್ ಹೋಟೆಲ್ಲಿನಲ್ಲಿ ಹಳದಿ ಬಣ್ಣದ ಭೋಜನ ಪತ್ರಿಕೆಯನ್ನು ಮೇಜಿನ ಮೇಲಿರಿಸುತ್ತಿದ್ದರು. ಆದರೆ ಬೆಳೆಗಾಲವು ಹೋಗಿ ಕುಳಿರ್ಗಾಲವು ಬಂದಿರುವದಕ್ಕಾಗಿ ಅವರು ರವಿವಾರದಿಂದ ಕೆಂಪು ಬಣ್ಣದ ಭೋಜನ ಪತ್ರಿಕೆಯನ್ನು ಇಡಹತ್ತಿದ್ದಾರೆ!

ಇನ್ನೊಂದು ವಿಷಯುವನ್ನು ಇಲ್ಲಿ ಬರೆಯುಬೇಕಾಗಿದೆ. ಆಕ್ಸಫರ್ಡ ದಲ್ಲಿಯ ಇಂಡಿಯನ್ ಇನ್ಸ್ಟಿಟ್ಯೂಟಕ್ಕೆ ಹೋಗಿದ್ದೆ. ಇಲ್ಲಿ ಅಡಿಗೆಯ ಪಾತ್ರೆಗಳಿವೆ, ತಾಟು-ಬಟ್ಟಲಗಳಿವೆ, ದೇವರ ತೇರುಗಳಿವೆ, ದೇವತೆಗಳ ಪ್ರತಿಮೆಗಳಿವೆ, ಚಿತ್ರಗಳಿವೆ. ಎಲ್ಲಕ್ಕೂ ಒಂದೊಂದು ಚೀಟಿ ಬರೆದು

ಮಂಕುಬಡಿಸಿದಂತೆ ಕಾಜಿನ ಕಪಾಟಿನಲ್ಲಿ ಕೂಡಿಸಿದ್ದಾರೆ. ಸಮಯ-ಸಂದರ್ಭಗಳ ಬೆಂಬಲವಿಲ್ಲದ ಈ ಚಿತ್ರ-ಪ್ರತಿಮೆಗಳನ್ನು ನೋಡಿ ವಿದೇಶಿಯರು ನಮ್ಮನ್ನು ಕೀಳೆಂದು ಕರೆಯಬೇಕು. ಮಾರುತಿಯು ತನ್ನ ತಾಯಿಯ ತೊಡೆಯ ಮೇಲೆ ಕುಳಿತ ಪ್ರತಿಮೆಯೊಂದಿದೆ. ಅದನ್ನು 'Sita with Hanuman' (ಹನುಮಂತನ ಕೂಡ ಇದ್ದ ಸೀತೆ.) ಎಂದು ಕರೆದಿದ್ದಾರೆ!

ಇಲ್ಲಿಯ ಪೋರ್ಟರನು ಮಾತುಗಸಿದ್ದಾನೆ. ಹರಟೆ ಬೇಕವನಿಗೆ. ತಾನು ಹಿಂದುಸ್ತಾನದಲ್ಲಿ ಸೈನಿಕನಾಗಿದ್ದುದನ್ನು ಅವನು ಮೇಲಿಂದ ಮೇಲೆ ಹೇಳಿಕೊಳ್ಳುತ್ತಾನೆ. ಅಲ್ಲಿ ಅನೇಕ ಆನೆಗಳನ್ನೂ ನೂರಾರು ಹುಲಿಗಳನ್ನೂ ಹೊಡೆದೆನೆಂದು ಹೇಳುತ್ತಾನೆ. ಇದರಲ್ಲಿ ಎಲ್ಲವೂ ಬಾಯಿಬಡಾಯಿಯಿರಬಹುದೇ? ಈಗ ಕಳಿಸಿದರೆ ಕೂಡ ಹಿಂದುಸ್ತಾನಕ್ಕೆ ಹೋಗುವ ಮನಸ್ಸಿದೆಯಂತೆ ಅವನಿಗೆ! ವಿಲಾಯತಿಯಲ್ಲಿ, ರಾಜರು ಬಂದರೆ, ಲಾರ್ಡ್ಸ್ ಯಾರಾದರೂ ಬಂದರೆ ಮಧ್ಯರಾತ್ರಿಯಲ್ಲಿ ಸಹ ಕೆಲಸಕ್ಕಾಗಿ ಎದ್ದು ಬರಬೇಕು. ಹಿಂದುಸ್ತಾನದಲ್ಲಿ ತನಗೆ ಕೊಟ್ಟ ಕೆಲಸವನ್ನು ಮುಗಿಸಿದರೆ ತೀರಿತು. ಹೊರಗಿನಿಂದ ಯಾರಾದರೂ ಬಂದರೂ ಸಹ ಮೂರು ದಿವಸ ಮೊದಲು ತಿಳಿಸಬೇಕಾಗುವದು. ಪರದೇಶದಲ್ಲಿ ಮನುಷ್ಯನು ಬಹಳ ಜಾಗರೂಕನಾಗಿರುತ್ತಾನೆ, ವಿಲಾಯತಿಯಲ್ಲಿ ಸಾಲವಾಗುತ್ತದೆ, ಇತ್ಯಾದಿ, ಇತ್ಯಾದಿ. ಸಾಮ್ರಾಜ್ಯ ವೈಭವ ಹಾಗು ಅನಾಗರಿಕತೆ ಈ ಜೋಡಿಯಿಂದುಂಟಾದ ಸ್ವಭಾವ ವೈಚಿತ್ರ್ಯಗಳಲ್ಲಿ ಈ ಪೋರ್ಟರನದೂ ಒಂದು!

---

## ೧೪

. . . . . . .

ಆಕ್ಸಫರ್ಡ್
೭—೧೦—೩೬

ಇವತ್ತು 'Commoner's gown' (ಕಾಮನರ್ಸ್ ಗೌನ್) ಹಾಗು cap (ಕ್ಯಾಪ) ಕೊಂಡೆ! ಕಾಲೇಜಿಗೆ ಹೋಗುವಾಗ, ನಾನು ಇವನ್ನು ಹಾಕಿಕೊಂಡೇ ತೀರಬೇಕು! ಸ್ಕಾಲರರ 'gown' (ಗೌನ) ಬೇರೆ. ಪ್ರೊಫೆಸರರದು ಬೇರೆ ಎಲ್ಲವೂ ಬೇರೆಯಾಗಿದೆ. ಇವತ್ತು ಮತ್ತೆ ಮಿಸೆಸ್. ಟರ್ನರಳೊಡನೆ ಮಾತುಕತೆಯಾಯಿತು. ಇಲ್ಲಿಯ ಸರ್ವ ಸಾಮಾನ್ಯ ಸ್ತ್ರೀಯರಿಗೆ ಕೂಡ ವಿಶೇಷ ಸಂಸ್ಕೃತಿಯಿದ್ದಂತೆ ಕಾಣುತ್ತದೆ. ವರ್ತಮಾನಪತ್ರ, ರೇಡಿಯೊ ಎಲ್ಲದರ ಪ್ರಭಾವವಿದು. ಅಡಿಗೆಯ ಒಲೆಯ ಹತ್ತಿರ ರೇಡಿಯೋವನ್ನು ಇಟ್ಟುಕೊಂಡಿದ್ದಾಳೆ ಮುದುಕಿ! ಹೊಟ್ಟೆಗಾಗಿ ದುಡಿಯುವಾಗ ಜಗತ್ತಿನ ರಾಜಕಾರಣವೆಲ್ಲ ಅವಳಿಗೆ ಗೊತ್ತಾಗುತ್ತದೆ. ಚಂದ್ರಲೋಕದಲ್ಲಿಯ ಮನುಷ್ಯ, ಆಗಬಹುದಾದ ಮಹಾಯುದ್ಧ, ಅಬಿಸೀನಿಯ, ಫ್ರಾನ್ಸದೇಶದ ನಾಣ್ಯಗಳ ಕಿಮ್ಮತ್ತು ಇಳಿಯಿತೇಕೆ? ಇವೇ ಮೊದಲಾದ ವಿಷಯಗಳ ಮೇಲೆ ಮುದುಕಿಯು ಬಲು ಚೆನ್ನಾಗಿ ಮಾತನಾಡಿದಳು!

ಒಂದು 'tie'(ಟಾಯ್) ಹಾಗು 'scarf'(ಸ್ಕಾರ್ಫ) ಕೊಂಡೆ. ಪ್ರತಿಯೊಂದು ಕಾಲೇಜು ಒಂದೊಂದು ಬಣ್ಣವನ್ನು ಸ್ವೀಕರಿಸಿದೆ. ವಿದ್ಯಾರ್ಥಿಯ 'tie' (ಟಾಯ್) ಇಲ್ಲವೆ 'scarf'(ಸ್ಕಾರ್ಫ) ದಿಂದ ಅವನ ಕಾಲೇಜನ್ನು ಸಹಜವಾಗಿ ತಿಳಿಯಬಹುದು. ಹೀಗೆ ಉಡುಪು

ಧರಿಸುವದು ಬಲುಮಟ್ಟಿಗೆ ನಿಯಮಕ್ಕೋಸ್ಕರವಲ್ಲ, ಬಲುಮಟ್ಟಿಗೆ ಸಂಪ್ರದಾಯಕ್ಕಾಗಿ.

* * * *

೯—೧೦— ३೬

ಎಂಟನೆಯ ತಾರೀಖು ಸನ್ನ ಸಾಮಾನು ಬಂದದ್ದರಿಂದ ಅದರಲ್ಲಿ ತೊಡಗಿಬಿಟ್ಟೆ. ಇಂದು ಮಾತ್ರ ಮುಂಜಾವಿನಿಂದ ಸಂಜೆಯವರೆಗೆ ಕೆಲಸದಲ್ಲಿ ಹೋಯ್ತು! ಪ್ರಿ. ಹ್ಯಾಜೆಲ್ ಅವರಿಗೆ ಭೆಟ್ಟಿಯಾದೆ! ಯೋಗ್ಯ ವಿದ್ವಾಂಸರಿದ್ದಾರೆ. ನರೆಗೂದಲಿಗಷ್ಟೆ ಮರ್ಯಾದೆಯೆಂದಲ್ಲ! ಮುಂಜಾನೆ ಎಂಟು ಗಂಟೆಗೆ 'roll-call' (ಹಾಜರಿ) ಇತ್ತು. ಅದೊಂದು ಶಾಸ್ತ್ರಬದ್ಧ ವಿಧಿಯೇ ಆಯಿತು. ಎಲ್ಲ ಹುಡುಗರೂ ಕಾಲೇಜಿಗೆ ಬಂದಾಗ ಹೊಸ ದೊಂದು ಶೋಭೆ ಬಂತು.

ಶರ್ವುಡ್ (Sherwood) ಎಂಬ ಅಮೇರಿಕನ್ ವಿದ್ಯಾರ್ಥಿಯು ಆಂಗ್ಲಸಾಹಿತ್ಯದ ಅಭ್ಯಾಸಕ್ಕಾಗಿ ಇಲ್ಲಿಗೆ ಬಂದಿದ್ದಾನೆ. ಇಂಗ್ಲಿಷಿಗಾಗಿ ಜಿಸಸ್ ಕಾಲೇಜಿನಲ್ಲಿ ನಾವಿಬ್ಬರೆ! ಶಿಕಾಗೊ ವಿಶ್ವವಿದ್ಯಾಲಯದ ಬಿ. ಎ. ಆಗಿ ಬಂದಿದ್ದಾನೆ ಆತ. ಪಕ್ಕಾ ಕಮ್ಯೂನಿಸ್ಟ. ನಾಲ್ಕು ತಾಸು ಅಭ್ಯಾಸ ಮಾಡಿ ಉಳಿದ ವೇಳೆಯನ್ನೆಲ್ಲ ಚಳವಳಿಯಲ್ಲಿ ಕಳೆಯುವೆನೆಂದು ಹೇಳುತ್ತಾನೆ! ಕ್ರಿಶ್ಚನ್ ಧರ್ಮವು ಇಂದು ಸತ್ತುಹೋಗಿದೆ. 'Communism' (ಕಮ್ಯುನಿಝಂ) ಜಗತ್ತಿನಲ್ಲಿ ಇಷ್ಟೇಕೆ ಹಬ್ಬುತ್ತಿದೆ ಗೊತ್ತಿದೆಯೊ? ಅದೊಂದೇ ಮಾನವನ ವಿಶ್ವಾಸವನ್ನು ಪಡೆದ ಧರ್ಮವಾಗಿದೆ ಈಗ! ಇದು (ಶರ್ವುಡ್)ನ ಮತ. ಬಹಳ ಒಳ್ಳೆಯ ಹುಡುಗ. ಈಗಾಗಲೆ ನನ್ನೊಡನೆ ಸಲಿಗೆಯನ್ನು ಬೆಳೆಸಿದ್ದಾನೆ.

ಬ್ರೆಟ್‌ಸ್ಮಿಥ್ ಹಾಗು ರೆನಾ ಎಂಬ ಇಬ್ಬರು ಟ್ಯೂಟರರನ್ನು ಇಂದು ನಾವಿಬ್ಬರೂ ಕೂಡಿ ಭೆಟ್ಟಿಯಾದೆವು. ಇಬ್ಬರೂ ಒಳ್ಳೆಯ ವಿದ್ವಾಂಸರಾಗಿ ಕಾಣುತ್ತಾರೆ. 'ಶಿಕಾಗೋದಲ್ಲಿ ಇಂಥ ದೊಡ್ಡ ವಿದ್ವಾಂಸರಿರುವಾಗ ನೀನು ಇಲ್ಲಿಗೇಕೆ ಬಂದೆ?' ಎಂದು ಅವರು ಶರ್ವುಡ್ಡನನ್ನು ಕೇಳಿ "I do not know about the Bombay Standard" (ಮುಂಬೈಯ ಪ್ರಮಾಣವು ನನಗೆ ಗೊತ್ತಿಲ್ಲ) ಎಂದು

ನನ್ನ ಕಡೆಗೆ ಅರ್ಥಪೂರ್ಣವಾಗಿ ನೋಡಿದರು. "Bombay has yet to establish a standard" (ಮುಂಬೈಯು ಇನ್ನೂ ತನ್ನ ಪ್ರಮಾಣವನ್ನು ಸ್ಥಾಪಿಸಿಕೊಳ್ಳುವದಿದೆ) ಎಂದು ನಾನು ಹೇಳಿದೆ. "ಅದು ನಿಜ. ಸಂಸ್ಕೃತ-ಇತಿಹಾಸ ಮುಂತಾದ ವಿಷಯಗಳನ್ನು ಕುರಿತು ಅಲ್ಲಿ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಆದರೆ ಇಂಗ್ಲಿಷಿನಲ್ಲಿ ಆಗುವದು ಶಕ್ಯವಿಲ್ಲ" ಎಂದು ಅವರು ಒಪ್ಪಿಕೊಂಡರು.

ನನ್ನ ಮಾತೃಭಾಷೆಯು ಕನ್ನಡವೆಂದು ಕೇಳಿ ಅವರಿಗೆ ಆನಂದವಾಯಿತು. ಮದ್ರಾಸಿನಲ್ಲಿ ಅವರು ಕೆಲವು ವರ್ಷವಿದ್ದಾಗ ಮಂಗಳೂರಿನ ಕಡೆಯ ವಿದ್ಯಾರ್ಥಿಗಳ ಪರಿಚಯವು ವಿಶೇಷವಾಗಿತ್ತಂತೆ.

ಇಂದು ಕಾಲೇಜಿನಲ್ಲಿಯೇ ನನ್ನ ಊಟವಾಯಿತು. ವಾರಕ್ಕೆ ಎರಡು ಸಲವಾದರೂ ಅಲ್ಲಿ ಆಗಲೇಬೇಕು. 'ಶರ್ವುಡ್' ನನ್ನ ಹತ್ತಿರ ಇದ್ದ ಕಾರಣ ನನಗೆ ವಿಶೇಷ ಅಡಚಣಿಯಾಗಲಿಲ್ಲ. 'Table manners' (ಟೇಬಲ್ ಮ್ಯಾನರ್ಸ: ಊಟದ ನಿಯಮಗಳು) ನನ್ನವು ತಪ್ಪಿದರೂ ಅವನು ಸುಧಾರಿಸಿಕೊಳ್ಳುತ್ತಿದ್ದ. ಒಮ್ಮೆ ಗೋಮಾಂಸವನ್ನು ಬಡಿಸಿದರು ಎಲ್ಲರಿಗೂ. ನಾನು ಬೇಡವೆಂದೆ. ಅದನ್ನು ಕೇಳಿದ ಎಲ್ಲರಿಗೂ ನಗೆ ಬಂತು. 'ಹಾಗಾದರೆ ನೀನು ಇಂಗ್ಲಂಡಕ್ಕೆ ಬಂದದ್ದೇಕೆ?' ಎಂದು ಶರ್ವುಡ್ ನಗೆಯಾಡಿದ.

* * * *

೧೦—೧೦—೩೬

ಇಂದು 'Formal admission' (ವಿಧಿಪೂರ್ವಕವಾದ ಪ್ರವೇಶ) ಆಯಿತು. ರಾತ್ರಿ ಊಟಕ್ಕೆ ಕಾಲೇಜಿಗೆ ಹೋಗಿದ್ದೆ. ನನ್ನ ಹತ್ತಿರ ಕುಳಿತ ಆಂಗ್ಲ ವಿದ್ಯಾರ್ಥಿಯು 'Empire Defence Club' (ಎಂಪಾಯರ ಡಿಫೆನ್ಸ ಕ್ಲಬ್)ದ ಕಾರ್ಯದರ್ಶಿಯಿದ್ದ. ನಾನು ಅದರ ಸದಸ್ಯನಾಗಬಹುದೇನೆಂದು ಕೇಳಿದ. ನಾನೇನು ಉತ್ತರಕೊಡಬೇಕು? ವಿಚಾರ ಮಾಡಿ ತಿಳಿಸುವೆನೆಂದೆ.

* * * *

೧೧—೧೦—೩೬

ಆಕ್ಸಫರ್ಡಿಗೆ ಬಂದ ಮೇಲೆ ನಾನು ನಿಜವಾದ ಆನಂದನಿಮಿಷಗಳನ್ನು ಅನುಭವಿಸಿದ್ದೆಂದರೆ ಇಂದು ಸಂಜೆಗೆ. ಇಲ್ಲಿ ನೆಲವೇ ಎದ್ದು ಬಂದು ಬಡಿಯುತ್ತಿತ್ತು. ಇಲ್ಲಿಯ ಏಕಾಂತವು ಭಯಂಕರವಾಗಿತ್ತು. ಇಂದು ಸಂಜೆಗೆ ಒಬ್ಬರ ಮನೆಗೆ ಚಹಕ್ಕಾಗಿ ಹೋಗಿದ್ದೆನು! ಹೆಡಿಂಗ್ಟನ್ ಗುಡ್ಡದ ಮೇಲೆ ರಮ್ಯವಾದ ತೋಟದ ನಡುವೆ ಮನೆಯಿದೆ. ಈ ತೋಟಕ್ಕೆ ಬನವೆಂದರೂ ಸಲ್ಲುವದು. ಯಜಮಾನರು ಮುದುಕರು! ಅನೇಕ ರೀತಿಯಿಂದ ' ದೇಶಸೇವೆ 'ಯನ್ನು ಮಾಡಿದವರು. ಅನೇಕ ವಿಷಯಗಳು ಗೊತ್ತಿಲ್ಲದಿದ್ದರೂ ಮನೋರಂಜಕವಾಗಿ ಮಾತನಾಡುವ ಗೃಹಿಣಿಯು ಅವರಿಗೆ. ಅತಿಥಿಗಳು ನಾನಾ ಬಗೆಯವರು! ಹಿಂದುಸ್ಥಾನದಲ್ಲಿ ಕೆಲಸ ಮಾಡಿ ರಜೆಗಾಗಿ ಬಂದಿದ್ದ ಆಂಗ್ಲ ತರುಣರು, ಭಾರತೀಯರಾದ ಆಯ್. ಸಿ. ಎಸ್. ಪ್ರೊಬೇಶನರರು, ಬರ್ಮಾದಿಂದ ಬಂದ ಮೂವರು ವಿದ್ಯಾರ್ಥಿಗಳು, ಆಯ್. ಸಿ. ಎಸ್ಸಿಗಾಗಿ ಕಲಿಯಲು ಬಂದ ಕೆಲವರು ಇತ್ಯಾದಿ, ಎಲ್ಲರೂ ಕಲೆತೆವು. ನಡೆಯಿತು ಚಹಾಪಾನ. ಆಂಗ್ಲ ತರುಣರು ಎಲ್ಲರೊಡನೆ ಮಾಟಾಗಿ ಮಾತನಾಡುತ್ತಿದ್ದರು.

ಕುತ್ತಿಗೆ ಶಿರಗಳನ್ನು ಬಿಗಿದುಕೊಂಡು ಮಾತನಾಡದೆ ನನ್ನ ಹತ್ತಿರ ಕುಳಿತಿದ್ದ ಆಯ್. ಸಿ. ಎಸ್. ಪ್ರೊಬೇಶನರನನ್ನು ಕಂಡು—ಯಜಮಾನರು ಒಬ್ಬ ಬರ್ಮೀ ತರುಣನ ಪರಿಚಯವನ್ನು ನನಗೆ ಮಾಡಿಕೊಟ್ಟರು. 'ಮಾಂಗ್ ವನ್' ಎಂದು ಆತನ ಹೆಸರು. ಅವನು ರಂಗೂನ ಯುನಿವ್ಹರ್ಸಿಟಿಯಿಂದ ಪ್ರೇಷಿತನಾದ ವಿದ್ಯಾರ್ಥಿ. ಮುಂದೆ ಹೋಗಿ ಅಲ್ಲಿಯೇ ಕೆಲಸ ಮಾಡುವವ. ಮಾತಿಗೆ ಮಾತು ಮಥಿಸಿ ನಾದದ ನವನೀತವು ಹೊರಟಿತು! ಅವನು ಒಳ್ಳೆ ಬರ್ಮಿ ಕವಿ. ಆರ್ಯ ಸಂಸ್ಕೃತಿಯ ಬಗ್ಗೆ ತುಂಬಾ ಪೂಜ್ಯಬುದ್ಧಿಯುಳ್ಳವ. ಸಂಸ್ಕೃತ-ಟಿಬೇಟನ್ ಕಲಿಯಲು ಇಲ್ಲಿಗೆ ಬಂದಿದ್ದಾನೆ! ಬರ್ಮೀ ಸಾಹಿತ್ಯದ ಅಲ್ಪ ಪರಿಚಯವನ್ನು ಅವನು ನನಗೆ ಮಾಡಿಕೊಟ್ಟ. ಕನ್ನಡದ ಬಗ್ಗೆ ಕೇಳಿಕೊಂಡ.

ಮುಂದಿನ ಆದಿತ್ಯವಾರ ನಾವು ಕವಿತೆಗಳನ್ನು ಒಬ್ಬರಿಗೊಬ್ಬರು ಓದಿ ತೋರಿಸಬೇಕೆಂದು ಗೊತ್ತಾಗಿದೆ!

೧೯೧೪ ರ ಸುಮಾರು ಬರ್ಮಾದಲ್ಲಿ ಸಾಹಿತ್ಯದ ಪುನರುಜ್ಜೀವನ ವಾಯಿತಂತೆ. ಆಕ್ಸ್‌ಫರ್ಡದಲ್ಲಿ ಕ್ರಿಸ್ತ ಚರ್ಚ್ ಕಾಲೇಜಿನಲ್ಲಿ ಒಬ್ಬ ಬರ್ಮಾ ವಿದ್ಯಾರ್ಥಿಯಿದ್ದು ಈಗ ಡೆಪ್ಯುಟಿ ಕಮಿಶನರನಾಗಿರುವನಂತೆ. 'ಆಕ್ಸ್‌ಫರ್ಡ ಡೈರಿ' ಎಂಬ ಅವನ ಗ್ರಂಥವೂ ಉಳಿದ ಕೃತಿಗಳೂ ಅವನಿಗೆ ಕೀರ್ತಿಯನ್ನು ತಂದಿರುವವಂತೆ. ಅವನ ಅಲ್ಪ ಪರಿಚಯವನ್ನು ಕೇಳಿ ನನಗೆ ಮಾಸ್ತಿಯವರ ನೆನಪಾಯಿತು.

ಇಷ್ಟರಲ್ಲಿ ಒಬ್ಬ ಭಾರತೀಯ ಆಯ್. ಸಿ. ಎಸ್. ಪ್ರೊಬೇಶನರನು ಗಲಾಟೆಯೆಬ್ಬಿಸಿದ್ದ! ತನ್ನ ಇಂಗ್ಲಿಷ ಶೈಲಿಯ ಕರಾಮತಿಯನ್ನು ತೋರಿಸುವದರಲ್ಲಿ ಮಗ್ನನಾಗಿದ್ದ. ನಾವೆಲ್ಲರೂ ತಲೆ ಕೆಳಗೆ ಹಾಕಿ ಅರ್ಧ ಗಂಟೆಯವರೆಗೆ ಕೇಳಬೇಕಾಯಿತು. ಚಲಚ್ಚಿತ್ರಗಳ ಬಗ್ಗೆ—ಹೆಣ್ಣಿನ ಬಗ್ಗೆ—ಗಂಡಿನ ಬಗ್ಗೆ—ಎರಡು ಬಿಲ್ಲಿಯ ವರ್ತಮಾನಪತ್ರಗಳಲ್ಲಿ ಬರುವ ಶಬ್ದಗಳನ್ನು ಹೆಣೆದು—ಬೀಭತ್ಸ ವಿನೋದಗಳನ್ನು ಜೋಡಿಸುತ್ತ ನಡೆದ! 'Truth is stranger than fiction!' (ಸತ್ಯವು ಕಾದಂಬರಿಗಿಂತ ವಿಚಿತ್ರವಾಗಿದೆ!) ತಾನು ಸತ್ಯವಾದುದನ್ನೇ ಮಾಡಿದೆನೆಂದು ಅವನ ಕಲ್ಪನೆಯಾಗಿರಬೇಕು. ಇಲ್ಲಿಯ ಭಾರತೀಯ ಚರ್ಚಾ ಸಂಘದ ಬಗ್ಗೆ ಆಡಬಾರದ ಮಾತುಗಳನ್ನಾಡಿದ. 'ಆಕ್ಸ್‌ಫರ್ಡ್ ಯುನಿಯನ್'ದಲ್ಲಿ ಸಮತಾವಾದವನ್ನು ಕುರಿತು ಆಗುವ ಚರ್ಚೆಗಳು ತನಗೆ ಸರಿಹೋಗುವದಿಲ್ಲವೆಂದು ಕಿವಿಯ ಮೇಲೆ ಕೈಯಿಟ್ಟುಕೊಂಡ! 'ಬ್ರಿಟಿಶ್ ಸಾಮ್ರಾಜ್ಯ'ದ ಬಗ್ಗೆ ಭಯ-ಭಕ್ತಿಯನ್ನು ಪ್ರದರ್ಶಿಸಿದ. ನಭೂತೋ ನಭವಿಷ್ಯತಿ! ನನಗೆ ತಲೆಶೂಲೆಯೆದ್ದಿತು. ಯಜಮಾನರಿಗೆ ಕೂಡ ಬೇಸರಿಕೆ ಬಂತು. ಆಂಗ್ಲ ತರುಣರು ತಿರಸ್ಕಾರಪೂರ್ವಕವಾಗಿ ನಗುತ್ತಿದ್ದರು. ಗೃಹಿಣಿಯೊಡನೆ ಮಾತು ಬೆಳೆಸಿ ಒಬ್ಬ ಅಲ್ಲಿಯ ಆಂಗ್ಲ ತರುಣನ ಪರಿಚಯವನ್ನು ಮಾಡಿಸಿಕೊಂಡ. ಬೇಸತ್ತು ಎಲ್ಲರೂ ಎದ್ದಾಗ– "I should be grateful for a lift now. I say this and I look significantly at you"

(ಈಗ ನನ್ನನ್ನು ಮೋಟರಿನಲ್ಲಿ ಕರೆದುಕೊಂಡು ಹೋದರೆ ನಾನು ಉಪ ಕೃತ. ಹೀಗೆಂದು ನಾನು ನಿಮ್ಮ ಕಡೆ ಕಣ್ಣಿಟ್ಟು ನೋಡುವೆ.) ಎಂದು ಆ ಆಂಗ್ಲ ತರುಣನ ಕಡೆಗೆ ನೋಡಿದ. ಇಬ್ಬರು ಆಂಗ್ಲ ತರುಣರಲ್ಲಿ ಒಬ್ಬ ರಾದರೂ ತನ್ನನ್ನು ಮೋಟರಿನಲ್ಲಿ ಕರೆದುಕೊಂಡು ಹೋಗಬೇಕೆಂದು ಗೃಹಿಣಿಯ 'ವಶೀಲಿ' ಹಚ್ಚಿದ. ಇಬ್ಬರಲ್ಲಿ ಒಬ್ಬನೂ ಪಿಟ್ಟೆನ್ನಲಿಲ್ಲ. "Well, it is a matter to be discussed outside and not inside" (ಸರಿ. ಇದನ್ನು ಹೊರಗೆ ನಿರ್ಣಯಿಸಬೇಕು, ಒಳಗಲ್ಲ) ಎಂದು ಗೃಹಿಣಿಯು ಮಾತು ಮುಗಿಸಿದಳು. ಇಂಥ ಕ್ರಿಮಿ-ಕೀಟಕಗಳು ನಿನಗೆ ಮಕ್ಕಳಾಗಿ ಹುಟ್ಟಿ ನಿನ್ನನ್ನು ಆಳುವವು-ಓ! ನಾಡ ದೇವಿ!

ಮೂವರು ಬರ್ಮಾ ವಿದ್ಯಾರ್ಥಿಗಳೊಡನೆ ನಾನು ತಿರುಗಿ ನಡೆದೆ. ಅವರಲ್ಲಿ ಇನ್ನೊಬ್ಬನು 'ಚಿ'—'ಪ್ರಕಾಶಮಾನ' ಎಂಬರ್ಥದ ಹೆಸರಿನವ. ತಕ ತಕ ಕುಣಿಯುವ ಹುಡುಗ. 'Forestry' (ಫಾರೆಸ್ಟ್ರಿ-ಅಡವಿಯ ಖಾತೆ ಶಾಸ್ತ್ರ) ಕಲಿಯಲು ಬಂದಿದ್ದಾನೆ. ಅವನೊಡನೆ ಮಾತನಾಡುತ್ತ ಹೊಟ್ಟೆ ತುಂಬ ನಕ್ಕೆ. ಅವನಿಗೂ ಬಹಳ ಬೇಜಾರ ಬಂದಿತ್ತೆಂದು ಹೇಳಿದ. 'I am sea-sick, home-sick and love-sick' (ನಾನು ಕಡಲಬೇನೆ, ಅಗಲಿಕೆ, ವಿರಹಗಳಿಂದ ಬಳಲುತ್ತಿದ್ದೇನೆ) ಎಂದು ಹೇಳಿದ, "I suppose you are also that? (ನೀನೂ ಹಾಗೇ ಎಂದುತೋರು ತ್ತದೆ?) ಎಂದು ನನ್ನನ್ನು ನೋಡಿದ. "My love is six years old. Yours perhaps six months"(ನನ್ನ ಪ್ರೇಮ ಆರು ವರ್ಷ ಹಳೆಯದು. ನಿನ್ನದು ಬಹುಶಃ ಆರು ತಿಂಗಳದ್ದು ಇರಬೇಕು) ಎಂದು ನಾನೆಂದೆ. "You have hit the nail on the head" (ಹೌದು. ನೀನು ನಿರಿಯಾದ ಮಾತಿಗೇ ಗುರಿಯಿಟ್ಟು ಹೇಳಿದಿ) ಎಂದು ಅವನು ನಕ್ಕನು!



## ೧೫

. . . . . . . ಆಕ್ಸಫರ್ಡ್

೧೪—೧೦—೩೭

ಇಲ್ಲಿಯವರೆಗೆ ಬರೆಯುವದಾಗಲಿಲ್ಲ! ಬರೆಯುವಂಥ ಮಾತು ಪ್ರತಿಕ್ಷಣವೂ ಸಂಭವಿಸುತ್ತದೆ, ಅಂತರ್ಮುಖಜೀವನದಲ್ಲಿ. ಅದನ್ನು ಬರೆಯಲು ವೇಳೆಯು ಸಿಗುವದಿಲ್ಲ. ಅದೆಲ್ಲ ಸುಷುಪ್ತಿರಾಜ್ಯದ ವ್ಯಾಪಾರವಾಗಿ ಹೋಗುತ್ತದೆ!

ಇಂದು ಮ್ಯಾಟ್ರಿಕ್ಯುಲೇಶನ್ ಆಯಿತು! ಅದೊಂದು ಮೋಜು. ಹೆಣ್ಣುಮಕ್ಕಳು ಹೂವೀಳ್ಯಕ್ಕೆ ಹೋದಂತೆ ಎಲ್ಲರೂ ಡಿವ್ಹಿನಿಟಿ ಸ್ಕೂಲ ಕಟ್ಟಡಕ್ಕೆ ಹೋದೆವು. ಸಾಲೆ ಹುಡುಗರಂತೆ ನಮ್ಮನ್ನು ನಮ್ಮ 'ಡೀನ'ರು ಕರೆದುಕೊಂಡು ನಡೆದರು. ವ್ಹಾಯಿಸ್ ಚ್ಯಾನ್ಸಲೆರರ ಎದುರಿಗೆ ಒಯ್ದು ನಿಲ್ಲಿಸಿದಾಗ ಅವರು ಏನೇನೋ ಲ್ಯಾಟಿನ್ನದಲ್ಲಿ ಅಂದು ಕಳಿಸಿದರು!

ಇದೊಂದು ರೂಢಿ-ಸಂಪ್ರದಾಯ. ರೂಢಿಯು ಅಂಧಾನುಕರಣವೆಂದು ಜನರು ಆಕ್ಸಫರ್ಡಿಗೆ ಬಯ್ಯುವದುಂಟು. ವ್ಯಾವಹಾರಿಕ ಜೀವನದಲ್ಲಿ ಹೀಗೆ ರೂಢಿಗೆ ಬಲಿಬಿದ್ದರೆ ತಪ್ಪು. ಆದರೆ ವಿಶ್ವವಿದ್ಯಾಲಯದ ಪವಿತ್ರ ವಾತಾವರಣದಲ್ಲಿ ಇಂಥ ರೂಢಿಗಳು ಒಂದು ಹೊಸ ಶೋಭೆಯನ್ನು ತರುತ್ತವೆ.

ಆಕ್ಸಫರ್ಡ ವಿದ್ಯಾಲಯವಾದರೂ ದೂಷಣೆಯಿಂದ ಹಿಂದುಳಿದಿಲ್ಲ. 'Isis' (ಆಯ್‌ಸಿಸ್) ಎಂಬ ಇಲ್ಲಿಯ ವಿದ್ಯಾರ್ಥಿಗಳ ಪತ್ರಿಕೆಯಲ್ಲಿ ಇಂದು ಹೀಗೆ ಬರೆದಿದೆ: "Last thursday yet another thousand arrived in Oxford. It is interesting to inquire what they can hope to gain from three year's at the university. There was a

time when Oxford was the Mecca of scholars. Today she is degenerating into a training groud for specialised bread-winners"!? (ಹೋದ ಗುರುವಾರ ಮತ್ತೊಂದು ಸಾವಿರ ಜನ ಆಕ್ಸಫರ್ಡಕ್ಕೆ ಬಂದರು. ಯುನಿವ್ಹರ್ಸಿಟಿಯಲ್ಲಿಯ ಮೂರು ವರುಷ ಗಳಿಂದ ಅವರೇನು ಗಳಿಸುವ ಆಶೆಯುಳ್ಳವರೆಂದು ಕೇಳುವಂತಿದೆ. ಒಂದು ಕಾಲಕ್ಕೆ ಆಕ್ಸಫರ್ಡ ಎಂದರೆ ವಿದ್ವಾಂಸರ ಮಕ್ಕಾನಗರವಾಗಿತ್ತು. ಈ ಹೊತ್ತು ಅದು ವಿಶಿಷ್ಟ ಹೊಟ್ಟೆ ಹೊರೆವ ಜನರ ಶಿಕ್ಷಣ ಸ್ಥಳವಾಗಿದೆ.)

* * * *

ಶರ್ವುಡ್‌ನು ನನ್ನ ಸ್ವಂತ ಹೆಸರೇನೆಂದು ಕೇಳಿದ. 'ವಿನಾಯಕ' ಎಂದು ಹೇಳಿದೆ. ಉದ್ದವಾಯ್ತೆಂದ. ನಿನಗೆ ಬೇಕಾದ ಹಾಗೆ ಕರೆಯಬಹು ದೆಂದು ಉತ್ತರ ಕೊಟ್ಟೆ. ಈಗ 'ವ್ನಿಕಿ' ಎಂದು ನನ್ನನ್ನು ಕರೆಯುತ್ತಿ ದ್ದಾನೆ. ಅವನ ಹೆಸರು 'ಬಿಲ್' ಎಂದು. ಅದು ಚೆನ್ನಾಗಿಲ್ಲ ಶರ್ವುಡ್ ಎಂದೇ ನಾನು ಕರೆಯುವೆನೆಂದು ಹೇಳಿದೆ!

ಇಂದು ನನ್ನ ಸಾಹಿತ್ಯ ವಿಷಯಕ ಟ್ಯೂಟರರಾದ ಬ್ರೆಟ್ ಸ್ಮಿಥ್ ಇವರ ಕಡೆಗೆ ಹೋಗಿ ಬಿ. ಲಿಟ್ ಹಾಗು ಬಿ. ಎ. ಇವುಗಳ ತುಲನಾತ್ಮಕ ವಿಚಾರವನ್ನು ಮಾಡಿ ಕೊನೆಗೆ ಅವರ ಹೇಳಿಕೆಯ ಮೇರೆಗೆ ಬಿ. ಎ. ಕ್ಕಾಗಿ ಓದಬೇಕೆಂದು ನಿರ್ಧರಿಸಿದೆನು. ಅನೇಕ ಕಾರಣಗಳ ಮೂಲಕ ಆಂಗ್ಲ ಭಾಷೆಯನ್ನು ಅಭ್ಯಸಿಸುವ ಭಾರತೀಯರಿಗೆ 'ಬಿ. ಲಿಟ್ಟಿ' ಗಿಂತ ಬಿ. ಎ. ಪದವಿಯು ಹೆಚ್ಚು ಮಹತ್ವದ್ದಾಗಿದೆ.

ಭಾಷಾಶಾಸ್ತ್ರದಲ್ಲಿ ನನ್ನ ಟ್ಯೂಟರರಾದ ರೆನ್ ಎಂಬವರ ಕಡೆಗೆ ಇಂದು ಹೋಗಿದ್ದೆವು, ಶರ್ವುಡ್ ಹಾಗು ನಾನು. ತಮ್ಮ ಕೋಣೆಯಲ್ಲಿ ನಮ್ಮನ್ನು ಕುಳ್ಳಿರಿಸಿ ಒಂದು ತಾಸು ಮಾತನಾಡಿದರು, ಅತ್ತಿತ್ತ ತಿರುಗಾಡುತ್ತ! ವ್ಯಾಕರಣದಂಥ ಒಣ ವಿಷಯವು ಸಹ ಅವರ ಹದಕ್ಕೆ ಸಿಕ್ಕು ಕಾವ್ಯಮಯವಾಯಿತು! ಅವರು ಆ್ಯಂಗ್ಲೋಸ್ಯಾಕ್ಸನ್ ಕಾವ್ಯ ವನ್ನು ಓದುವದನ್ನು ಕೇಳಿ ನಾನು ಕಿವಿಸೋತು ಕುಳಿತೆನು. ಅಷ್ಟು ಮನೋಹರವಾಗಿ ಓದುತ್ತಾರೆ! ಓದುವದಾದ ಮೇಲೆ: "ನಿನ್ನೆ

ಈಟ್ಸ್ ಕವಿಯು ಅಲೆಯುಂಚಿಯಲ್ಲಿ ಮಾತನಾಡಿದನಲ್ಲ—ಮಂತ್ರಮಯ
ವಾಗಿ ಕಾವ್ಯವನ್ನು ಓದಬೇಕು" ಎಂದು ಹೇಳಿದರು.

ರೋಮನ್ ಲಿಪಿಯು ನಿಜವಾಗಿ ಅಷ್ಟೊಂದು ಉಪಯುಕ್ತ
ವಾಗಿಲ್ಲ. 'Its capacities are limited.' (ಅದರ ಶಕ್ತಿ ನಿಯಮಿತ
ವಾದುದು) ದೇವನಾಗರಿ ಲಿಪಿಯು ಅದಕ್ಕೂ ಚೆನ್ನೆಂದು ನುಡಿದರು.
ಒಬ್ಬ ಅಮೇರಿಕನ್ನ ಹಾಗು ಒಬ್ಬ ಭಾರತೀಯ ವಿದ್ಯಾರ್ಥಿಗೆ ಮಾತ-
ನಾಡುತ್ತ ತಮ್ಮನ್ನೇ ತಾವು ಮರೆತು ಬಿಡುವ ಈ ಆಂಗ್ಲ ಜ್ಞಾನಿಗಳನ್ನು
ನೋಡಿ ನನ್ನಲ್ಲಿ ಆದರವು ಉಂಟಾಯಿತು. ಹಸ್ತಪ್ರತಿಗಳನ್ನು ಓದಿ
ಅವರು ಅರ್ಧ ಕುರುಡರಾಗಿದ್ದಾರೆ!

* * * *

೧೬—೧೦—೩೬

ಗುರುವಾರ ಸಂಜೆಗೆ ಆಕ್ಸಫರ್ಡ ಯೂನಿಯನ್ನದ ಮೊದಲನೆಯ
ಅಧಿವೇಶನವಿತ್ತು. "The revival of liberalism is the only
safeguard against dictatorship and war" (ಸರ್ವಾಧಿಕಾರಿತ್ವ
ಹಾಗೂ ಯುದ್ಧಗಳಿಗೆ ಉದಾರಮತದ ಪುನರುಜ್ಜೀವನವೊಂದೇ ಮದ್ದು)
ಎಂಬ ವಿಷಯದ ಮೇಲೆ ಚರ್ಚೆಯಾಗುವದಿತ್ತು. ಪ್ರೊ. ಗಿಲ್ಬರ್ಟ್
ಮರೆ'ಯವರು ಮಾತನಾಡುವವರಿದ್ದರು. ಆದರೆ ಜಡ್ಡಾದ ಮೂಲಕ
ಬರಲಿಲ್ಲ. ಎಂಟು ಗಂಟೆಯಿಂದ ಹನ್ನೊಂದುವರೆಯ ವರೆಗೆ ನಡೆಯಿತು.
ಮೊದಲನೆಯ ಐದು ತರುಣರು ಬಹು ಚೆನ್ನಾಗಿ ಮಾತನಾಡಿದರು.
ಅವರಲ್ಲಿ ಯಾವನಾದರೂ ಒಬ್ಬನು ಮುಂದೆ ಇಂಗ್ಲಂಡದ ಮುಂದಾಳಾಗ
ಬಹುದು! ಪ್ಯಾಕನ್ಹ್ಯಾಮ್, ಅರ್ವಿನ್, ಬ್ರಾವುನ್ ಮುಂತಾದವರಲ್ಲಿ
ಉತ್ತಮವಾದ ಮಾತುಗಾರಿಕೆಯಿದೆ.

ವಿದ್ಯಾರ್ಥಿಗಳಿದ್ದಾಗ ಸಹ ಇವರು ಗಳಿಸಿದ ರಾಜಕೀಯ ಜ್ಞಾನ
ಹಾಗು ಕೌಶಲ್ಯವನ್ನು ನೋಡಿ ಆಶ್ಚರ್ಯವಾಗುತ್ತದೆ. ಹಿಂದಿನದನ್ನೆಲ್ಲ
ಚೆನ್ನಾಗಿ ನುರಿಸಿದ್ದಲ್ಲದೆ ಇಂದಿನ ಧೋರಣಗಳನ್ನೆಲ್ಲ ಕೂಲಂಕಷವಾಗಿ

ಪರಿಶೀಲಿಸಿರುತ್ತಾರೆ. ಈಗಾಗಲೆ– ನಾನು ಲಿಬರಲ್, ನಾನು ಲೇಬರಾ, ನಾನು ಕನ್ಸರ್ವೆೇಟಿವ್ ಎಂದು ಅವರ ದೃಢ ನಿಶ್ಚಯವಾಗಿ ಹೋಗಿರುತ್ತದೆ! ಒಟ್ಟು ಹದಿನೈದು-ಹದಿನಾರು ಜನರು ಮಾತನಾಡಿದರು. ಇನ್ನೂ ಹನ್ನೆರಡು ಮಂದಿ ವೇಳೆ ಸಿಕ್ಕದೆ ಹೋದರು!

ಮುಖ್ಯ ಮಾತುಗಾರರ ಪಾಳಿಯಾದ ಮೇಲೆ ಯಾರು ಮಾತನಾಡಬೇಕೆಂಬುದನ್ನು ಚೀಟಿ ಹಾಕಿ ನಿರ್ಣಯಿಸುತ್ತಾರೆ. ಆದರಲ್ಲಿಯೂ ಹೊಸಬರಿಗೆ ಮೊದಲು ಮಾತನಾಡಲು ಸಂಧಿಯು ದೊರೆಯುತ್ತದೆ. 'Mr. A— of college is requested to make his maiden speech' (ಇಂಥ ಕಾಲೇಜಿನ ಇಂಥವರು ತಮ್ಮ ಮೊದಲನೆಯ ಭಾಷಣ ಮಾಡಬೇಕು) ಎಂದು ಅಧ್ಯಕ್ಷರು ಹೇಳುತ್ತಾರೆ. ಆಯಾ ಟರ್ಮಿನ ಸಲುವಾಗಿ ಚುನಾಯಿಸಲ್ಪಟ್ಟ ವಿದ್ಯಾರ್ಥಿಯೇ ಎಲ್ಲ ಅಧಿವೇಶನಗಳ ಅಧ್ಯಕ್ಷನಿಲ್ಲಿ. ಒಬ್ಬರು ಮಾತನಾಡುವಾಗ ಯಾರೂ ಎದ್ದು ಹೋಗಕೂಡದು. ಒಂದು ಭಾಷಣವು ಮುಗಿದು ಇನ್ನೊಂದು ಸುರುವಾಗುವದರ ಪೂರ್ವದಲ್ಲಿ ಯಾರಾದರೂ ಹೋಗಬಹುದು. ಬಾಗಿಲಲ್ಲಿ 'ಲೆಕ್ಕಹಾಕುವವರು' ಕೂತಿರುತ್ತಾರೆ. 'Aye' (ಹೌದು) ಬಾಗಿಲ ಅಥವಾ 'No' (ಅಲ್ಲ) ಬಾಗಿಲಲ್ಲಿ ಹಾಯ್ದಂತೆ ನಿಮ್ಮ ಅಭಿಮತವನ್ನು ಬರೆದುಕೊಳ್ಳುತ್ತಾರೆ!

'ಪ—.' ಎಂಬ ಒಬ್ಬ ಭಾರತೀಯ ವಿದ್ಯಾರ್ಥಿಯು ಮಾತನಾಡಿದನು. ಮಾತಿನ ಹದವಿರಲಿಲ್ಲ ಅವನಲ್ಲಿ. ಹಿಂದುಸ್ಥಾನದ ಕರುಣಸ್ಥಿತಿಯನ್ನು ಬಿಚ್ಚಿಡಲು ಪ್ರಯತ್ನಿಸಿದ. ಆದರೆ 'our empire' (ನಮ್ಮ ಸಾಮ್ರಾಜ್ಯ) ಎಂದು ಅಭಿಮಾನದಿಂದ ಎದೆ ಸೆಟಿಸುವ ಹುಡುಗರೆದುರಿಗೆ ಅರಣ್ಯರೋದನ ಮಾಡಿದರೆ ಏನಾಗುತ್ತದೆ? ದರ್ಪದಿಂದ ಹೇಳಿ ಹೆದರಿಕೆಯನ್ನು ಹುಟ್ಟಿಸಬೇಕು, ಅಂತಃಕರಣದಿಂದ ಹೇಳಿ ಕರುಣೆಯನ್ನು ಯಾಚಿಸಬಾರದು.

ಇಲ್ಲಿಯ ಮಾತುಗಾರರ ವಿನೋದಪ್ರಿಯತೆಯು ಅಸಾಮಾನ್ಯವಾದುದು. ನಮ್ಮ ಲೆಜಿಸ್ಲೇಟಿವ್ಹ ಅಸೆಂಬ್ಲಿಯಲ್ಲಿ ಕೂಡ ಇಂಥ ಸರಸ ಪ್ರಶ್ನೋತ್ತರಗಳಾಗುತ್ತಿರಲಿಕ್ಕಿಲ್ಲ! ವಾಚನಾಲಯದ ಕಾರ್ಯದರ್ಶಿಯು ಹೊಸದಾಗಿ ಕೊಂಡ ಪುಸ್ತಕಗಳ ಯಾದಿಯನ್ನು ಓದಿದಾಗ

"I object to the Oxford Guardian" (ಆಕ್ಸ್‌ಫರ್ಡ ಗಾರ್ಡಿಯನ್ ಪುಸ್ತಕದ ಬಗ್ಗೆ ನನ್ನ ಆಕ್ಷೇಪವಿದೆ) ಎಂದು ಒಬ್ಬ ಸದಸ್ಯನು ಎದ್ದು ಹೇಳಿದನು. "But every liberal objects to you" (ಆದರೆ ಪ್ರತಿಯೊಬ್ಬ ಲಿಬರಲ್ಲನು ನಿನ್ನನ್ನು ಆಕ್ಷೇಪಿಸುವನು) ಎಂದು ಅಧ್ಯಕ್ಷರ ಉತ್ತರ ಬಂತು! "The conservatives are inspired by a hatred of change" (ಕಾಂಝರ್ವೇಟಿವ್ಹರು ಬದಲಾವಣೆಯ ದ್ವೇಷದಿಂದ ಪ್ರೇರಿತರಾಗುತ್ತಾರೆ) ಎಂದು ಒಬ್ಬ ಲಿಬರಲ್ ತರುಣನು ಹೇಳಿದ್ದನು. ಮುಂದೆ "The liberals are inspired by hatred of one another" (ಲಿಬರಲ್ಲರು ಒಬ್ಬರೊಬ್ಬರ ದ್ವೇಷದಿಂದ ಪ್ರೇರಿತರಾಗುವರು) ಎಂದು ಮವಾಳ ಪಕ್ಷದವರಿಂದ ಉತ್ತರ ಬಂತು.

ಸಭಾಮಂದಿರದಲ್ಲಿ ವರ್ಷಾನುವರ್ಷ ಐತಿಹಾಸಿಕ ಸಂಗತಿಗಳು ಘಟಿಸುತ್ತವೆ. ಪ್ರಸಿದ್ಧ ಜನರು ಬಂದು ಮಾತನಾಡುತ್ತಾರೆ. ಗ್ಲ್ಯಾಡ್‌ಸ್ಟನ್ನನು ಈ ಯುನಿಯನ್ನದಲ್ಲಿ ಕೆಲಸ ಮಾಡಿದ್ದನಂತೆ! ಕೀರ್ತಿವಂತರಾದ ಅನೇಕ ಸದಸ್ಯರ ಚಿತ್ರಗಳಿಂದ ಇಲ್ಲಿಯ ಗೋಡೆಗಳು ಅಲಂಕೃತವಾಗಿವೆ.

* * * *

ನಿನ್ನೆ ಥೇಮ್ಸ್ ನದಿಯ ದಂಡೆಗುಂಟ ತಿರುಗಾಡಿ ವಿಶ್ವವಿದ್ಯಾಲಯದ ಬೋಟ್ ಕ್ಲಬ್ಬನ್ನು ನೋಡಿ ಬಂದೆ. ಅಲ್ಲಿ ಕತ್ತಲೆಯಲ್ಲಿ ಹಂಸಗಳನ್ನು ನೋಡಿ ಆನಂದವಾಯಿತು. ನಿರಭ್ರವಾದ ಆಕಾಶದಲ್ಲಿ ಪ್ರತಿಯೊಂದು ಚಿಕ್ಕೆಯೂ ಕಾಣುತ್ತಿತ್ತು. ಇಂದಿನ ದಿನವೆಲ್ಲ ಸ್ವಚ್ಛವಾದ ಸೂರ್ಯಪ್ರಕಾಶವಿದೆ. ಸಂಜೆಯ ಹೊತ್ತು ಕಮ್ನರ್ ದಿನ್ನೆಯ ಮೇಲೆ ತಿರುಗಾಡಲು ಹೋಗಿದ್ದೆ. ನಾನು ಚಿಕ್ಕಂದಿನಲ್ಲಿ ಅತಿ ಪ್ರೀತಿಯಿಂದ ಓದಿದ್ದ 'Kennilworth' (ಕೆನಿಲ್‌ವರ್ಥ) ಕಾದಂಬರಿಗೂ ಕಮ್ನರ್ ಹಳ್ಳಿಗೂ ಸಂಬಂಧವಿದೆ. ಆ ಕಥಾನಾಯಕಿಯು ಈ ಹಳ್ಳಿಯವಳು! ಅದನ್ನು ನೆನಿಸಿ ಮೈಯ್ಯಲ್ಲಿ ರೋಮಾಂಚವೆದ್ದಿತು!

---

## ೧೬

. . . . . .

ಆಕ್ಸಫರ್ಡ

೧೬—೧೦—೩೬

ಇಂದು ಸಂಜೆಗೆ ಚಹಕ್ಕೆಂದು ಶರ್ವುಡ್ಡನು ನನ್ನನ್ನು ಆಮಂತ್ರಿಸಿದ್ದ. ತನ್ನ ಅಮೇರಿಕನ್ ಸ್ನೇಹಿತರಲ್ಲಿ ಗ್ರಿಫಿತ್ ಎಂಬಾತನನ್ನೂ ಕರೆದಿದ್ದ. ಏಸ್ಟನ್ ಓಣಿಯಲ್ಲಿಯ ಅವನ ಕೋಣೆಗೆ ಹೋದಾಗ ಇಬ್ಬರೂ ಮಾತನಾಡುತ್ತ ಕುಳಿತಿದ್ದರು. ಶರ್ವುಡ್ಡನು 'ಕಮ್ಯುನಿಸ್ಟ.' ಅವನು ಸುಧಾರಿಸಲೆಂದು ತಾಯಿ-ತಂದೆಗಳು ಅವನನ್ನು ಆಕ್ಸಫರ್ಡಿಗೆ ಕಳಿಸಿದ್ದಾರೆ! ಆದರೆ ಬಂದು ಒಂದು ತಿಂಗಳಾಗುವಷ್ಟರಲ್ಲಿಯೆ ಅವನು ಆಕ್ಸಫರ್ಡಿನಲ್ಲಿಯ 'ಕಮ್ಯುನಿಸ್ಟ' ಚಳವಳಿಯಲ್ಲಿ ಧುಮುಕಿದ್ದಾನೆ. "Pressed Steal" (ಪ್ರೆಸ್ಡ ಸ್ಟೀಲ) ಎಂಬ ಸಮೀಪದ ಹಳ್ಳಿಯ ಸಂಪಿನಲ್ಲಿ ಕೆಲಸ ಮಾಡಿದ; 'ಕಮ್ಯುನಿಸ್ಟ' ಸಭೆಗಳಲ್ಲಿ ಭಾಗವಹಿಸಿದ. ನಾವು ಕೋಣೆಯಲ್ಲಿ ಕುಳಿತಿರುವಾಗ ಸಹ ಉದ್ದಗೂದಲಿನ ಆಂಗ್ಲ 'ಕಮ್ಯುನಿಸ್ಟ'ನೊಬ್ಬನು ಒರ್ವ ಯುವತಿಯೊಡನೆ ಪ್ರವೇಶಿಸಿದನು. 'ಕಮ್ಯುನಿಸ್ಟ' ಆಂಗ್ಲ ತರುಣಿಯರು ಬಹಳ ಸ್ವಚ್ಛಂದದಿಂದ ವರ್ತಿಸಿ ತಮ್ಮ ಹೊಸ ವಿಚಾರಗಳನ್ನು ತೋರ್ಪಡಿಸಬೇಕೆಂದು ವಿಚಾರಿಸಿದಂತೆ ಕಾಣುತ್ತದೆ. ತನ್ನ ಸಂಗಡಿಗನಿಂದ ಸಿಗರೇಟು ಪೆಟ್ಟಿಗೆಯನ್ನು ತೆಗೆದುಕೊಂಡು ಆದನ್ನು ತಿರುಗಿ ಕೊಡುವದರ ಬದಲು ಬಿಸುಟಿ ಅವನೆಡೆಗೆ ಒಗೆದಳು!

ಗ್ರಿಫಿತ್ಥನನ್ನು 'ಕಮ್ಯೂನಿಸ್ಟ್' ಮಾಡಬೇಕೆಂದು ಶರ್ವುಡ್ಡನ ಹಟ. ಚಹ ತೊಗೊಳ್ಳುತ್ತ ಅವನ ಉಪನ್ಯಾಸಕ್ಕೆ ಆರಂಭವಾಯಿತು. ರಹಸ್ಯಮಯವಾದರೂ ತನಗೆ ಗೊತ್ತಿದೆಯೆಂದು ಅನೇಕ ಮಾತುಗಳನ್ನು ಶರ್ವುಡ್ಡನು ಹೇಳಿದನು. ಗ್ರಿಫಿತ್ಥನು ಅಂಜುಬುರಕ. ಫ್ಯಾಕ್ಟರಿಗಳು ಎಲ್ಲಿವೆಯೆಂದು ಕೇಳಿದರೆ ಜನರೆಲ್ಲಿ ತಾನು 'ಕಮ್ಯೂನಿಸ್ಟ್' ಎಂದು ತಿಳಿಯುವರೋ ಎಂದು ಅವನ ಹೆದರಿಕೆ. ಶರ್ವುಡ್ಡನು ಅವನ ಮೇಲೆ ಕಪ್ಪೆ ಹಾರಿಸಹತ್ತಿದ. ಕೊನೆಗೆ: "How have you come into touch with all these men within so short a time? How do you know all these things?" (ಇಷ್ಟು ಸ್ವಲ್ಪ ಕಾಲದಲ್ಲಿ ಈ ಎಲ್ಲ ಜನರನ್ನು ನೀನು ಹೇಗೆ ಅರಿತೆ? ಇವೆಲ್ಲ ನಿನಗೆ ಹೇಗೆ ಗೊತ್ತು?) ಎಂದು ಗ್ರಿಫಿತ್ಥನು ಕೇಳಿದ. ಶರ್ವುಡ್ಡನು ಕೊಟ್ಟ ಕಮ್ಯೂನಿಸ್ಟ ವಾರಪತ್ರಿಕೆ-ಮಾಸಪತ್ರಿಕೆಗಳು, ಲೆಕ್ಕಪತ್ರಗಳು, ಅಭಿಮತಯಾಚನಾಪತ್ರಗಳು, ಇವೆಲ್ಲ ಅವನನ್ನು ದಿಕ್ಕುತಪ್ಪಿಸಿದ್ದವು. "It is easier for a foreigner" (ಪರದೇಶದವನಿಗೆ ಅದು ಹೆಚ್ಚು ಸುಲಭ) ಎಂದು ಸಿಗರೇಟಿನ ಹೊಗೆ ಬಿಡುತ್ತ ಶಾಂತನಾಗಿ ಶರ್ವುಡ್ ಉತ್ತರಕೊಟ್ಟ!

ಆ ಮೇಲೆ ನಿಗ್ರೋ ಜನರು ಯೋಜಿಸಿದ 'ಜಾಝ್' ಸಂಗೀತದ ರಿಕಾರ್ಡುಗಳನ್ನು ಕೇಳಬೇಕೆಂದು ಶರ್ವುಡ್ಡನು ನಮ್ಮನ್ನು ಕೂಡಿಸಿ ಕೊಂಡ. 'Would you like something violent?' (ಏನಾದರೂ ಉಗ್ರವಾದದ್ದು ನಿಮಗೆ ಸೇರುತ್ತದೋ?) ಎಂದು ಅವನ ಪ್ರಶ್ನೆ. ಸಂಗೀತದಲ್ಲಿಯೂ ಅವನಿಗೆ ಕ್ರಾಂತಿಕಾರಕವಾದದ್ದೇ ಬೇಕು! ಗ್ರಿಫಿತ್ಥನಿಗೆ ಸಾಂಪ್ರದಾಯಿಕ ಸಂಗೀತವು ಹೆಚ್ಚು ರುಚಿಕರವಾದುದು. ನಿರ್ವಾಹವಿಲ್ಲದೆ 'ಜಾಝ್' ಕೇಳಿದ!

ಶರ್ವುಡ್ಡನು ಸಣ್ಣ ಕತೆಗಳನ್ನು ಬರೆಯುತ್ತಿದ್ದಾನಂತೆ. ಹೇಗಿವೆಯೋ ನೋಡಬೇಕು. ತಿರುಗಿ ಮನೆಗೆ ಬರುವಾಗ ಗ್ರಿಫಿಥ್ ಹಾಗು ನಾನು ಅಮೇರಿಕಾ-ಇಂಡಿಯಾ ದೇಶಗಳ ಬಗ್ಗೆ ಮಾತನಾಡುತ್ತ ಬಂದೆವು.

* * * *

೧೮—೧೦—೩೭

ಇಂದು ಮಿಂಥುಮನ್ ಹಾಗು ಅವರ ಬರ್ಮೀ ಸ್ನೇಹಿತರು ನನ್ನ ಕೋಣೆಗೆ ಚಹಕ್ಕೆಂದು ಬಂದಿದ್ದರು. ಬಹಳ ಸಂತೋಷದಿಂದ ವೇಳೆ ಕಳೆದೆವು. ಮಿಂಥುಮನ್ನರು ತಮ್ಮ ಕವಿತಾಸಂಗ್ರಹವೊಂದನ್ನು (ಇಂಗ್ಲಿಷ್ ಭಾಷಾಂತರಗಳೊಡನೆ) ನನಗೆ ಕೊಟ್ಟರು. 'Bendre and His Poetry' (ಬೇಂದ್ರೆ ಹಾಗು ಅವರ ಕಾವ್ಯ)ಯ ಪ್ರತಿಯು ನನ್ನಿಂದ ಅವರಿಗೆ ಹೋಯಿತು. ಅದನ್ನು 'The World of Books' (ಪುಸ್ತಕಗಳ ಜಗತ್ತು) ಎಂಬ ಬರ್ಮೀ ಮಾಸಿಕದಲ್ಲಿ ಮತ್ತೆ ಅಚ್ಚು ಹಾಕಿಸುವದಾಗಿ ಹೇಳಿದರು. ಆಧುನಿಕ ಬರ್ಮೀಕಾವ್ಯದ ಒಗ್ಗೆ ಹೆಚ್ಚು ಮಾಹಿತಿ ಪಡೆದು ಕನ್ನಡದಲ್ಲಿ ಬರೆಯುವ ಕಾರ್ಯವನ್ನು ನಾನು ಕೈಕೊಂಡೆನು. ಇದು 'ಪರಸ್ಪರಂ ಭಾವಯಂತಃ' ಎಂದಲ್ಲ! ಒಂದು ಪ್ರಾಂತದ ಸಂಸ್ಕೃತಿಯನ್ನು ಇನ್ನೊಂದು ಪ್ರಾಂತಕ್ಕೆ ತಿಳಿಸಲೆಂದು! ಬರ್ಮಾದಲ್ಲಿ ಸಂಕ್ರಾಂತಿಯ ಹೊತ್ತಿಗೆ ಎಳ್ಳು ಸಕ್ಕರೆ ಕೊಡುವದರ ಬದಲು ನೀರು ಹಾಕುವರಂತೆ. ಒಬ್ಬರ ಮನೆಗೆ ಹೋಗಿ ತರುಣಿಯನ್ನು ಹೊರಗೆ ಬರಲು ಕರೆದರೆ ಆಕೆ ಬರಲೇಬೇಕು! ಆ ಮೇಲೆ ಆಕೆಯ ಮೇಲೆ ತರುಣರು ಕೂಡಿ ನೀರು ಹಾಕುವರು! "ಹೊಸ ವರುಷ ನಿನಗೆ ಸುಖವಾಗಲಿ" ಮುಂತಾಗಿ ಅದರ ಅರ್ಥ. ಇದರ ಬಗ್ಗೆ ಮಿಂಥುಮನ್ನರ ಕವಿತೆಯೊಂದಿದೆ.

ಇಂದು 'ಆಕ್ಸಫರ್ಡ್ ಮಜಲಿಸಿ'ಗೆ ಸಹ ಹೋಗಿದ್ದೆ ಸಂಜೆಯ ಕಡೆಗೆ. ಇದು ಭಾರತೀಯ ವಿದ್ಯಾರ್ಥಿಗಳ ಸಂಘ. ಇಲ್ಲಿಯೂ ಸಹ ದ್ವೇಷ-ಅಸೂಯೆ ಇದ್ದಂತೆ ಕಾಣುತ್ತದೆ. ಅಧ್ಯಕ್ಷ-ಕಾರ್ಯದರ್ಶಿಗಳಾಗಲು ಬಡಿದಾಟ! ಭಾರತದ ಜೀವಾಳವನ್ನು ತಿಳಿದು ಅದರಂತೆ ನಮ್ಮ ಸಂಸ್ಕೃತಿಯನ್ನು ಈ ಸಂಘದ ಮಾರ್ಗವಾಗಿ ಪ್ರತಿಬಿಂಬಿಸಲು ಪ್ರಯತ್ನಿಸುವವರು ಅಲ್ಲಿ ಯಾರೂ ಇದ್ದಂತೆ ತೋರುವದಿಲ್ಲ. ಸಭೆಗೆ ವಯಸ್ಸಾದ ಆಂಗ್ಲ ಸ್ತ್ರೀಪುರುಷರು ಬಂದಿದ್ದರು. ಪ್ರೊ. ಆರ್ಥರ್ ಡೇವ್ಹೀಜ್ ಎಂಬವರು 'India and the League' (ಹಿಂದುಸ್ಥಾನ ಹಾಗು ರಾಷ್ಟ್ರಸಂಘ) ಎಂಬ ವಿಷಯದ ಮೇಲೆ ಮಾತನಾಡಿದರು.

ಇವರು ಬಳ್ಳಾರಿಯಲ್ಲಿ ಹುಟ್ಟಿದರಂತೆ. ನಮ್ಮನ್ನು "Fellow-country men" (ಸಹ-ದೇಶಬಂಧುಗಳೇ) ಎಂದು ಸಂಬೋಧಿಸಿದರು! ಮದ್ರಾಸಿನ ಲಾ ಕಾಲೇಜದ ಪ್ರಿನ್ಸಿಪಾಲರಾಗಿದ್ದರು. ಒಟ್ಟು ಹಿಂದುಸ್ತಾನದಲ್ಲಿ ೨೫ ವರ್ಷಗಳವರೆಗೆ ಇದ್ದವರು. ಗೋಖಲೆಯವರ ಸ್ನೇಹಿತರಂತೆ ಇವರು. ಟಿಳಕರು ಮದ್ರಾಸಿಗೆ ಬಂದಾಗ ಕಾಲೇಜಿಗೆ ಕರೆಯಬೇಕೆಂದು ಹುಡುಗರು ಒತ್ತಾಯಪಡಿಸಿದರು. ಆಗ ಇವರು ಟಿಳಕರನ್ನು ಬರಮಾಡಿಕೊಂಡರು. "I have been to several government institutions. But I have never before been a willing guest" (ನಾನೆಷ್ಟೋ ಸರಕಾರಿಯ ಸಂಸ್ಥೆಗಳಿಗೆ ಹೋಗಿದ್ದೇನೆ. ಆದರೆ ನಾನೆಂದೂ ಸಂತೋಷದಿಂದ ಬರಮಾಡಿಕೊಂಡ ಅತಿಥಿಯಾಗಲಿಲ್ಲ) ಎಂದು ಟಿಳಕರು ತಮ್ಮ ಭಾಷಣವನ್ನು ಪ್ರಾರಂಭಿಸಿದರಂತೆ! ಆಮೇಲೆ 'ಸೆಕ್ರೆಟೇರಿಯಟ್'ದಿಂದ ಡೇವ್ಹೀಜ್ ಅವರಿಗೆ ಕರೆ ಬಂದಿತು. ಅಲ್ಲಿ ಹೋಗಿ ತಮ್ಮ ತತ್ವವನ್ನೇ ಪ್ರತಿಪಾದಿಸಿದರು. ಆಮೇಲೆ ಆಗ ಮದ್ರಾಸಿನ ಗವ್ಹರ್ನರರಾಗಿದ್ದ ಲಾರ್ಡ ಏಲಿಂಗ್ಡನ್ನರು ಅವರನ್ನು ಕರೆಸಿದರು. "It is better that my students hear him in my own college rather than attend big public meetings. There must be a certain amount of academic freedom" (ನನ್ನ ವಿದ್ಯಾರ್ಥಿಗಳು ಸಾರ್ವಜನಿಕ ಸಭೆಗಳಿಗೆ ಹೋಗುವದಕ್ಕಿಂತ ನನ್ನ ಕಾಲೇಜಿನಲ್ಲಿಯೇ ಅವರ ಮಾತು ಕೇಳುವದು ಲೇಸು. ಒಂದು ಸ್ವಲ್ಪ ವಿದ್ಯಾಸಂಸ್ಥೆಗಳಿಗೆ ಸ್ವಾತಂತ್ರ್ಯಬೇಕು) ಎಂದು ಇವರು ಪ್ರತಿಪಾದಿಸಿದರು. ಕಡೆಗೆ ವಿಲಿಂಗ್ಡನ್ನರು: "Well, Davies, I think I agree with you" (ಒಳ್ಳೇದು, ಡೇವ್ಹೀಜ, ನಿಮ್ಮ ಮಾತು ನನಗೆ ಒಪ್ಪಿತು) ಎಂದು ಮಾತು ಮುಗಿಸಿದರು. ಆದರೆ ಸೆಕ್ರೆಟೇರಿಯಟ್‌ದಲ್ಲಿದ್ದ ಅಧಿಕಾರಿಗಳಿಗೆ ಮಾತ್ರ ಸಮಾಧಾನವಾಗಲಿಲ್ಲ!

ಇವರ ಸ್ನೇಹಿತರು ಇವರನ್ನು "The instigator of sedition" (ದ್ರೋಹಜನಕ) ಎಂದು ಕರೆಯುತ್ತಿದ್ದರಂತೆ. ಹಿಂದುಸ್ತಾನದ ರಾಜ

ಕಾರಣದಲ್ಲಿ ವಕೀಲರೇ ಮುಂದಾಳುಗಳು. ಇವರು ಲಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು!

ಸಾರ್ವತ್ರಿಕ ಶಾಂತಿಯ ಕನಸು ನಿಜವಾಗಿ ಇವರ ಕಣ್ಣ ಮುಂದೆ ಕಟ್ಟಿದೆ. 'The Covenant of the League' (ರಾಷ್ಟ್ರಸಂಘದ ನಿಯಮಾವಳಿ) ಎಂಬ ಸಣ್ಣ ಪುಸ್ತಕವನ್ನು ಯಾವಾಗಲೂ ಜಾಕೀಟಿನ ಕಿಸೆಯಲ್ಲಿ ಇಟ್ಟಿರುತ್ತಾರೆ. ಅದು ಪ್ರತಿಯೊಬ್ಬರ ಹೃದಯದ ಹತ್ತಿರ ಇರಬೇಕೆಂದು ಅವರ ಮತ. ಒಂದು ಲೀಗ್ ಹಾಳಾದರೆ ಇನ್ನೊಂದನ್ನು ಕಟ್ಟಬೇಕೆಂದು, ಶಾಂತಿಯ ತತ್ವವು ಚಿರಂತನವಾದುದೆಂದು, ಅವರು ಪ್ರತಿಪಾದಿಸಿದರು; ಹೃದಯಸ್ಪರ್ಶಿಯಾಗಿ ಮಾತನಾಡಿದರು. ಇಂಥ ಅನೇಕ ದಾರ್ಶನಿಕರನ್ನು ಹುಟ್ಟಿಸಿದ್ದು ಆಂಗ್ಲ ಸಂಸ್ಕೃತಿಯ ಫಲೋನ್ಮುಖತೆಯನ್ನು ತೋರಿಸುತ್ತದೆ.

ಹಿಂದುಸ್ತಾನದಲ್ಲಿಯ ವರ್ತಮಾನಪತ್ರಗಳ ಕೆಲವು ಪಾನುಗಳನ್ನು ತೆಗೆದುಕೊಂಡು ಬಂದಿದ್ದರು. ಅಲ್ಲಿ 'ಲೀಗ'ದ ಬಗ್ಗೆ ಏನೇನು ಅಭಿಪ್ರಾಯವಿದೆಯೆಂಬುದನ್ನು ಸಮಗ್ರವಾಗಿ ಕೂಡಿ ಹಾಕಿದ್ದರು. "ಸ್ವತಂತ್ರ ರಾಷ್ಟ್ರಗಳು ಇಲ್ಲವೆ ಸ್ವಾಧಿಕಾರವುಳ್ಳ ವಸಾಹತುಗಳು ಮಾತ್ರ 'ಲೀಗ್'ವನ್ನು ಸೇರಬಲ್ಲವೆಂದು ನಿಯಮವಿದೆ. ಆದರೂ ಹಿಂದುಸ್ತಾನವನ್ನು ನೀವು ಸೇರಿಸಿದ್ದೀರಿ. ಆ ಪರರಾಷ್ಟ್ರಗಳೆದುರಿಗೆ ನಿಮ್ಮ ನ್ಯಾಯಬುದ್ಧಿಯನ್ನು ಮೆರೆಸಿದ್ದೀರಿ. ಈಗ ಅಧಿಕಾರವನ್ನು ಕೊಟ್ಟೀ ತೀರಬೇಕು"ಎಂದು ಸರಕಾರದೊಡನೆ ಭಾರತೀಯ ರಾಜಕಾರಣಪಟುಗಳು ನ್ಯಾಯ ಹೂಡಬೇಕೆಂದು ಅವರ ಮತ. ಅವರ ಸೂಚನೆಯಿಂದ ಬಹಳ ಪ್ರಯೋಜನವಾಗಲಿಕ್ಕಿಲ್ಲ. ಆದರೆ ಇಂಥ ಮನುಷ್ಯನನ್ನು ಪ್ರೀತಿಸದವರು ಯಾರು?

---

## ೧೭

...... ಆಕ್ಸಫರ್ಡ

೨೧—೧೦—೩೬

ಮೂರು ದಿವಸಗಳಲ್ಲಿ ಇಂದು ಬರೆಯಲು ಕೂಡಿತು. ಪ್ರೊ. ರೆನ್ ಅವರ ಕಡೆಗೆ ಮತ್ತೆ ಇಂದು ಹೋಗಿದ್ದೆ. ಭಾಷಾಶಾಸ್ತ್ರದಲ್ಲಿ ಅವರು ವೇದಾಂತವನ್ನು ಕಂಡಿದ್ದಾರೆ. ಶಬ್ದಗಳ ವ್ಯುತ್ಪತ್ತಿಯನ್ನು ಕುರಿತು ಅವರು ಮಾತನಾಡುವದನ್ನು ಕೇಳಬೇಕು! ಕವಿಯು ಜಗತ್ತಿನ ಮೂಲ ವನ್ನು ಕುರಿತು ಮಾತನಾಡಿದ ಹಾಗಾಗುತ್ತದೆ! ಎ್ಯಂಗ್ಲೋ-ಸ್ಯಾಕ್ಸನ್ ದಲ್ಲಿಯ 'Weorc' (ವೆಓರ್ಕ) ಎಂಬ ಶಬ್ದಕ್ಕೂ-ಸಂಸ್ಕೃತದಯಲ್ಲಿಯ 'ವೃಕ'ಕ್ಕೂ ಇರುವ ಸಾಮ್ಯವನ್ನು ಅವರು ಸಂದರ್ಭಾನುಸಾರವಾಗಿ ತೋರ್ಪಡಿಸಿದರು.

ನಿನ್ನೆ ಶರ್ವುಡ್ಡನ ಕೂಡ ವಿಶೇಷ ಮಾತಾಯಿತು. ತನ್ನಲ್ಲಿ ಸಮ ತಾವಾದವು ಬೆಳೆದ ಪರಿಯನ್ನು ಅವನು ತಿಳಿಯಪಡಿಸಿದ. ಮೊದಲು 'League of Nations' (ರಾಷ್ಟ್ರಸಂಘ)ದ ಸಲುವಾಗಿ ದುಡಿದು ದುಡ್ಡು ಕೂಡಿಸಿ ಸಾಲೆಗೆ ಹೋದನಂತೆ. ಒಂದು ಫ್ಯಾಕ್ಟರಿಯಲ್ಲಿ ಕೆಲಸ ಮಾಡುವಾಗ ಒಂದು ಸಂಪಾಯಿತು. ಇವನೂ ಸಂಪುಗಾರನಾದ. ಆಗ ನಿರಪರಾಧಿಗಳಿಗೆ ಅಧಿಕಾರಿಗಳಿಂದ ಹೇಗೆ ತ್ರಾಸಾಗುವದೆಂಬುದರ ಕಲ್ಪನೆಯು ಇವನಿಗೆ ಬಂತು. ಸಮತಾವಾದಿಗಳು ಮಾತ್ರ ಇದಕ್ಕೆ ಯೋಗ್ಯ ಉಪಾಯವನ್ನು ಕೈಕೊಂಡಿರುವದು ತಿಳಿದು ಬಂತು. ಸರಿ, ಇವನೂ 'ಕಮ್ಯುನಿಸ್ಟ' ಆದ. ಕೆಲವು ಸಣ್ಣ ಕಥೆಗಳನ್ನೂ ಬರೆದಿದ್ದಾನೆ.

ನಮ್ಮ ಸೀನಿಯರ್ ಟ್ಯೂಟರರಾದ ಎಡ್ವರ್ಡ್ಸ್ ಎಂಬವರ ಕಡೆಗೆ ಚಹಕ್ಕಾಗಿ ಹೋಗಿದ್ದೆ. ಶ್ರೀಮತಿ ಎಡ್ವರ್ಡ್ಸ್ ಅವರು ಆಂಗ್ಲ ಸಾಹಿತ್ಯ ವನ್ನು ಚೆನ್ನಾಗಿ ಪರಿಶೀಲಿಸಿದ್ದಾರೆ. ಅವರು ಆಕ್ಸಫರ್ಡ್ ವಿಶ್ವವಿದ್ಯಾಲಯ ದಲ್ಲಿ ವಿದ್ಯಾರ್ಥಿನಿಯಾಗಿದ್ದರು.

* * * *

೨೨—೧೦—೩೬

ಶರ್ವುಡ್ ಹೇಳುತ್ತಿದ್ದ: ಅವನು ಬ್ರೆಟ್‌ಸ್ಮಿತ್ಥರ ಕಡೆಗೆ ಮೊದಲ ನೆಯ ಸಲ ಹೋಗಿದ್ದ. ಅವನು ಹೋಗಿ ಸುಮಾರು ಹತ್ತು ನಿಮಿಷ ಗಳಾದ ಮೇಲೆ ನಾನು ಹೋದೆ. ಅಷ್ಟರಲ್ಲಿ ಅವನಿಗೆ ಬ್ರೆಟ್‌ಸ್ಮಿತ್ಥರು ಹೇಳುತ್ತಿದ್ದರಂತೆ: "You will have to work with an Indian. Some of the Indians are quite nice people, but for their political leanings." (ನೀನು ಒಬ್ಬ ಭಾರತೀಯನಕೂಡ ಕೆಲಸ ಮಾಡಬೇಕು. ಕೆಲವು ಭಾರತೀಯರು ಎಷ್ಟೋ ಚೆನ್ನಾಗಿರುತ್ತಾರೆ, ಅವರ ರಾಜಕೀಯ ಒಲವುಗಳನ್ನು ಬಿಟ್ಟರೆ.)

* * * *

ಇಂದು ರಾಧಾಕೃಷ್ಣರ ಉಪನ್ಯಾಸವನ್ನು ಕೇಳಲು ಹೋಗಿದ್ದೆ. ಈ ವರ್ಷದಲ್ಲಿಯ ಎರಡನೆಯ ಉಪನ್ಯಾಸವಿದು. ಪ್ರಾರಂಭೋತ್ಸವಕ್ಕೆ ಹೋಗುವದಾಗಲಿಲ್ಲ. ಇಂದಿನ ಭಾಷಣವು ಸುಂದರವಾಗಿತ್ತು. ಇವರು ಆಕ್ಸಫರ್ಡದಲ್ಲಿದ್ದದ್ದು ಭಾರತೀಯರಿಗೆಲ್ಲ ನಿಜವಾಗಿ ಭೂಷಣವಾಗಿದೆ ಯೆಂದೇ ಹೇಳಬೇಕು. ಅವರು ಉತ್ತಮ ಪ್ರೊಫೆಸರರು, ಅವರ ಗಾಂಭೀರ್ಯವೆಲ್ಲ ಬುದ್ಧಿವಂತಿಕೆಯದು. ಆ ಬುದ್ಧಿವಂತಿಕೆಯು ಮಾತ್ರ ವೇದಾಂತದ ತಿಳುವಳಿಕೆಯ ಮೇಲೆ ನಿಂತಿದೆ. ಧರ್ಮದ ವ್ಯಾಖ್ಯೆಯನ್ನು ಹೇಳಿದರು: animalistic (ಆಧಿದೈವಿಕ), magical (ತಾಂತ್ರಿಕ) ಮತ್ತು social (ಸಾಮಾಜಿಕ) ಮತಗಳನ್ನು ಒಳಗೊಂಡು, 'ಅಭಯ' ವನ್ನು ಕೊಟ್ಟು ಆಂತರಿಕ ಹಾಗು ಬಹಿರಂಗದಲ್ಲಿಯ ಸಾಮರಸ್ಯವನ್ನು ಉಂಟುಮಾಡುವದೇ ಧರ್ಮವೆಂದು ಹೇಳಿದರು.

* * * *

ಆಕ್ಸಫರ್ಡ್ ಯೂನಿಯನ್ನದ ಎರಡನೆಯ ಸಭೆಯಿತ್ತು ಇಂದು. "This house has no use for aristocracy" (ಈ ಗೃಹಕ್ಕೆ ಪ್ರಭು-ಸತ್ತೆಯಿಂದ ಪ್ರಯೋಜನವಿಲ್ಲ) ಎಂಬುದೇ ಇಂದಿನ ಚರ್ಚೆಯ ವಿಷಯ. ಆಂಗ್ಲರು ವಿನೋದಪ್ರಿಯರು. ವಿನೋದವು ಸೂಕ್ಷ್ಮತಮವಿರಲೊಲ್ಲದೇಕೆ, ಅದನ್ನು ಸರಿಯಾಗಿ ಸವಿಯುವದರಲ್ಲಿ ಇಲ್ಲಿಯ ಸಭಿಕರಿಗಿಂತ ಹೆಚ್ಚಿನ ರಸಿಕರನ್ನು ಇನ್ನಾರನ್ನೂ ಕಾಣೆ. ಇಲ್ಲಿಯ ಮಾತುಗಾರರು ಸಹ ಉತ್ತಮ ವಿನೋದಿಗಳು. ವಿದ್ಯಾರ್ಥಿಗಳ ಚರ್ಚಾಸಂಘದಲ್ಲಿ ಸಹ ಇಂಥ ಶ್ರೇಷ್ಠ ವಿನೋದವು ಹುಟ್ಟುತ್ತಿದೆ. ಆಂಗ್ಲ ಸಾಹಿತ್ಯದಲ್ಲಿಯ ರಸಿಕತೆಯ ಬೇರು ಇಲ್ಲಿದೆ. ಒಬ್ಬ ಸದಸ್ಯನು ಇಂದು ಪ್ರಶ್ನೆಯೆತ್ತಿದ: "The emergency exit, to be used in case of fire, is out of order. The matter should be looked into." (ಬೆಂಕಿ ಬಿದ್ದಾಗ ಹಾದಾಡುವ ಜರೂರು ಬಾಗಿಲವು ಕೆಟ್ಟಿದೆ. ಈ ವಿಷಯಕ್ಕೆ ಗಮನ ಕೊಡಬೇಕು) ತತ್‌ಕ್ಷಣ ಅಧ್ಯಕ್ಷರ ಉತ್ತರ ಬಂತು: "The oratory of this house is not so **fiery** as to necessitate it." (ಈ ಗೃಹದ ವಕ್ತೃತ್ವವು ಅದನ್ನು ಅವಶ್ಯಗೊಳಿಸುವಷ್ಟು **ಬೆಂಕಿ** (ಉಗ್ರ) ಯಾಗಿಲ್ಲ)

*　　　*　　　*　　　*

೨೩—೧೦—೩೬

ಇಂದು 'ಥರ್ಡ್ ಏಕರ್ ರಾಯಿಜ್' ಎಂಬ ಹಳ್ಳಿಯ ಕಡೆಗೆ ತಿರುಗಾಡುತ್ತ ಹೋಗಿದ್ದೆ. ಇಲ್ಲಿ ಫರ್ಲಾಂಗಿಗೊಂದೊಂದು ಹಳ್ಳಿ! ನೆಲದ ಏರಿಳಿತವು ಬಹು ರಮಣೀಯವಾಗಿತ್ತು. ಹುಲ್ಲುಗಾವಲಿನಲ್ಲಿ ಆಕಳು ಕರು ಮೇಯುತ್ತ ನಿಂತಿದ್ದವು. ಇನ್ನೊಂದು ಕಡೆಗೆ ಒಕ್ಕಲಿಗನೊರ್ವನು ಕುದುರೆ ಹೂಡಿ ರಂಟೆ ಹೊಡೆಯುತ್ತಿದ್ದನು. ಒಂದು ಮರದ ಎಲೆಗಳೊಳಗಿಂದ ಹಾಯ್ದು ಮುಳುಗುತ್ತಿರುವ ಸೂರ್ಯನನ್ನು ಪಿಕಿ ಪಿಕಿ ನೋಡುತ್ತ ನಿಂತೆ. ಇಂಥ ಅಂದವಾದ ಬಿಸಿಲಿದ್ದ-ದಿನವು ಬಹು ದಿನಗಳವರೆಗೆ ಮೂಡಿದ್ದಿಲ್ಲ. ವಿಚಾರಮಾಡುತ್ತಿರುವಾಗ, ಜಾರ್ಜ ಹರ್ಬರ್ಟನ ಕವಿತೆಯೊಂದು ನೆನಪಾಯಿತು:

"Sweet day, so cool, so calm so, bright,
The bridal of the earth and sky,—
The dew shall weep thy fall to night
For thou must die."

(ಸುಂದರ ದಿನವೇ, ಎಷ್ಟು ತಂಪು, ಎಷ್ಟು ಶಾಂತ, ಎಷ್ಟು ಸ್ವಚ್ಛ!
ಭೂಮಿ-ಆಕಾಶಗಳ ಸಿಬ್ಬಣವೇ–
ಈ ರಾತ್ರಿ ಮಂಜು ಅತ್ತೀಅಳುವುದು–ನಿನ್ನ ಕೊನೆ ನೋಡಿ.
ನೀನಿಂದು ಸಾಯಲೆ ಬೇಕಲ್ಲವೇ?)

ಬಿಸಿಲಿದ್ದರೂ ಕುತ್ತಿಗೆಗೆ 'ಮಫ್ಲರ್' ಬಿಗಿದುಕೊಂಡು ನಾನು ಮುಂದೆ ಸಾಗಿದ್ದೆ. ಅನೇಕ ಚಿಕ್ಕ ಹುಡುಗರು, ಹಾಯ್ದುಹೋಗು ತ್ತಿರುವಾಗ ನನ್ನನ್ನು ಲಕ್ಷ್ಯಗೊಟ್ಟು ನೋಡುತ್ತಿದ್ದರು. ಅವರಿಗೆ ನಾನೊಂದು ವಿಚಿತ್ರ ಪ್ರಾಣಿಯಾಗಿ ಕಂಡಿರಬೇಕು! 'ಹಲೋ!' ಎಂದು ಒಬ್ಬ ಹುಡುಗನು ಮಾತನಾಡಿಸಿದ. 'ಹಲೋ!' ಎಂದು ನಾನು ಉತ್ತರ ಕೊಟ್ಟೆ!

ಈ ಶಾಂತಮಯ ದೃಶ್ಯದ ಮೇಲೆ 'ರೊಂಯ್' ಎಂದು ವಿಮಾನ ವೊಂದು ಹಾರಾಡುತ್ತಿತ್ತು. ಅದು ಆಂಗ್ಲ ವಿಮಾನ. ಮುಂದೊಂದು ಯುದ್ಧವಾದರೆ–ಆಗ ಪರದೇಶಗಳ ವಿಮಾನಗಳು ಇಲ್ಲಿ ಹಾರಾಡಿದರೆ– ಗತಿಯೇನು??

* * * *

ಯುದ್ಧಸಾಮಗ್ರಿಗಳನ್ನು ತಯಾರಿಸುವದಕ್ಕಾಗಿ ಉಳಿದ 'ಡಿಪಾರ್ಟ ಮೆಂಟು'ಗಳ ದುಡ್ಡನ್ನು ಸಹ ಇಲ್ಲಿಯ ಸರಕಾರದವರು ಕಡಿಮೆ ಮಾಡಿ ದ್ದಾರೆ. ಬಡವರಿಗೆ ಕೊಡುವ 'ಸೀದಾ'ವನ್ನು ಸಹ ಕಡಿಮೆ ಮಾಡಿ ದ್ದಾರೆ. ಅದಕ್ಕಾಗಿ ದಕ್ಷಿಣ ವೇಲ್ಸದಿಂದ ಲಂಡನ್ನದವರೆಗೆ ಕುರುಡರ ಮೇಳವೊಂದು ಕವಾಯಿತು ಮಾಡುತ್ತ ಹೊರಟಿದೆ. ಇಲ್ಲಿಯ ಲೇಬರ್ ಕ್ಲಬ್ಬಿನ ಪರವಾಗಿ ಅವರಿಗೆ ಇಂದು ಪ್ರಚಂಡ ಸ್ವಾಗತವಾಯಿತು. ನಡೆದಿದೆ ಯುದ್ಧದ ತಯಾರಿ!

## ೧೮

. . . . . . .                                                ಆಕ್ಸಫರ್ಡ್
                                                              ೨೬—೧೦—೩೬

ಮೂರು ದಿವಸ ಬರೆಯದೆ ಬಿಟ್ಟಿತೆಂದರೆ ಮಾತೆಲ್ಲ ಮೂಲೆಗುಂಪಾಗುವುದು. ಹೂಂ! ನೆನೆಸಿಕೊ! ಇವತ್ತೇನಾಯಿತು? ಎಲ್ಲರ ನೆನಪಾಗಿ ಹುಚ್ಚನಂತೆ ಇಂದು ಲಾಯನ್ಸ್ ಹೋಟೆಲ್ಲಿನಲ್ಲಿ ಮಧ್ಯಾಹ್ನದ ಊಟಕ್ಕೆ ಕುಳಿತಿದ್ದೆ. ವಿಚಾರವು ಒತ್ತಟ್ಟಿಗೆ, ದೇಹವು ಇನ್ನೊಂದು ಕಡೆಗೆ! ಇಲ್ಲಿಯ ಜನರಿಗೇ ತಮ್ಮ ಉಪಹಾರಗೃಹದಲ್ಲಿ ಸಿಗುವ ಉತ್ತಮ ಜಿನಸುಗಳು ಗೊತ್ತಿದ್ದಂತೆ ಕಾಣುವದಿಲ್ಲ! ನಾನು 'Vegetable hot-pot' (ವ್ಹೆಜಿಟೆಬಲ್ ಹೊಟ್-ಪೊಟ್) ತರಿಸಿದೆ. ಅದನ್ನು ನೋಡಿ ನನ್ನ ಟೇಬಲ್ಲಿನ ಹತ್ತಿರ ಕುಳಿತ ಆಂಗ್ಲ ಯುವಕರೂ ಅದನ್ನೇ ತರಿಸಿದರು!

ನಿನ್ನೇನಾಯಿತು? ನಿನ್ನೆ ರಾತ್ರಿ ಆಕ್ಸಫರ್ಡ್ ಮಜಲಿಸ್‌ದಲ್ಲಿ (ಭಾರತೀಯ ವಿದ್ಯಾರ್ಥಿಗಳ ಚರ್ಚಾಸಭೆ) ಚರ್ಚೆಯಿದ್ದಿತು, ಸೆಂಟ್ ಹ್ಯೂಜ್ ಕಾಲೇಜಿನ ವಿದ್ಯಾರ್ಥಿನಿಯರೊಡನೆ. ೨೦–೨೫ ಜನ ಭಾರತೀಯ ವಿದ್ಯಾರ್ಥಿಗಳಿದ್ದರು. ೨೫–೩೦ ಸೆಂಟ್ ಹ್ಯೂಜ್ ವಿದ್ಯಾರ್ಥಿನಿಯರಿದ್ದರು. ವಿಷಯವೇನೆಂದು ತಿಳಿಯಿತೇ? "ಕೆಲವೊಂದು ವಿಶೇಷ ಪ್ರಸಂಗಗಳಲ್ಲಿ ರೋಗಿಗಳನ್ನು ಕೊಲ್ಲಲು ಡಾಕ್ಟರರಿಗೆ ಅಧಿಕಾರವಿರಬೇಕು." ಆಕ್ಸಫರ್ಡ್ ಯೂನಿಯನ್ ಮೊದಲಾದ ಸಂಘಗಳಲ್ಲಿ ರಾಜಕಾರಣ, ಬಂಡವಾಳತನ, ಸಮತಾವಾದ ಮುಂತಾದ ವಿಷಯಗಳನ್ನು ಚರ್ಚಿಸುತ್ತಾರೆ. ಆದರೆ ಭಾರತೀಯ ಚರ್ಚಾಸಭೆಗೆ ಇಂಥ ವಿಷಯಗಳ ಆಗತ್ಯವೇನಿದೆ??? ಅಧಿಕಾರಿಗಳು ಬಾಯಿ ಬಂದು ಮಾಡದೆ ಸಹ ಸಮ್ಮ

ವಿದ್ಯಾರ್ಥಿಗಳು ಬಾಯಿ ಹೊಲಿದುಕೊಂಡು ಕೂಡುತ್ತಾರೆ. ಪಾಪ! ರೂಢಿ ಬಿದ್ದಿದೆ, ಇರಲಿ.

ಮೊದಲು ಪ್ರಶ್ನೋತ್ತರಗಳಾದವು. "Mr. President, the full dignity with which God has endowed you demands a better chair. I would request the treasurer to give you an armed one" (ಅಧ್ಯಕ್ಷರೇ, ದೇವರು ನಿಮ್ಮನ್ನು ಯಾವ ಗೌರವದಿಂದ ಕೂಡಿಸಿರುವನೋ ಅದು ಇಡಕ್ಕೂ ಒಳ್ಳೆಯ ಕುರ್ಚಿಗೆ ಅರ್ಹವಾಗಿದೆ. ಕೋಶಾಧ್ಯಕ್ಷರು ನಿಮಗೆ ಕೈಯುಳ್ಳ ಕುರ್ಚಿ ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ) ಎಂದು ಮಾರ್ಮಿಕವಾಗಿ ಒಬ್ಬರು ಪ್ರಶ್ನೆಯೆತ್ತಿದರು. "The treasurer will look into the matter" (ಕೋಶಾಧ್ಯಕ್ಷರು ಅದನ್ನು ನೋಡಿಕೊಳ್ಳುವರು) ಎಂದು ಅಧ್ಯಕ್ಷರು (ಆರಿಸಿ ಬಂದ ವಿದ್ಯಾರ್ಥಿ) ಮುಗಿಸಿದರು! ಅಧ್ಯಕ್ಷರ ಮುಕ್ತಾಯಕ್ಕೆ ಎಲ್ಲರೂ ನಕ್ಕರು, ತಿರಸ್ಕಾರಪೂರ್ವಕವಾಗಿ.

ಆಮೇಲೆ ಕೆಲವು ಮಹನೀಯರು ಇಂಗ್ಲಿಷಿನಲ್ಲಿ ಮಾತನಾಡಿದರು. 'Mother-in-laws' (ಮದರ ಇನ್ ಲಾಜ) ಎಂದು ಒಬ್ಬರು ತಡವರಿಸಿದರು. ಇನ್ನೊಬ್ಬರು ಮತ್ತೇನೋ ಹೇಳಿದರು. ಆಂಗ್ಲ ವಿದ್ಯಾರ್ಥಿನಿಯರ ಮಾತಿನಲ್ಲಿ ಎಳ್ಳಷ್ಟಾದರೂ ವಿನೋದವಿರಲಿಲ್ಲ. ಕ್ರಿಸ್ತ-ಮೇರಿಯರ ಸಣ್ಣ ಸಣ್ಣ ತುಣುಕುಗಳಂತೆ ಮಾತನಾಡಿದರು. ಇಂಥ ಗಾಂಭೀರ್ಯವು ಬೇಡವೆಂದಲ್ಲ! ಆದರೆ ವಿನೋದಕ್ಕೂ ಜಾಗವಿರಬೇಕು. ಅದಕ್ಕಾಗಿಯೇ ಆಕ್ಸಫರ್ಡ್ ಯೂನಿಯನ್ನದಲ್ಲಿ ವಿದ್ಯಾರ್ಥಿನಿಯರಿಗೆ ಸದಸ್ಯರಾಗಲು ಬರುವದಿಲ್ಲವೆಂದು ಕಾಣುತ್ತದೆ!

ಮೊನ್ನೆ ಸಂಜೆಗೆ ಬ್ರೆಟ್‌ಸ್ಮಿತ್ಥರ ಕಡೆಗೆ ಶರ್ವುಡ್ ಹಾಗು ನಾನು ಹೋಗಿದ್ದೆವು! ನನ್ನ ನಿಬಂಧಗಳು ವೇದಾಂತೀಯವಾಗಿವೆಯೆಂದು ಶರ್ವುಡ್ಡನ ಅಭಿಪ್ರಾಯ! "ಅಮೇರಿಕಾ ದೇಶದ ಸ್ವಭಾವವು ನನ್ನದು, ಸಂಗತಿಗಳನ್ನು ಕಲೆಹಾಕಿ ವಿವರಗೊಳಿಸುವದು; ಹಿಂದುಸ್ಥಾನದ ಚಟವು ನಿನ್ನದು; ವೇದಾಂತದ ಪರಿಭಾಷೆಯಲ್ಲಿ ಮಾತನಾಡುವದು"

ಎಂದಂದ. ಅವು ವೈಯುಕ್ತಿಕ ಭೇದಗಳಾಗಿದ್ದರೂ ಆಗಿರಬಹುದೆಂದು ನಾನು ಸೂಚಿಸಿದೆ.

* * * *

೨೮—೧೦— ೩೬

ವ್ಹಾರ್ಜಿನಿಯಾ ಸಿಗರೇಟನ್ನು ಇಲ್ಲಿ ಪ್ರಕಟಿಸುವ ರೀತಿಯು ಸ್ವಲ್ಪ ಮೋಜಾಗಿದೆ. ಅಂಗಡಿಯ ದೊಡ್ಡ ಕಿಡಿಕಿಯಲ್ಲಿ ಒಬ್ಬ ತುರುಕನನ್ನು ಕೂಡಿಸಿದ್ದಾರೆ. ಅವನು ನಿಮಿಷಕ್ಕೆ ಎರಡು-ಮೂರು ಸಿಗರೇಟುಗಳನ್ನು ಬಹು ಚಮತ್ಕಾರವಾಗಿ ಕೈಯಿಂದ ಮಾಡುತ್ತಾನೆ. ತಲೆಯ ಮೇಲಿನ ಗೊಂಡೆಯ ಟೊಪ್ಪಿಗೆಯೊಂದೇ ಅವನು ತುರುಕನೆಂದು ಹೇಳುತ್ತದೆ; ಉಳಿದುದೆಲ್ಲ ಆಂಗ್ಲ ವೇಷ. ಅವನು ಹೀಗೆ ತಯಾರಿಸುವದನ್ನು ನೋಡಲು ಜನರು ಗುಂಪುಗುಂಪಾಗಿ ನೆರೆಯುತ್ತಾರೆ. ಹತ್ತಿರದಲ್ಲಿ ಒಂದು ಬೋರ್ಡಿನ ಮೇಲೆ ಬರೆದಿದ್ದಾರೆ: The flavour of hand-made Virginia cigarettes is due to the blending by the member of a Turkish family which has preserved the tradition from generation to generation! (ತಲೆಮಾರಿನಿಂದ ತಲೆಮಾರಿಗೆ ಪರಂಪರೆ ಯನ್ನು ಕಾಯ್ದುಕೊಂಡು ಬಂದಿರುವ ಒಬ್ಬ ತುರುಕ ಕುಟುಂಬದ ಮನುಷ್ಯನು ಸರಿಯಾಗಿ ಬೆರಸುವದರಿಂದ ಕೈಲೆ ಮಾಡಿದ ವ್ಹಾರ್ಜಿನಿಯಾ ಸಿಗರೇಟಿನ ರುಚಿಯು ಉಂಟಾಗಿದೆ.)

ಕಾಲೇಜಿನ ಪಾಕಶಾಲೆಯಲ್ಲಿಯ ಬಲ್ಲವಸೇನಾಪತಿಯನ್ನು ನೋಡ ಬೇಕು! ಆರುನೂರು ವರ್ಷಗಳ ಹಿಂದಿನ ವೇಷವನ್ನು ಇಂದಿಗೂ ಧರಿಸು ವಂತೆ ಕಾಣುತ್ತದೆ. ಬಿಳಿಯ ನಿಲುವಂಗಿ, ತಲೆಯ ಹಿಂದೆ ದೊಡ್ಡದಾದ ಬಿಳಿಯ ತುರಾಯಿ! ಬಲು ತಮಾಷೆಯ ಸೋಗು. ಆಕ್ಸಫರ್ಡಿನ ಸಂಪ್ರ ದಾಯಗಳಲ್ಲಿ ಇದೂ ಒಂದು!

* * * *

ಶರ್ವುಡ್ಡನು ಶಹರದ ಮುನ್ಸಿಪಾಲಟಿಯ ಚುನಾವಣೆಗೆಂದು ನಿಂತ ಕಮ್ಯುನಿಸ್ಟ್ ಹುರಿಯಾಳುಗಳಿಗಾಗಿ ಇಡಿ ಒಂದು ವಾರ ದುಡಿದ,

ಅಭ್ಯಾಸವಿಲ್ಲದೆ! ಅಲ್ಲಿಯ ಕಾರ್ಯದರ್ಶಿಗಳಲ್ಲಿ ಒಬ್ಬ ಕನ್ಯಾಮಣಿಯಿರುವ ಳಂತೆ. ಅವಳೊಡನೆ ಕೆಲಸ ಮಾಡಲು ಶರ್ಮ್ಮಡ್ಡನಿಗೆ ಬಹಳ ಹುರುಪು. " But I have to discuss with her. I have to fight with her on certain points. I have no time to make love to her ! " (ಆದರೆ ಅವಳೊಡನೆ ನಾನು ಚರ್ಚಿಸಬೇಕು. ಕೆಲವು ಮಾತುಗಳ ಬಗ್ಗೆ ಕಾದಾಡ ಬೇಕು. ಪ್ರೀತಿ ಮಾಡಲು ಹೊತ್ತೇ ಇಲ್ಲ.) ಎಂದು ಹೇಳುತ್ತಿದ್ದ.

* * * *

ಫ್ಲೆಚರ್ ಎಂಬವರು ಡನ್ ಕವಿಯ ಮೇಲೆ ಉಪನ್ಯಾಸ ನಡೆಸಿ ದ್ದರು. 'ಆಸಾಮಿ' ಬಲು ಗಡಿಬಿಡಿ. ಕ್ಲಾಸಿನಲ್ಲಿ ಬಂದ ಕೂಡಲೆ ಒಂದೆರಡು ಕಿಡಿಕಿಗಳನ್ನು ತೆರೆಯಲೇಬೇಕು. ನನ್ನ ಹತ್ತಿರ ಅವರು ಓದು ತ್ತಿರುವ ಕವಿತಾಸಂಗ್ರಹದ ಪ್ರತಿಯಿರಲಿಲ್ಲ; ಮುಖ್ಯಾಂಶಗಳನ್ನು ಬರೆದುಕೊಳ್ಳುತ್ತಿದ್ದೆ. ನನ್ನ ಹತ್ತಿರ ಒಬ್ಬ ಇಂಗ್ಲ ವಿದ್ಯಾರ್ಥಿನಿಯು ಕೂತಿದ್ದಳು. ನಾನು ಬರೆಯುವಾಗ ಪಟಕ್ಕನೆ ನನ್ನನ್ನು ತಿವಿದಳು! ಗಾಬರಿಯಾಗಿ ಕಣ್ಣೆತ್ತಿ ನೋಡಿದೆ! ಆಕೆಯ ಹತ್ತಿರ ಆ ಕವಿತೆಯ ಪುಸ್ತಕ ವಿತ್ತು; ಕ್ಲಾಸಿನಲ್ಲಿ ಮಾತನಾಡುವ ಹಾಗಿಲ್ಲ; ಕಾರಣ ಆ ಪುಸ್ತಕದ ಕಡೆಗೆ ನಾನೂ ನೋಡಬಹುದೆಂದು ಈ ರೀತಿಯಾಗಿ ಸೂಚಿಸಿದಳು. ಎರಡನೆಯ ಯಾವ ವಿಚಾರವೂ ಅವಳ ಮನಸ್ಸಿನಲ್ಲಿರಲಿಲ್ಲ. ಆದರೆ ನಮ್ಮ ಲ್ಲಿಯ ಸಂಸ್ಕಾರಗಳೇ ಬೇರೆ. ಅವಳ ಸಹಜತೆಯನ್ನು ಒಮ್ಮೆಲೆ ತಿಳಿಯ ಲಾರದೆ ಹೋದೆ. ಅದೇ ಹೊತ್ತಿನಲ್ಲಿ 'Take heed of loving her and take heed of hating her' (ಅವಳನ್ನು ಪ್ರೀತಿಸುವಾಗ ಎಚ್ಚ ರಿರು; ದ್ವೇಷಿಸುವಾಗ ಎಚ್ಚರಿರು!) ಎಂಬರ್ಥದ ಡನ್ ಕವಿಯ ಕವಿತೆ ಯನ್ನು ಉಪನ್ಯಾಸಕಾರರು ಓದುತ್ತಿದ್ದರು.

* * * *

ಮಂಗಳವಾರ ರಾತ್ರಿ ಇಲ್ಲಿಯ English Speaking Club (ಇಂಗ್ಲಿಶ್ ಭಾಷಣ ಕ್ಲಬ್ಬು) ನಲ್ಲಿ ಒಂದು ಚರ್ಚೆಯಿತ್ತು! "Literature is the product of social conditions" (ಸಾಹಿತ್ಯವು

ಸಾಮಾಜಿಕ ಪರಿಸ್ಥಿತಿಯ ಫಲವಾಗಿದೆ) ಎಂಬ ವಿಷಯದ ಮೇಲೆ. ಅದರಲ್ಲಿ ಭಾಗ ತೆಗೆದುಕೊಳ್ಳಲೆಂದು ಕೇಂಬ್ರಿಜ್ ವಿದ್ಯಾರ್ಥಿಗಳನ್ನು ಆಮಂತ್ರಿಸಿದ್ದರು. ವಿಷಯವನ್ನು ಸಮರ್ಥಿಸಿ ಮಾತನಾಡಿದವರು ಭೌತಿಕ-ವಿಶೇಷತಃ ಮಾರ್ಕ್ಸಿಸ್ಟ್-ಅಭಿಪ್ರಾಯವನ್ನು ಮಂಡಿಸಿದರು. ಅಲ್ಲಗಳೆದವರು ವ್ಯಕ್ತಿತ್ವವನ್ನೂ ಅದರ ಮಹತ್ವವನ್ನೂ ಬಣ್ಣಿಸಿ ಮಾತ ನಾಡಿದರು. ಮುಖ್ಯರಾದ ಇಬ್ಬರ ಭಾಷಣಗಳು ಚೆನ್ನಾಗಿದ್ದವು. ಯಥಾಪ್ರಕಾರ ಹೆಣ್ಣುಮಕ್ಕಳಿಬ್ಬರಿಗೆ ಮಾತನಾಡಲು ಬರಲಿಲ್ಲ! ವಿನೋದವಂತೂ ಸುತರಾಂ ಇಲ್ಲ. ಆದರೆ ಉಳಿದ ಅನೇಕರ ಮಾತು ವಿನೋದಮಯವಾಗಿತ್ತು. ಕೇಂಬ್ರಿಜ್ ವಿದ್ಯಾರ್ಥಿಯು "We shall not dwell on the rivalry between the two universities in the past; but rather on their combination against the barbarous forces in the world" (ಎರಡೂ ವಿಶ್ವವಿದ್ಯಾಲಯಗಳ ನಡುವಿದ್ದ ಹಿಂದಿನ ಈರ್ಷೆಯನ್ನು ಕುರಿತು ಈಗ ಪ್ರಸ್ತಾಪಿಸುವದು ಬೇಡ. ಆದರೆ ಜಗತ್ತಿನ ಕಾಡು ಶಕ್ತಿಗಳ ವಿರುದ್ಧ ಅವರೆಡರ ಕೂಟವನ್ನು ಕುರಿತಾ ಡುವ.) ಎಂದು ಸುರುವು ಮಾಡಿದ. ಆದರೆ ಮುಂದೆ ಮಾತಿನಲ್ಲಿ, "Oxford is an industrial town" (ಆಕ್ಸಫರ್ಡ ಉದ್ಯೋಗನಿಷ್ಠ ಊರು) ಎಂದು ವ್ಯಂಗ್ಯೋಕ್ತಿಮಾಡಿದ. "The man whom all Combridgemen swear by—I. A. Richards" (ಎಲ್ಲ ಕೆಂಬ್ರಿಜ್ ಜನರು ಯಾವನಿಗೆ ಒಳಪಟ್ಟು ಇರುವರೋ-ಆಯ್. ಎ. ರಿಚರ್ಡ್ಸ) ಎಂದು ಒಬ್ಬ ಆಕ್ಸಫರ್ಡ್ ವಿದ್ಯಾರ್ಥಿಯ ಭಾಷಣದಲ್ಲಿ ಬಂತು. ಅಧ್ಯಕ್ಷ ನಾದ ಕಾರ್ಯದರ್ಶಿಯು ಕೇಂಬ್ರಿಜ್ ವಿದ್ಯಾರ್ಥಿಗಳ ಆಭಾರ ಮನ್ನಿಸು ವಾಗ "This time Oxford and Cambridge have got to know each other,-a little" (ಈ ಸಾರೆ ಆಕ್ಸಫರ್ಡ ಹಾಗು ಕೆಂಬ್ರಿಜ್ ಒಬ್ಬ ರೊಬ್ಬರ ವಿಷಯ ತುಸು ಅರಿತುಕೊಳ್ಳಬೇಕು) ಎಂದು ಮುಗಿಸಿದ.

ಅಧಿಕಾರಿಗಳು ಯಾರೂ ಇರದಿದ್ದರು ಸಹ ಗೊಂದಲವಿಲ್ಲದೆ ಇಂಥ ಚರ್ಚೆಗಳಾಗುವದು ಅಭಿನಂದನೀಯವಲ್ಲವೇ?

---

## ೧೯

. . . . . . .

ಆಕ್ಸಫರ್ಡ್

೨೯—೧೦—೩೬

ಇಂದು ಮತ್ತೆ ಆಕ್ಸಫರ್ಡ್ ಯುನಿಯನ್ನದ ಸಭೆಗೆ ಹೋಗಿದ್ದೆ. ವಿಚಿತ್ರವಾಗಿ ವೇಷಮಾಡಿಕೊಂಡು ಬಂದ 'ಸೋಶಿಯಲಿಸ್ಟ'ನನ್ನು ಕುರಿತು ಒಬ್ಬ ಲಿಬರಲ್ ಮಾತುಗಾರನು ಚೇಷ್ಟೆ ಮಾಡಿದನು. ಮುಂದೆ ಸೋಶಿಯಲಿಸ್ಟ್ ಮಾತುಗಾರನು ಎದ್ದಾಗ: " When God made the conservatives and the liberals, he gave them tails; but He left the socialists to form their own **conclusions** " (ದೇವರು ಕಾಂಝರ್ವೇಟಿವ ಹಾಗೂ ಲಿಬರಲ್ಲರನ್ನು ಮಾಡಿದಾಗ ಅವರಿಗೆ ಬಾಲಗಳನ್ನು ಕೊಟ್ಟ. ಆದರೆ ಸೋಶಾಲಿಸ್ಟರಿಗೆ ತಮ್ಮ **ಕೊನೆ**ಗಳನ್ನು ತಾವೇ ಗೊತ್ತುಮಾಡಿಕೊಳ್ಳಲು ಬಿಟ್ಟ) ಎಂದು ಆ ಲಿಬರಲ್ ಮಾತುಗಾರನ ಲಾಂಜ್ ಸ್ಯೂಟಿನ ಮೇಲೆ ಟೀಕೆ ಮಾಡಿದನು!

* * * *

೩೦—೧೦—೩೬

ನನ್ನ ದಿನಚರಿಯಲ್ಲಿ—ಅಲ್ಪಾವಧಿಯಲ್ಲಿಯೇ ಇಷ್ಟು ಇಂಗ್ಲಿಷ ಶಬ್ದಗಳು ಸೇರಿಕೊಂಡದ್ದನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ಆದರೆ ಅದಕ್ಕೆ ಅನೇಕ ಕಾರಣಗಳಾಗಿವೆ: (೧) ನಾನು ವಿವರವಾಗಿ ಬಿಡಿಸುತ್ತಿರುವದು ' ಆಂಗ್ಲ ಜೀವನದ ಅನುಭವ. (೨) ಕೆಲಕೆಲವು ಮಾತು

ಗಳನ್ನು ಸಂಭವಿಸಿದ ಹಾಗೆಯೇ ಮೂಡಿಸಬೇಕೆಂಬ ಪ್ರಯತ್ನ. (೩) ಇಲ್ಲಿ ಕನ್ನಡವನ್ನು ನನ್ನೊಡನೆ ಇಲ್ಲವೆ ನನ್ನ ದಿನಚರಿಯೊಡನೆ ಮಾತ್ರ ಮಾತ ನಾಡಬೇಕು! ತಂದ ಪುಸ್ತಕಗಳನ್ನು ಓದಲು ವೇಳೆಯಿಲ್ಲ. ಇಲ್ಲಿ ಒಬ್ಬ ಕನ್ನಡಿಗರಿದ್ದಾರೆ. ಆದರೆ ಅವರು ಕನ್ನಡಿಗರಾಗಿ ಹುಟ್ಟಿದರೂ ಕನ್ನಡಿಗ ರಾಗಿ ಬೆಳೆದವರಲ್ಲ.

ನಾನು ಇಲ್ಲಿ ಏಕಾಂಗಿಯಾಗಿ ಅಲೆಯುತ್ತಿದ್ದೇನೆ. ಇನ್ನೂ ನನಗೆ ತಕ್ಕ ಜೊತೆಗಾರರು ಸಿಕ್ಕಿಲ್ಲೊಲ್ಲರು. ಅಂಥವರು ಸಿಕ್ಕದೆ ನನ್ನ ಸ್ನೇಹದ ಗಂಟನ್ನು ಬಿಚ್ಚಲಿಕ್ಕಿಲ್ಲೆಂದು ನನ್ನ ಹಟ. ನೋಡಬೇಕು, ಮುಂದೇನು ಬರಲಿಹುದೋ!

* * * *

೩೧—೧೦—೩೭

ಇಂದು ಮಾತ್ರ ಕಾಲೇಜಿನಲ್ಲಿ ನನ್ನ ಬದಿಗೆ ಊಟಕ್ಕೆ ಕುಳಿತ ಆಂಗ್ಲ ವಿದ್ಯಾರ್ಥಿಗಳು ನನ್ನೊಡನೆ ಬಾಯಿಬಿಚ್ಚಿ ಮಾತನಾಡಿದರು. ಚರ್ಚಿಲ್ಲರ ಭಾಷಣವನ್ನು ಕೇಳಿದಿಯೇನೆಂದು ಒಬ್ಬನು ವಿಚಾರಿಸಿದ. ಇಲ್ಲವೆಂದು ಹೇಳಿದೆ. ಮಾತಿಗೆ ಮಾತು ಹೊರಟು ಹಿಂದುಸ್ಥಾನದ ಮಾತು ಬಂತು. ಈಗ ಸ್ವರಾಜ್ಯವು ಪೂರ್ಣವಾಗಿ ಸಿಕ್ಕಿದೆಯೇನೆಂದು ಕೇಳಿದ. "It is over due" (ಅದು ಬಹಳ ದಿನದಿಂದ ಸಿಕ್ಕದೆ ಉಳಿದಿದೆ.) ಎಂದು ನಾನು ಹೇಳಿದೆ. "There must be more of equality. Indians are not Africans. They are not savages' (ಸಮತೆಯು ಹೆಚ್ಚಬೇಕು. ಭಾರತೀಯರು ಆಫ್ರಿಕ ಜನರಲ್ಲ, ಕಾಡುಮಂದಿಯಲ್ಲ.) ಎಂದು ಒಬ್ಬನಂದ. "There must not also be a patronising attitude. There must be more of intellectual communion." (ಉಪಕಾರ ಹೊರಿಸುವ ವೃತ್ತಿಯೂ ಇರಕೂಡದು. ಹೆಚ್ಚೆಚ್ಚು ಬೌದ್ಧಿಕ ಸಂಬಂಧವು ಇರಬೇಕು) ಎಂದು ನಾನು ಸೂಚಿಸಿದೆ. "Indians had their own civilization" (ಭಾರತೀಯರಿಗೆ ತಮ್ಮದೊಂದು ನಾಗರಿಕತೆ ಯಿತ್ತು.) ಎಂದು ಒಬ್ಬನು ನೆನಪಿಗೆ ತಂದುಕೊಂಡ. "The East had a

great past. The West has a great present ' ( ಪೌರ್ವಾತ್ಯ ದೇಶ ಗಳಿಗೆ ಹಿಂದಕ್ಕೆ ವೈಭವಶಾಲಿಯಾದ ಕಾಲವೊಂದಿತ್ತು; ಪಾಶ್ಚಿಮಾತ್ಯ ದೇಶಗಳಿಗೆ ಈಗಿದೆ. ) ಎಂದು ನಾನು ಹೇಳಿದೆ. ಇನ್ನೊಬ್ಬನು : " I wish you would make us your slaves. We would behave better then" (ನೀವು ನಮ್ಮನ್ನು ದಾಸರನ್ನಾಗಿ ಮಾಡಿಕೊಳ್ಳಬೇಕೆಂದು ನನ್ನಿಚ್ಛೆ. ಅಂದರೆ ನಾವು ಹೆಚ್ಚು ಸರಿಯಾಗಿ ನಡೆದೇವು) ಎಂದು ಉದ್ಗಾರ ತೆಗೆದ. "It is not necessary to be master and slave in order to know each other" ( ಒಬ್ಬರೊಬ್ಬರನ್ನು ತಿಳಿದುಕೊಳ್ಳಲು ಸ್ವಾಮಿ-ಸೇವಕರಾಗಬೇಕಾಗಿಲ್ಲ ) ಎಂದು ನಾನಂದೆ. ಇಷ್ಟರಲ್ಲಿ ನಮ್ಮ ಟೇಬಲ್ಲಿನ ಮೇಲೆ ಎಲ್ಲರ ಊಟ ಮುಗಿದಿತ್ತು. ನಾನು ಮುಗಿಸುವ ದಾರಿಯನ್ನು ಕಾಯುತ್ತ ಕೊಂಡು ಸುಮ್ಮನೆ ಕುಳಿತಿದ್ದರು. ಅರ್ಧಕ್ಕೇ ನಾನು ಊಟವನ್ನು ಬಿಟ್ಟಿದ್ದೆ !

ಹೊರಗೆ ಬಂದಾಗ ನನ್ನೊಡನೆ ಮಾತನಾಡಿದ ಹುಡುಗರಲ್ಲಿ ಒಬ್ಬನು ನನ್ನ ಹಿಂದಿನಿಂದ ಬರುತ್ತಿದ್ದ. ನಾನು ಹಿಂತಿರುಗಿ ನೋಡಿದಾಗ ನನ್ನೊಡನೆ ಮಾತನಾಡಿದ :

" I say, will you come to me for tea some time ? I will be vey glad if you can come" ( ಅಲ್ಲ, ನನ್ನ ಕಡೆ ಒಮ್ಮೆ ಚಹಕ್ಕೆ ಬರುವಿರಾ ? ನೀವು ಬಂದರೆ ನನಗೆ ಬಹಳ ಸಂತೋಷ )

ನಾನು— Yes, with pleasure. ( ಓಹೋ, ಸಂತೋಷದಿಂದ )

ಅತ— And you will please bring another Indian friend with you ! ( ನಿಮ್ಮ ಜೊತೆಗೆ ಇನ್ನೊಬ್ಬ ಭಾರತೀಯ ಗೆಳೆಯನನ್ನು ಕರೆತರಬೇಕು )

ನಾನು— Yes, with pleasure ! May I know your name ? ( ಆಗಲಿ, ನಿಮ್ಮ ಹೆಸರೇನು ?)

ಅತ— Greenway. I know you. ( ಗ್ರೀನವೇ. ನನಗೆ ನಿಮ್ಮದು ಗೊತ್ತಿದೆ )

ನಾನು— I see ! An Indian is conspicuous here ! ( ಸರಿ. ಭಾರತೀಯ

ನೆಂದರೆ ಇಲ್ಲಿ ಎದ್ದು ಕಾಣುವಸು) ಇನ್ನು ‘ಗ್ರೀನ್‌ವೇ’ನ ಮನೆಗೆ ಒಮ್ಮೆ ಹೋಗಬೇಕು!

*　　*　　*　　*

೧—೧೧—೩೬

ಇಂದು ರಾತ್ರಿ ಇಲ್ಲಿಯ ‘ಇಂಡಿಯನ್ ಮಜಲಿಸ್’ದಲ್ಲಿ ಸಭೆಯಿತ್ತು. ಲಾರೆನ್ಸ್ ಬಿನಿಯನ್ ಎಂಬವರು ಸುಪ್ರಸಿದ್ಧ ಆಂಗ್ಲ ಕವಿಗಳು. ಅವರು ‘ಭಾರತೀಯ ಚಿತ್ರಕಲೆ’ ಎಂಬ ವಿಷಯದ ಮೇಲೆ ಮಾತನಾಡಿದರು. ಅಜಂತಾ ಗವಿಯ ಚಿತ್ರಗಳನ್ನು ಹಿಡಿದುಕೊಂಡು ರಜಪುತ್ ಕಲೆಯವರೆಗೆ ಐತಿಹಾಸಿಕವಾಗಿ-ಸಚಿತ್ರವಾಗಿ-ಅವಲೋಕಿಸಿ, ಬಹಳ ಮಾರ್ಮಿಕವಾದ ವಿಮರ್ಶೆಯೊಂದಿಗೆ ಮಾತು ಬೆಳೆಸಿದರು. ಸ್ವತಃ ಇವರ ಕಾವ್ಯದಲ್ಲಿಯೇ ಚಿತ್ರಕಲೆಯಿದೆ.

ಆದರೆ ಇಂಥವರನ್ನು ಹೇಗೆ ಬರಮಾಡಿಕೊಳ್ಳಬೇಕೆಂಬುದು ನಮ್ಮ ಜನರಿಗೆ ಗೊತ್ತಿಲ್ಲ! ಅಧ್ಯಕ್ಷನಾದ ಭಾರತೀಯ ವಿದ್ಯಾರ್ಥಿಯು “It will be an insult to your intelligence if I introduce Mr· Binyon to you” (ಮಿ. ಬಿನಿಯನ್ ಅವರ ಪರಿಚಯವನ್ನು ನಿಮಗೆ ಮಾಡಿಕೊಡುವದೆಂದರೆ ನಿಮ್ಮ ಬುದ್ಧಿಗೆ ಅಪಮಾನವಾದೀತು) ಎಂದು ಮಾತು ಮುಗಿಸಿದ! ಕೊನೆಗೆ ಆಭಾರ ಮನ್ನಿಸಲಿಕ್ಕೆ ಎದ್ದ ತರುಣನು “It will be presumptious on my part” (ನನ್ನ ಪಾಲಿಗೆ ಧಾರ್ಷ್ಟ್ಯವಾದೀತು) ಎಂದು ಸುರುವು ಮಾಡಿ ಒಂದು ವಾಕ್ಯವನ್ನು ಮಾತಾಡಿದ. ಆಯಿತು. ಅಧ್ಯಕ್ಷರು ‘I declare the meeting’—‘over’ (ಸಭೆ ಮುಗಿಯಿತು) ಎಂದು ಹೇಳುವದಿಷ್ಟು ಉಳದಿತ್ತು. ಆಗ ಒಬ್ಬ ಸಭಿಕರು ಎದ್ದು ನಿಂತರು. “One minute please” (ಒಂದು ನಿಮಿಷ ದಯವಿಟ್ಟು ಕೊಡಿರಿ) ಎಂದು ದನಿ ತೆಗೆದರು. “Questions?” ಪ್ರಶ್ನೆ ಕೇಳುವದಿದೆಯೇನೆಂದು ಅಧ್ಯಕ್ಷರು ವಿಚಾರಿಸಿದರು. ‘No’ (ಇಲ್ಲ) ಎಂದು ಉತ್ತರ ಬಂತು. ಹತ್ತಿರ ಕುಳಿತ ಕಾರ್ಯದರ್ಶಿಗಳನ್ನು ಕಣ್ಸನ್ನೆಯಿಂದ ವಿಚಾರಿಸಿ ಮಾತನಾಡಲು ಅಪ್ಪಣೆ ಕೊಡ

ಬೇಕೊ ? ಕೊಡಬಾರದೊ ? ಎಂದು ಹೊಯ್ದಾಡಿ, ಕೊನೆಗೆ ಅಧ್ಯಕ್ಷರು ಆಗಬಹುದೆಂದು ಅಧೀರರಾಗಿ ಹೇಳಿದರು. ಆಗ ಆ ಸಭಿಕರು ಮಾತನಾಡಿದರು. ಅವರೇ ನಾನು !

"I wish to second the vote of thanks. I rise to do this due to a feeling of purely personal admiration and to the feeling that, if I did not express myself here I would have to spend a sleepless night. I remember a few lines from the poetry of a distinguished poet, Mr. Laurence Binyon:

> "Overbrim and overflow
> Thine own heart if thou wouldst know,
> For the spirit, born to bless,
> Lives but in its own excess."

Mr. Binyon has overbrimmed and overflown to-night. He has known, not only his own heart but the heart of India"

(ಉಪನ್ಯಾಸಕರ ಬಗ್ಗೆ ಉಪಕಾರಸ್ಮರಣೆಯನ್ನು ನಾನು ಅನುಮೋದಿಸಬೇಕೆನ್ನುವೆ. ನಾನು ಈಗ ಎದ್ದಿರುವ ಕಾರಣವೆಂದರೆ ಕೇವಲ ಒಂದು ವ್ಯಕ್ತಿವಿಷಯಕ ನನ್ನ ಗೌರವದಿಂದ; ಮತ್ತು ನಾನಿಲ್ಲಿ ನನ್ನ ಮನಸ್ಸನ್ನು ಬಿಚ್ಚದೆ ಹೋದರೆ ನಿದ್ದೆಯಿಲ್ಲದೆ ರಾತ್ರಿಯನ್ನು ಕಳೆಯಬೇಕಾದೀತೆಂಬ ಭಾವನೆಯಿಂದ ಮಿ. ಲಾರೆನ್ಸ ಬಿನಿಯನ್‌ರೆಂಬ ಪ್ರಖ್ಯಾತ ಕವಿಗಳ ಕೆಲವು ಸಾಲುಗಳು ನನ್ನ ಲಕ್ಷ್ಯದಲ್ಲಿವೆ:

> ಅರಿವು ಬೇಕೇ ನಿನಗೆ ? ಕೇಳಿದನು
> ನಿನ್ನೆದೆಯನೇ ತುಂಬಿ ಹೊರಸೂಸು.
> ಲೇಸಬಯಸಲು ಬಂದ ಆತುಮವು
> ತನ್ನ ಹೆಗ್ಗಳದಿ ತಾ ಬಾಳುವುದು.

ಮಿ. ಬಿನಿಯನ್‌ರು ಈ ರಾತ್ರಿ ತುಂಬಿ ಹೊರಸೂಸಿದ್ದಾರೆ. ಅವರು ತಮ್ಮ ಹೃದಯವನ್ನು ಮಾತ್ರವಲ್ಲ, ಭಾರತದ ಹೃದಯವನ್ನೂ

ಅರಿತಿದ್ದಾರೆ.) ಮುಂತಾಗಿ ಹೇಳಿ ಕೂತೆ. ನಾನು ಎದ್ದು ನಿಂತಿದ್ದೇ ನನಗೆ ಗೊತ್ತಿಲ್ಲ !

ಮುಗಿದು ಹೋಗಿರಬಹುದಾದ ಸಭೆಯಲ್ಲಿ ಬಿನಿಯನ್ ಅವರು ಮತ್ತೆ ಎದ್ದು ನಿಂತು ಹೇಳಿದರು : "I thank the two speakers and I assure them......" (ನಾನು ಇಬ್ಬರೂ ಮಾತುಗಾರರಿಗೆ ಕೃತಜ್ಞ ನಾಗಿರುವೆ. ಅವರಿಗೆ ನನ್ನ ಆಶ್ವಾಸನವೆಂದರೆ...) ಮುಂತಾಗಿ. ಸಭೆಯ ದೃಷ್ಟಿಯೆಲ್ಲ ನನ್ನ ಕಡೆಗೆ ತಿರುಗಿತ್ತು.

ನಾನು ಮಾತನಾಡಿದ್ದು ನನ್ನ ಗೆಳೆಯರಿಗೆ ಸೇರಿತು. ಸ್ವತಃ ಬಿನಿಯನ್ನರಿಗೆ ಸೇರಿತು. ಅನೇಕರಿಗೆ ಸೇರಿತು. ಉಳಿದವರಿಗೆ ವಿಚಿತ್ರವೆನಿ ಸಿರಬೇಕು ! ಅಂತೂ ನಾನು ಮೊದಲನೆಯ ಸಲ ಆಕ್ಸಫರ್ಡದಲ್ಲಿ ಮಾತ ನಾಡಿದ್ದು ಈ ರೀತಿಯಾಗಿ !

*  *  *  *

೪—೧೧—೩೭

ನಿನ್ನೆ ರಾತ್ರಿ ಇಂಗ್ಲಿಷ್ ಸಂಘದಲ್ಲಿ ಸಭೆಯಿತ್ತು. ಗ್ರಿಗ್‌ಸನ್ ಎಂಬ ಸಾಹಿತಿಯು ಮಾತನಾಡಿದನು. 'Some Hearty Dislikes' (ಕೆಲವು ಹೃದ್ಯ ಉಪೇಕ್ಷೆಗಳು) ಎಂಬುದೇ ಆತನ ವಿಷಯ. ಟಿ. ಎಸ್. ಇಲಿಯಟ್‌ನ ಶಿಷ್ಯನೆನ್ನುವದಕ್ಕಿಂತ, 'ಪಾರ್ಟಿ'ಯವನು ಅವನೆಂದು ತೋರುತ್ತದೆ. ಮಾತಿನಲ್ಲಿ ತೂಕವಿರಲಿಲ್ಲ. ವೈಯ್ಯಕ್ತಿಕ ಟೀಕೆಗೆ ಆಸ್ಪದ ವಿದ್ದಿತು. ವಿಚಾರಕ್ಕಿಂತ ಬರಿ ಎನಿಸಿಕೆಗೆ ಪ್ರಾಶಸ್ತ್ಯವಿದ್ದಿತು. ಅವನ ಭಾಷಣವನ್ನು ಕೇಳಿ, ಕರ್ನಾಟಕದಲ್ಲಿಯ ವಿಮರ್ಶೆಯು ಎಷ್ಟೋ ಪಾಲಿಗೆ ಬೇಕೆನಿಸಿತು !

೨೦

. . . . . .

ಆಕ್ಸಫರ್ಡ

೬—೧೧—೩೬

ನಿನ್ನೆ ಇಲ್ಲಿಯ 'Guy Fox Day' (ಗಾಯ ಫಾಕ್ಸ ದಿನ) ಎಂಬ ಹೋಳಿ ಹುಣ್ಣಿಮೆಯನ್ನು ಇಲ್ಲಿ ಬಹು ಸಂಭ್ರಮದಿಂದ ಜರುಗಿಸಿದರು! ಕಾಮಣ್ಣನನ್ನು ಸುಡುವಂತೆ ಗಾಯ ಫಾಕ್ಸನ ಪ್ರತಿಮೆಯನ್ನು ಮಾಡಿ ಸುಡುತ್ತಾರೆ. ಇವರ 'ಗನ್ ಪಾವಡರ್ ಪ್ಲಾಟು' ಬೇರೆ ತರಹದ್ದು. ಬಿರಸು ಬಾಣ ಹಾರಿಸುತ್ತಾರೆ! ಯೂನಿಯನ್ನದ ಸಭೆಯಲ್ಲಿ ಅನೇಕ ಸ್ಫೋಟಗಳಾದವು!

ಇದೇ ಹೊತ್ತಿನಲ್ಲಿ ನೆನಪಾಗುತ್ತದೆ,— ನಿನ್ನೆ ಅನೇಕ ವಿನೋದ ಸ್ಫೋಟಗಳೂ ಯೂನಿಯನ್ನದಲ್ಲಿ ಆದವು! "That England should be given Home-rule" (ಇಂಗ್ಲಂಡಕ್ಕೆ ಸ್ವರಾಜ್ಯ ಕೊಡತಕ್ಕದ್ದು) ಎಂಬುದೇ ವಿಷಯವಾಗಿತ್ತು. ಇದರಿಂದ ಚೇಷ್ಟೆಗೆ ಹೆಚ್ಚು ಆಸ್ಪದವು ದೊರೆತಿತ್ತು. ಉಳಿದ ದೇಶಗಳ ಆಡಳಿತದಲ್ಲಿ ಲಕ್ಷ್ಯ ಹಾಕಿ ತಮ್ಮನ್ನು ತಾವೇ ಆಳಲು ವೇಳೆಯಿಲ್ಲವಾದ ಕಾರಣ ಹಿಂದುಸ್ತಾನ-ಐರ್ಲಂಡ್ ಮೊದಲಾದ ದೇಶಗಳಿಗೆ ಪೂರ್ಣ ಸ್ವರಾಜ್ಯವನ್ನು ಕೊಟ್ಟುಬಿಡಬೇಕೆಂದು ಪ್ರತಿಪಾದಕನು ಹೇಳಿದನು. ಇಲ್ಲಿಯವರೆಗೆ ಇಂಗ್ಲಂಡದ ದೊಡ್ಡ ಜನರೆಲ್ಲ ಸ್ಕಾಟ್‌ಲಂಡ್, ಆಯರ್ಲಂಡ್, ಇಲ್ಲವೆ ವೇಲ್ಸ್ ದೇಶದವರಿದ್ದಾರೆ, ಇಂಗ್ಲಿಷರು ತಮ್ಮನ್ನು ತಾವು ಆಳಿಕೊಳ್ಳಲಾರರು! ಕಾರಣ ಅವರಿಗೆ ಸ್ವರಾಜ್ಯವನ್ನು ಕೊಡಬಾರದೆಂದು ವಿರೋಧಕನು ಸಾರಿದನು. ಕಾನನ್ ಎಂಬ ಕಾದಂಬರಿಕಾರನನ್ನು ಕರೆದಿದ್ದರು. ಇಂಗ್ಲಂಡಿಗೆ ಸ್ವರಾಜ್ಯವನ್ನು

ಕೊಟ್ಟರೆ ಏನಾಗಬಹುದೆಂಬುದರ ಬಗ್ಗೆ ಒಂದು ದೊಡ್ಡ ವಿನೋದಪರ ಭಾಷಣವನ್ನು ಬರೆದುಕೊಂಡು ಬಂದಿದ್ದು, ಅವನು ಅದನ್ನು ಓದಿದನು. ಅನೇಕ ವಿನೋದಗಳು ಯೂನಿಯನ್ನದ ಆಕಾಶದಲ್ಲಿ ಹಾರಿ 'ಫಟ್' ಎಂದು ಒಡೆದು ಚಿತ್ರವಿಚಿತ್ರವಾದ ಬೆಳಕನ್ನು ಚೆಲ್ಲುತ್ತಿದ್ದವು!

ಹಂಬರ್ಟ ವೂಲ್ಫ ಎಂಬ ಕವಿಯನ್ನೂ ಆಮಂತ್ರಿಸಿದ್ದರು. ಅವನು 'ಮವಾಳ' ನಾಗಿ ಕಾಣುತ್ತಾನೆ. ಪ್ರತಿಪಾದಕನ ಕಡೆಯಿಂದ ಮಾತನಾಡಿದರೂ ಅವನ ಭಾಷಣವನ್ನು ಟೀಕಿಸಿದನು: "I strongly disapprove of his speech but you will have to vote for it" (ನಾನು ಅವನ ಭಾಷಣವನ್ನು ತೀವ್ರವಾಗಿ ನಿಷೇಧಿಸುತ್ತೇನೆ. ಆದರೂ ನೀವು ಅದಕ್ಕೆ ಮತ ಕೊಡಬೇಕು) ಎಂದು ಹೇಳಿದನು. Henry VIII the notorious home-ruler (ಎಂಟನೆಯ ಹೆನ್ರಿ ಎಂದರೆ ಕು-ಪ್ರಸಿದ್ಧ ಸ್ವರಾಜ್ಯಕರ್ತ) ಎಂಬ ಸಂಬಂಧವನ್ನು ತಂದನು. ಮೊನ್ನೆ ಮೊನ್ನೆ ಲಾರ್ಡ **ನಫೀಲ್ಡ** ಎಂಬವರು ಇಲ್ಲಿಯ ವೈದ್ಯ ವಿದ್ಯಾಲಯಕ್ಕೆ ದೊಡ್ಡ ದಾನ ಮಾಡಿದ್ದಾರೆ. "New fields and pastures" (ಹೊಸ ಹೊಲಗಳೂ ಹುಲ್ಲುಗದ್ದೆಗಳೂ) ಎಂದು ಅದರ ವಿಷಯವನ್ನು ತಂದನು. ಹೀಗೆ ಮಾತನಾಡುತ್ತ: "Apart from jesting, for a moment" (ಚೇಷ್ಟೆಯನ್ನು ಕ್ಷಣಹೊತ್ತು ಬಿಟ್ಟರೆ) ಎಂದು ಹೇಳಿ; ಇನ್ನೂ ಸ್ವಾತಂತ್ರ್ಯವೆಂದರೆ ಇಂಗ್ಲಂಡದಲ್ಲಿ ಮಾತ್ರ ಇದೆ ಮುಂತಾಗಿ ಸಭಿಕರ ಭಾವನೆಗಳನ್ನು ಪ್ರಚೋದಿಸಿದನು.

ಇವನು Oscar Wilde (ಆಸ್ಕರ ವಾಯಿಲ್ಡ) ಮುಂತಾದವರ ಪರಂಪರೆಯವನೆಂದು ಕಾಣುತ್ತದೆ. ಅವರಷ್ಟೇ ಬುದ್ಧಿವಂತ, ವಿನೋದ ಪ್ರಿಯ, ಆದರೆ ಅಷ್ಟೇ ಕುಹಕನಿರಬಹುದೇನು? ಕುಡುಕನ ಕಳೆಯು ಅವನ ಮೋರೆಯ ಮೇಲೆ ಉಕ್ಕುತ್ತಿತ್ತು. ಕಿಸೆಯಲ್ಲಿ ಭಾಷಣವನ್ನಿಟ್ಟು ಕೊಂಡು ನೆನಪಾಗುವದಿಲ್ಲವೆಂದರೆ? ಸಾರ್ವಜನಿಕ ಸಭೆಯಲ್ಲಿ ಉಗ್ಗಿದರೆ? ಎಂದು ಉಗ್ಗುತ್ತ ಮಾತನಾಡಿದವನನ್ನು ಹೀಯಾಳಿಸಿದನು. 'Home Civil Service' (ಹೋಮ ಸಿವ್ಹಿಲ್ ಸರ್ವಿಸ್)ದಲ್ಲಿ ಇದ್ದಾನೆ. ಸಿಗ

ಬೇಕಾದ ಒಡತಿಯು ಸಿಕ್ಕಿಲ್ಲವೆಂದು ಗೊಣಗುಟ್ಟಿದನು. "One never hears of the civil servants except when they are dismissed-and for fulfilling their duties!" (ಬರತರ್ಫ ಆದಾಗ ಅಲ್ಲದೆ ಸಿವ್ಹಿಲ್ ನೌಕರರ ವಿಚಾರ ಯಾರೂ ಕೇಳುವದಿಲ್ಲ. ಆ ಬರತರ್ಫ, ಕರ್ತವ್ಯ ಮಾಡಿದ್ದಕ್ಕಾಗಿ ಮತ್ತೆ!)

ನಮ್ಮ ಪ್ರಿನ್ಸಿಪಾಲರ ಹೆಂಡತಿಯು ಚಹಕ್ಕೆ ಕರೆದಿದ್ದರು. ನಾಲ್ಕೈದು ಆಂಗ್ಲ ವಿದ್ಯಾರ್ಥಿಗಳೊಡನೆ ನಾನೂ ಹೋಗಿದ್ದೆ. ಕಾಲೇಜ ದಲ್ಲಿಯೇ ಇದ್ದಾರೆ. ದೊಡ್ಡ ಹಳೆಯ ಡ್ರಾಯಿಂಗ್ ರೂಮಿಂದೆ! ಮೇಣ ಬತ್ತಿಯಾಕಾರದ ಇಲೆಕ್ಟ್ರಿಕ್ ದೀಪಗಳು ಉರಿಯುತ್ತಿದ್ದವು. ಇವ ಳೊಬ್ಬ ವಿಚಿತ್ರ ಹೆಣ್ಣುಮಗಳು. ಎಲ್ಲರೂ ಕುಳಿತ ಕೂಡಲೆ ಕೇಂಬ್ರಿಜ್-ಅಕ್ಸಫರ್ಡ ಸ್ಪರ್ಧೆಯ ವಿಷಯವನ್ನು ಸುರುವು ಮಾಡಿದಳು: "ನೀವೇಕೆ ಮೊದಲಿಗರಾಗಬಾರದು?" ಎಂದು ಆ ಹುಡುಗರನ್ನು ಕೇಳಿದಳು. ಪಾಪ! ಆ ಹುಡುಗರೇನು ಹೇಳಬೇಕು? "My husband is quite keen about sports" (ಆಟಗಳ ಬಗ್ಗೆ ನನ್ನ ಗಂಡನು ಬಹಳ ಉತ್ಸುಕ ನಾಗಿರುವನು) ಎಂದು ಹೇಳಿ, 'ಮನುಷ್ಯನು ಕೇವಲ ಆಟಗುಳಿಯಾಗ ಬಾರದು ಇಲ್ಲವೆ ಬರಿ ಪುಸ್ತಕಪಾಂಡಿತ್ಯವಿರಬಾರದು' ಎಂದು ಮಾತಾ ಯಿತು. "ಅನೇಕ ಪ್ರೊಫೆಸರರು ಲಗ್ನವಾಗುವದಿಲ್ಲ, ಲಗ್ನವಾದರೆ ಅವರ ವ್ಯವಹಾರಬುದ್ಧಿಯೂ ಬೆಳೆಯಬೇಕಾಗುತ್ತದೆ!" ಎಂದು ವಿವರಿಸಿದಳು.

'ಲೀಗ್ ಆಫ ನೇಶನ್ಸಿ'ನ ಬಗ್ಗೆ ಮಾತಾಯಿತು. ಕಾಲೇಜು ವಿದ್ಯಾರ್ಥಿಗಳ ಟೀಕೆಯಾಯಿತು. "ಯುದ್ಧ ಮಾಡುವದಿಲ್ಲವೆಂದು ಈಗಿನ ಹುಡುಗರು ಹೇಳುತ್ತಾರೆ. "Behind pacifism there is the feeling of fear" (ಶಾಂತಿಯ ಚಳವಳಿಯ ಬೆನ್ನ ಹಿಂದೆ ಭಯದ ಭಾವನೆಯಿದೆ) ಎಂದು ಹೇಳಿದಳು.

"ಹೌದು. ನನ್ನ ಗೆಳೆಯನಾದ ಒಬ್ಬ ಶಾಂತಿವಾದಿಯು ಇದನ್ನು ಒಪ್ಪಿಕೊಂಡ" ಎಂದು ಒಬ್ಬ ಹುಡುಗನೆಂದ.

ಒಮ್ಮೆ ತನ್ನನ್ನು ಬಿಟ್ಟು ದೂರ ಕಲಿಯಲು ಹೋದ ಮಗನನ್ನು ನೆನೆಸಿದಳು. ಇನ್ನೊಮ್ಮೆ ಲಾರ್ಡ್ ನಫೀಲ್ಡನ ಕಾಣಿಕೆಯ ವಿಷಯವನ್ನು ತೆಗೆದು,– 'ಯಾವ ರೀತಿಯಲ್ಲಿ ದುಡ್ಡು ಕೊಡುತ್ತಾನೊ? ಕೊಡುವಷ್ಟರಲ್ಲಿ ಸತ್ತರೆ?' ಎಂದು ಪ್ರಶ್ನಿಸಿದಳು. "It is the wheel turning round. We are in the decadent days again" (ಗಾಲಿ ತಿರುಗುತ್ತಿದೆ. ನಾವು ಮತ್ತೆ ಅವನತಿಯ ಕಾಲದಲ್ಲಿದ್ದೇವೆ) ಎಂದು ಉದ್ಗಾರ ತೆಗೆದಳು. ಇನ್ನೊಮ್ಮೆ:— "ಈಗಿನ ಕಾಲದಲ್ಲಿ ಎಷ್ಟು ಸುಖವಿದ್ದರೇನು? ಶೂನ್ಯ–ಎಲ್ಲವೂ ಶೂನ್ಯ" ಎಂದು ಪ್ರಾರಂಭಿಸಿದಳು! 'ಡೇವಿಡ್ ಕಾಪರಫೀಲ್ಡ್'ದಲ್ಲಿಯ ಆಂಟ್ ಬೆಟ್ಸಿಯ ನೆನಪಾಯಿತು ನನಗೆ, ಇವರ ಆಕೃತಿಯನ್ನು ನೋಡಿ!

* * * *

ಹಾರ್ಫರ್ಡ್ ಕಾಲೇಜಿನಲ್ಲಿ ಇತಿಹಾಸದ ಪ್ರೊಫೆಸರರಾದ ಬೋಸ್ ಎಂಬವರು ನನ್ನನ್ನು ಚಹಕ್ಕೆ ಕರೆದಿದ್ದರು. ಪುಣೆಯ ಕ್ರಿಸ್ತ ಸೇವಾ ಸಂಘದ 'Fox' (ಫಾಕ್ಸ) ಎಂಬವರ ಮುಖಾಂತರವಾಗಿ ನನಗೆ ಇವರ ಪರಿಚಯವಾಯಿತು. ಇವರ ವಯಸ್ಸು ಸುಮಾರು ೩೫–೪೦ ಆಗಿರಬಹುದು. ಇಲ್ಲಿಯ ಅನೇಕ ಅಧ್ಯಾಪಕರಂತೆ ಇವರಿನ್ನೂ ಲಗ್ನವಾಗಿಲ್ಲ! ಬಹಳ ಮೃದು ಸ್ವಭಾವ. "India must be a wonderful country" (ಹಿಂದುಸ್ಥಾನವು ಅದ್ಭುತದೇಶವಾಗಿರಬೇಕು.) ಎಂದರು. "It is fast becoming one" (ಹಾಗೆ ಬೇಗ ಆಗುತ್ತಿದೆ) ಎಂದು ನಾನು ಹೇಳಿದೆ.

‡ ‡ ‡ ‡

೮–೧೧–೩೬

ಸ್ಟೀಲ್ ಎಂಬವನು ಜೀಸಸ್ ಕಾಲೇಜಿನ ವಿದ್ಯಾರ್ಥಿ. ನನ್ನನ್ನು ಚಹಕ್ಕೆ ಕರೆದಿದ್ದ. ನನ್ನ ಪರಿಚಯವಿರಲಿಲ್ಲ ಆತನಿಗೆ. ಆದರೆ ಈತನು ಹೊಸಬ, ಈತನಿಗೆ ನೆರವಾಗಬೇಕು, ನನಗೆ ಸಮೀಪವಾಗಿರಬೇಕು ಎಂಬ ಬುದ್ಧಿಯಿಂದ. ಆತನು ಭೂಗೋಲ ಶಾಸ್ತ್ರವನ್ನು ಅಭ್ಯಸಿಸುತ್ತಿದ್ದಾನೆ.

ಒಂದು Educational diploma (ಶಿಕ್ಷಣದ ಪದವಿ) ತೊಗೊಳ್ಳುವ ವಿಚಾರದಲ್ಲಿಯೂ ಅವನಿದ್ದಾನೆ. ಹಾಗೆ ಮಾಡಿದರೆ ಇಲ್ಲಿಯ ಶಾಲೆಗಳಲ್ಲಿ ಶಿಕ್ಷಕನಾಗಿ ಆರಿಸಲ್ಪಡುವ ಸಂಭವವು ಹೆಚ್ಚಿದೆಯಂತೆ. ನಮ್ಮಲ್ಲಿಯಂತೆ ನಿರುದ್ಯೋಗದ ಪ್ರಶ್ನೆಯು ಇಲ್ಲಿಯೂ ತಲೆಯೆತ್ತುತ್ತಿದೆ.

‡ ‡ ‡ ‡

ಶರ್ವುಡ್ಡನೊಡನೆ ಇಲ್ಲಿಯ The Daily Worker (ಡೇಲೀ ವರ್ಕರ) ಎಂಬ ದೈನಿಕದ ಆಫೀಸಿಗೆ ಹೋಗಿದ್ದೆ. ಹೊಸ ವಿಚಾರಗಳನ್ನು ಹಬ್ಬಿಸಲು ಪ್ರಯತ್ನಿಸುವವರಿಗೆ ಬಡತನವು ಇಂಥ ದುಡ್ಡುಳ್ಳ ದೇಶದಲ್ಲಿ ಸಹ ಹೇಗೆ ಬೆನ್ನು ಹತ್ತುವದೆಂಬದನ್ನು ಈ ಕಚೇರಿಯ ಸ್ಥಿತಿ-ಗತಿಯಿಂದ ನಾವು ಊಹಿಸಬಹುದು; ಒಂದು ಮುರುಕ fireplace (ಅಗ್ನಿಷ್ಟಿಗೆ) ಬರಿದಾದ ನೆಲ, ಮುರುಕು ಕುರ್ಚಿ-ಟೇಬಲ್ಲು,— ಗೊತ್ತೇ ಇದೆಯಲ್ಲ!

‡ ‡ ‡ ‡

ಇಂದು ಹಿಂದೆ ಬರೆದ ಮೌನ್ ಎಂಬ ಬರ್ಮಿ ಕವಿ-ಸ್ನೇಹಿತನ ಕಡೆಗೆ ಚಹಕ್ಕಾಗಿ ಹೋಗಿದ್ದೆ. ತನ್ನ ದೇಶದ ಲುಂಗಿ ಹಾಗು ಬಗಲಕಸಿಯಂಗಿಯಲ್ಲಿ ಇದ್ದನಾತ. 'ಚಿ' ಹಾಗು ಅವನ ಗೆಳೆಯರು- ಫಾರೆಸ್ಟ ಖಾತೆಯ ಪ್ರೊಬೇಶನರರಾಗಿದ್ದವರು-ಇದ್ದರು. ಅಲ್ಲದೆ ಬರ್ಮಾ ಫಾರೆಸ್ಟ ಖಾತೆಯ ಪ್ರೊಬೇಶನರನಾಗಿ ಆರಿಸಿ ಬಂದ ಒಬ್ಬ ಸ್ಕಾಟಿಶ್ ಹುಡುಗನೂ ಇದ್ದ. ಬರ್ನ್ಸ ಕವಿಯ ಹಳ್ಳಿಯಿಂದ ಒಂದು ಮೈಲಿನ ಮೇಲೆ 'Dumfries' (ಡಮ್‌ಫ್ರೀಜ) ಎಂದು ಆ ಹುಡುಗನ ಊರಿದೆಯಂತೆ. ನನ್ನೊಡನೆ ಒಂದಿಷ್ಟು ಬಿಸಿಬಿಸಿ ಮಾತಾಯಿತು. "Can you govern yourselves" (ನೀವು ನಿಮ್ಮಷ್ಟಕ್ಕೆ ಆಳಬಹುದೇ?) ಎಂದು ಪ್ರಶ್ನೆ ಮಾಡಿದ. ಅದಕ್ಕೆ ಏನು ಉತ್ತರ ಕೊಡಬೇಕು!

---

. . . . . .

ಆಕ್ಸಫರ್ಡ್

೯—೧೧—೩೭

ಇಂದು ಮಧ್ಯಾಹ್ನ ಯುನಿವ್ಹರ್ಸಿಟಿ ಲೇಬರ್ ಕ್ಲಬ್ಬಿನ 'ರೋನಾಲ್ಡ್ ಕಿಡ್ ಲಂಚಿ' ಗೆ ಹೋಗಿದ್ದೆ. ರೋನಾಲ್ಡ್ ಕಿಡ್ ಎಂಬಾತ ಲೇಬರ್ ಪಾರ್ಟಿಯ ಮುಂದಾಳುಗಳಲ್ಲಿ ಒಬ್ಬನೆಂಬಂತೆ ಕಾಣುತ್ತಾನೆ. 'National Council of Civil Liberties" (ನಾಗರಿಕ ಸ್ವಾತಂತ್ರ್ಯದ ರಾಷ್ಟ್ರೀಯ ಸಮಿತಿ) ಎಂಬ ಸಂಸ್ಥೆಯನ್ನು ಕಟ್ಟಿದ್ದಾನೆ. ಸರಕಾರದ ನೌಕರರಿಂದ ಪಕ್ಷಪಾತವಾಗದಂತೆ ಜನರ ನಿಜ ಸ್ವಾತಂತ್ರ್ಯಕ್ಕೆ ಧಕ್ಕೆ ಬರದಂತೆ ನೋಡಿಕೊಳ್ಳುವ ಸಂಸ್ಥೆಯಿದು. ಈ ಸಾಯುಮನ್ನನ ಆಡಳಿತ ದಲ್ಲಿ 'ಫ್ಯಾಸಿಸ್ಟ' ಜನರ ಮೇಲಿನ ನಿರ್ಬಂಧವು ಕಡಿಮೆಯಾಗಿದೆಯಂತೆ! ಅದಕ್ಕಾಗಿ ಕಿಡ್ಡನು ಬಲು ಒದರಾಡಿದ. ಎಲ್ಲರ ಊಟವಾದ ಮೇಲೆ ಅವನ ಭಾಷಣವು ಸುರುವಾಯಿತು. ಫುಲರ್ ಹೋಟೆಲಿನಲ್ಲಿ ಎಲ್ಲ ವ್ಯವಸ್ಥೆಯಾಗಿತ್ತು. ನ್ಯಾಯಾಧೀಶ-ಪೋಲೀಸ ಮುಂತಾದ ನೌಕರರು ಸಮತಾವಾದಿ ಹಾಗು ಶಾಂತವಾದಿಗಳಿಗೆ ಕೊಡುವ ತ್ರಾಸವನ್ನು ವರ್ಣಿಸಿದ. ನೂರಾರು ಜನ ವಿದ್ಯಾರ್ಥಿಗಳು ಬಂದಿದ್ದರು.

* * * *

೧೧—೧೧—೩೭

ನಿನ್ನೆ ರಾತ್ರಿ 'ಮೇರಿ ಹಚಿನ್‌ಸನ್' ಎಂಬ ವಿದುಷಿಯ ಉಪನ್ಯಾಸ ವನ್ನು ಕೇಳಲು ಹೋಗಿದ್ದೆ. 'Literature and Loyalties' (ಸಾಹಿತ್ಯ ಹಾಗೂ ನಿಷ್ಠೆ) ಎಂಬುದೇ ಆಕೆಯ ವಿಷಯವಾಗಿತ್ತು. 'ಲಂಡನ್ ಮರ್ಕ್ಯುರಿ' ಎಂಬ ಮಾಸಿಕದಲ್ಲಿ ಈಕೆ ಬರೆದ ವಿಮರ್ಶೆಗಳು

ಬರುತ್ತಿರುತ್ತವೆ. ಆಕ್ಸ್‌ಫರ್ಡ್ ಟೌವುನ್ ಹಾಲಿನಲ್ಲಿ ಸಭೆ ಸೇರಿದಿತ್ತು, ತುಂಬಿತ್ತು. ಕಣ್ಣು ಹುಚ್ಚಿಗಾಗಿ ಅರ್ಧ ಜನರು ಬಂದಿದ್ದಂತೆ ಕಾಣುತ್ತದೆ. ನೋಡಲು ಮಿಸ್ ಹಚಿನ್‌ಸನ್ನಳು ಚೆಲುವೆ; ಕೈಸನ್ನೆ ಮೈಸನ್ನೆ ಬೇರೆ ಮಾತನಾಡುವಾಗ. ಮಧುರವಾದ ಸ್ವರ, 'And' (ಯ್ಯಾಂಡ) ಎಂಬ ಶಬ್ದವನ್ನು ತಂತಿಯಂತೆ ಮೀಟುತ್ತಿದ್ದಳು. ಆಕೆ ಏನು ಮಾತನಾಡಿದ ಳೆಂಬುದು ಮಾತ್ರ ಗೊತ್ತಾಗಲಿಲ್ಲ. ನನಗೆ ತೂಕಡಿಕೆ ಬಂದಿತ್ತು!

* * * *

ಭಾಷಾಶಾಸ್ತ್ರದ ಮೇಲೆ ಪ್ರೊ. ವಾಯಿಲ್ಡ್ (Wild) ಎಂಬವರು ಕೊಡುತ್ತಿರುವ ಉಪನ್ಯಾಸಗಳನ್ನು ಕೇಳಲು ಹೋಗುತ್ತಿದ್ದೇನೆ. ಈಗ ಸದ್ಯಕ್ಕೆ ಉಚ್ಚಾರದ (Phonetics) ವಿಷಯ ನಡೆದಿದೆ. ಇವರಿಗೆ ಪ್ರೊ. ರೆನ್ನರಂತೆ ಸಂಸ್ಕೃತವೂ ಬರುತ್ತಿದೆ. ನಡುನಡುವೆ ಸಂಸ್ಕೃತವನ್ನು ತರುತ್ತಾರೆ. ಈ ಶಾಸ್ತ್ರದಲ್ಲಿಯು ಭೌತಿಕವಾದಿಗಳಿವರು. ಎಲ್ಲವೂ ಉಚ್ಚಾರೇಂದ್ರಿಯಗಳನ್ನು ಅವಲಂಬಿಸಿದೆಯೆಂದು ಇವರ ಸಿದ್ಧಾಂತವಿದೆ. ಇವರು ಕಲಿಸುವ ರೀತಿಯು ಸುಂದರವಾದುದು. ಉಚ್ಚಾರದ ನೂರೆಂಟು ಒಳಭೇದಗಳನ್ನು ಕಲಿತುಕೊಂಡಿದ್ದಾರೆ. ಕೆಲವು ರಸಿಯನ್ ಸ್ವರಗಳನ್ನು ಕಲಿಯಲು ಒಬ್ಬ ಶಿಕ್ಷಕನನ್ನು ಇಟ್ಟುಕೊಂಡಿದ್ದರಂತೆ. ನಾವೂ ಚೆನ್ನಾಗಿ ಉಚ್ಚರಿಸಲು ಕಲಿಯಬೇಕೆಂದು ಅವರ ಲವಲವಿಕೆ; "don't mind hissing; go on!" (ಹಿಸ್ ಮಾಡಿದರೂ ತಪ್ಪಿಲ್ಲ, ಸಾಗಿರಿ) ಎಂದು ಹೇಳುತ್ತಾರೆ. 'ಸ್–ಸ್–ಸ್' 'ಇಜ್–ಇಜ್–ಇಜ್'– ಎಂದು ಕ್ಲಾಸಿಗೆ ಕ್ಲಾಸೇ ಒದರುತ್ತದೆ! ನಾವು ಒದರಿದಷ್ಟು ಇವರಿಗೆ ಸಂತೋಷ!

* * * *

೧೨—೧೧—೩೬

ಇಂದು ಯೂನಿಯನ್ ಸಭೆಗೆ ಹೋಗಿದ್ದೆ. "In the opinion of this house, The Times does not deserve its position as the leading English paper" (ಈ ಸಭೆಯ ಅಭಿಪ್ರಾಯದಲ್ಲಿ ಇಂಗ್ಲಿಶ್ ಪ

ಶ್ರೇಷ್ಠ ಪತ್ರಿಕೆಯೆಂಬ ಮಾನಕ್ಕೆ ಟಾಯಿಮ್ಸ್ ಪತ್ರಿಕೆಯು ಅರ್ಹ ವಾಗಿಲ್ಲ) ಎಂಬ ವಿಷಯವಿತ್ತು. ಆದರೆ ಮಾತುಗಾರರು ಅಷ್ಟು ನಿಪುಣರಿರಲಿಲ್ಲ.

ನಿನ್ನೆ 'ಆರ್ಮಿಸ್ಟಿಸ್' ದಿನ. ಶಾಂತಿ ಸಂಘದ ವಿದ್ಯಾರ್ಥಿಗಳು ಹೋಗಿ ಮಹಾಯುದ್ಧ-ಸ್ಮಾರಕ-ಸ್ತಂಭಕ್ಕೆ ಮಾಲೆಹಾಕಬೇಕೆಂದು ಮಾಡಿದ್ದರು, ಆದರೆ ಪ್ರೊಕ್ಟರರು—ಸಮ್ಮತಿಯು ರೆಕ್ಟರರಿದ್ದ ಹಾಗೆ! ಅವರನ್ನು ಹೋಗಗೊಡಲಿಲ್ಲ. ಒಬ್ಬ ಪ್ರತಿನಿಧಿಯು ಹೋಗಿ ಮಾತ್ರ ಮಾಲೆ ಹಾಕಬಹುದೆಂದು ಹೇಳಿದರು. ಅದನ್ನು ವಿರೋಧಿಸಲೆಂದು ಇಂದು ಯೂನಿಯನ್‌ದಲ್ಲಿ ನಿಷೇಧ ಸೂಚಕ ಠರಾವು ಪಾಸಾಯಿತು. ಎಲ್ಲರೂ (ಒಬ್ಬರನ್ನು ಬಿಟ್ಟು) ಎದ್ದು ನಿಂತು ಅನುಮೋದಿಸಿದರು. ಸ್ವಾತಂತ್ರ್ಯವನ್ನು ಇಂಗ್ಲಂಡಿನಲ್ಲಿ ಈ ರೀತಿಯಾಗಿ ಕಡಿಮೆ ಮಾಡಬಾರ ದೆಂದು ಎಲ್ಲರ ಅಭಿಪ್ರಾಯವಾಗಿತ್ತು.

ಇಲ್ಲಿಯೂ ಸಭೆಯಲ್ಲಿ ಕೆಲವು ಮಂಗನಂಥ ಹುಡುಗರಿರುತ್ತಾರೆ. ಒಬ್ಬನು ಯಾವಾಗಲೂ "on a point of law, sir" (ಒಂದು ಕಾಯದೆಯ ಮಾತಿಗಾಗಿ) ಎಂದು ಸುರುವು ಮಾಡುತ್ತಾನೆ. ಕಡೆಗೆ ಅಧ್ಯಕ್ಷನು "you will never rise in this house, sir, whether on a point of law or otherwise" (ಕಾಯದೆಯ ಮಾತಿರಲಿ ಬೇರೆ ಇರಲಿ ಈ ಸಭೆಯಲ್ಲಿ ನೀವು ಏಳಕೂಡದು) ಎಂದು ಹೇಳಿ ಕೂಡಿಸ ಬೇಕಾಯಿತು!

* * * *

ಈ ದಿನಚರಿಯಲ್ಲಿ ನನ್ನ ಅನುಭವದ ಅಸ್ತಿಪಂಜರವು ಮಾತ್ರ ಉಳಿಯುವಂತೆ ಕಾಣುತ್ತದೆ! ನನ್ನ ಭಾವನಾಲಹರಿಗಳು ಕಾವ್ಯದಲ್ಲಿ ವ್ಯಕ್ತವಾಗಬಹುದು. ಆದರೆ ವಿಶಾಲ ಅನುಭವದ ತಿರುಳು ನನ್ನಲ್ಲಿಯೇ ಉಳಿಯುವದು. ಮುಂದೆ ಅದು ಕಾದಂಬರಿ-ನಾಟಕಗಳ ಮೂಲವಾಗ ಬಹುದು. ಇಂಥವರು ಮಾತಾಡಿದರೆಂದು ನಾನಿಲ್ಲಿ ಬರೆದಿಡಬಹುದು. ಆದರೆ ಅವರು ಹೇಗೆ ಮಾತಾಡಿದರು? ಏನನ್ನು? ಧ್ವನಿಯು ಹೇಗಿತ್ತು?

ನಿಂತಿದ್ದರು ಹೇಗೆ? ಇವೆಲ್ಲ ಪ್ರಶ್ನೆಗಳು ನನ್ನ ದೃಷ್ಟಿಯಲ್ಲಿ ಮಾತ್ರ ಉಳಿದು ಬಿಡತಕ್ಕವು! ಸ್ವತಂತ್ರ ರಾಷ್ಟ್ರದ ಜೀವನವು ಇಲ್ಲಿ ಎಷ್ಟು ದಿಕ್ಕುಗಳಿಂದ ಬಂದು ನನ್ನ ಮೇಲೆ ಚಿಮ್ಮುತ್ತಲಿದೆ!

* * * *

೧೩—೧೧—೩೬

ಸಾಮ್ರಾಜ್ಯವಾದಿಯಾದ ಜನಾಂಗದ ಜೀವನವನ್ನು ಈ ರೀತಿಯಾಗಿ ವಿಭಾಗಿಸಬಹುದು: (೧) ಆದರ ಶೌರ್ಯ,— ನೆಲ–ಜಲದ ಮೇಲೆ: ಮೈಮೇಲೆ ಪ್ರಸಂಗ ಬಂದಾಗ ಜೀವದ ಹಂಗು ತೊರೆದು ಕಾದುವದು. (೨) ಜಗತ್ತಿನ ತುತ್ತತುದಿಗೆ ಹೋಗಲು ಸಹ ಸಿದ್ಧವಾದ ಮನಸ್ಸು! ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣು, ಇಬ್ಬರಗೆ ಹೆಂಡ ಇದ್ದರೆ ತೀರಿತು. (೩) ಲಲಿತಕಲೆಗಳ ಬಗೆ. (೪) ವಿದ್ಯಾಪ್ರಸಾರಾರ್ಥವಾಗಿ ಅದು ಸ್ಥಾಪಿಸಿದ ಸಂಸ್ಥೆಗಳು. (೫) ಸುಖಾರ್ಥವಾಗಿ ಕಟ್ಟಿದ ವಿಲಾಸಗೃಹಗಳು, ನೃತ್ಯಶಾಲೆಗಳು. (೬) ಆಡಳಿತದ ಕಚೇರಿಗಳು. (೭) ವಿಲಾಸಕ್ಕಾಗಿ ಸುಂದರವಾದ ಹಳ್ಳಿಗಾಡಿನ ಪ್ರದೇಶಗಳು. ಇತ್ಯಾದಿ, ಇತ್ಯಾದಿ! ಹಿಂದಿನ ವಿಜಯನಗರವು ಹೇಗಿತ್ತೆಂಬುದನ್ನು ತಿಳಿಯಬೇಕಾದರೆ ಇಂದಿನ ಲಂಡನ್ನವನ್ನು ನೋಡಬೇಕು! ತಕ್ಷಶಿಲಾ ವಿಶ್ವವಿದ್ಯಾಲಯದ ಕಲ್ಪನೆ ಬೇಕಾದರೆ ಆಕ್ಸಫರ್ಡನ್ನು ಕಾಣಬೇಕು!

* * * *

೧೪—೧೧—೩೬

ನಾನು ಒಂದು ಇನಾಮಿನ ಸಲುವಾಗಿ ಕವಿತೆ ಬರೆಯುತ್ತಿದ್ದೇನೆಂಬುದು ಮಿಸೆಸ್. ಟರ್ನರಳಿಗೆ ಗೊತ್ತಾಗಿದೆ. ಆದರೆ ಆದರ ಅರ್ಥವಾಗಿಲ್ಲ! ಕುದುರೆಯ ಜೂಜಿನಾಟದಲ್ಲಿ ರೊಕ್ಕ ಬರುವಂತೆ ನನಗೂ ಸಂಪತ್ತು ಸಿಗಬಹುದೆಂದು ಅವಳ ಕಲ್ಪನೆಯಾಗಿದೆ! ಯಾವ ದೇಶದಲ್ಲಿದ್ದರೇನು? ಬಡಿಗನ ಹೆಂಡತಿಯು ಬಡಿಗನ ಹೆಂಡತಿಯೇ ಸರಿ!!

* * * *

ಇಂದು **Journey's End** (ಪ್ರವಾಸದ ಕೊನೆ) ಎಂಬ ಮಹಾಯುದ್ಧದ ವಿಷಯದ ನಾಟಕವನ್ನು ನೋಡಿದೆ. ಬಹಳ ಚೆನ್ನಾಗಿದೆ.

ಕೈಲಾಸ್‌ಂ ಅವರ ಮನಸ್ಸಿನ ಮೇಲೆ ಇದೇ ರಂಗಭೂಮಿಯ ಪಡಿಯಚ್ಚು ಮೂಡಿರಬೇಕು! ಸಾದಾ ವೇಷ, ಸನ್ನಿವೇಶರಚನೆ, ಉತ್ತಮ ಅಭಿನಯ, ವಾಸ್ತವಿಕತೆ, ದಾರ್ಶನಿಕಪ್ರಕಾಶ, ಎರಡು ತಾಸಿನ ಅವಧಿ, ಸಿನೇಮಾ ಗೃಹದಲ್ಲಿದ್ದ ಕಾಲುಪಾಲಷ್ಟು ಜನ!

ಯುದ್ಧದ ಭೀಕರತೆಯನ್ನು ಇಲ್ಲಿ ಕಾಣಬಹುದು. ಕಂಡು ಬರುವಾಗ ಹಾದಿಯಲ್ಲಿಯೇ ಯುದ್ಧಸ್ಮಾರಕ ಸ್ತಂಭವಿದೆ. ಅದರ ಮುಂದೆ ನೂರಾರು ಮಾಲೆಗಳು. ಅಡಿಗಲ್ಲಿನ ಹತ್ತಿರ ದೊಡ್ಡ ಇಲೆಕ್ಟ್ರಿಕ್ ದೀಪಗಳನ್ನು ಇಟ್ಟು ಸ್ತಂಭವನ್ನು ಬೆಳಗಿಸಿದ್ದಾರೆ.

ಹಿಂದುಸ್ತಾನದಿಂದ ವಿಲಾಯತಿಗೆ ಬಂದವರ ಮನಃಸ್ಥಿತಿಗತಿಯನ್ನು ಇದೇ ರೀತಿಯಾಗಿ ಚಿತ್ರಿಸಬಹುದು.

* * * *

ದಿನಾಲು ಮುಂಜಾನೆ ಬೋಡ್ಲಿಯನ್ ಲೈಬ್ರರಿಗೆ ಹೋಗುವಾಗ ಮೊದಲು ಮೆಟ್ಟಲು ಹತ್ತುವಾಗ ಕಾಣುವದು-ಶೆಲ್ಲಿಯ ಫೋಟೊ! ಒಮ್ಮೊಮ್ಮೆ ಮಾಸಿದ 'ಆರ್ಯ' ಮಾಸಿಕದಲ್ಲಿಯ ಅರವಿಂದರ ಲೇಖಗಳನ್ನು ಓದುತ್ತ ಕುಳಿತಿರುತ್ತೇನೆ. ನನ್ನ ಹತ್ತಿರ ಕೂಡುವ ಹುಡುಗರಿಗೆ ಇದು ವಿಚಿತ್ರವೆನಿಸುತ್ತಿರಬೇಕು. ಇಲ್ಲಿಯವರೆಗೆ ಬಂದು ಹಿಂದುಸ್ತಾನದಲ್ಲಿಯೇ ಅಚ್ಚಾದ ಪುಸ್ತಕಗಳನ್ನು ಏಕೆ ಓದುತ್ತ ಕುಳಿತಿರುವನೆಂದು!

* * * *

೧೬—೧೧—೩೬

Leonard Barnes (ಲಿಯೊನರ್ಡ್ ಬಾರ್ನಸ್) ಎಂಬ ಸೋಶಾಲಿಸ್ಟ ಮುಖಂಡನ ಭಾಷಣವನ್ನು ಕೇಳಿದೆ. 'Socialism and the future of India" (ಸಮತಾವಾದ ಹಾಗೂ ಹಿಂದುಸ್ಥಾನದ ಭವಿಷ್ಯ) ಎಂಬ ವಿಷಯವನ್ನು ಕುರಿತು ಮಾತನಾಡಿದ. ಅವನು ಹಿತವಾದಿ, ಹಿಂದುಸ್ತಾನದ ಬಗ್ಗೆ ಕಳಕಳಿಯುಳ್ಳವ. ಆದರೆ ಇಂಗ್ಲಂಡಿನಲ್ಲಿಯ

ಸಮತಾವಾದಿಗಳಿಂದ ಸಹ ಹಿಂದುಸ್ತಾನಕ್ಕೆ ಲಾಭವಾಗುವದು ಶಕ್ಯವಿಲ್ಲ ವೆಂದು ಸ್ಪಷ್ಟವಾಗಿ ಹೇಳಿದ! 'Imperialist socialism is a contradiction in terms' (ಸಾಮ್ರಾಜ್ಯನಿಷ್ಠ ಸಮತಾವಾದವೆಂದರೆ ಅನ್ಯೋನ್ಯ ವಿರುದ್ಧ ಮಾತು) ಎಂದು ಅವನನ್ನು ಆದರಿಸಿದ ಭಾರತೀಯನು ವಂಗ್ಯೋಕ್ತಿಯಾಡಿದನು!

‡ ‡ ‡ ‡

Gascoigne (ಗ್ಯಾಸ್ಕೋಯಿನ್) ಎಂಬ 'Surrealist' (ಸರರಿಯಾಲಿಸ್ಟ) ಕವಿಯ ಭಾಷಣವಾಯಿತು. 'Poetry and the activity of mind' (ಕಾವ್ಯ ಹಾಗೂ ಮನಸ್ಸಿನ ಚಟುವಟಿಕೆ) ಎಂಬುದು ಅವನ ವಿಷಯ. ಇವನು ಕಮ್ಯೂನಿಸ್ಟ! ಸ್ಪೇನದ ಸರಕಾರದ ಸಲುವಾಗಿ ಪ್ರಚಾರ ಮಾಡಲು ಹೋಗಿದ್ದು ಇದೇ ತಿರುಗಿ ಬಂದಿದ್ದ. Spender (ಸ್ಪೆಂಡರ) ಮೊದಲಾದ ಕವಿಗಳ ಕಾವ್ಯವು ಪ್ರಚಾರಕಾವ್ಯ; 'ಕಮ್ಯೂನಿಸ್ಟ' ಆಗಿಯೂ ಕಾವ್ಯದ ರೀತಿ–Activity of mind (ಮನಸಿನ ಚಟುವಟಿಕೆ)ಯನ್ನು ಕಾಯಬೇಕೆಂಬ ಹೊಸ ಪಂಥಕ್ಕೆ ಸೇರಿದ್ದಾನೆ! ಕೆಲವು 'Surrealist' (ಸರರಿಯಾಲಿಸ್ಟ) ಕವಿತೆಗಳನ್ನು ಓದಿ ತೋರಿಸಿದ.

‡ ‡ ‡ ‡

೧೮—೧೧—೩೬

ಹಿಂದುಸ್ತಾನದಲ್ಲಿ ರಾಜಕಾರಣರಂಗದಲ್ಲಿ ಪ್ರಖ್ಯಾತರಾದ ಒಬ್ಬ ಮಹನೀಯರ ಮಗನು ಇಲ್ಲಿಗೆ ಬಂದು ಐದು ವರ್ಷವಾಗಿದೆ. ಇಲ್ಲಿಯೇ ಇಲ್ಲಿಯವರೊಡನೆ ಲಗ್ನವಾಗಿ ಇದ್ದಾನೆ. ಇವನ ತಂದೆಯವರು ಆಕ್ಸಫರ್ಡಿಗೆ ಬಂದಾಗ ಅವರಿಗೆ ಸಿಗರೇಟು ಕೊಟ್ಟನಂತೆ! "ನಾನು ಸೇದುವದಿಲ್ಲವೆಂಬುದು ನಿನಗೆ ಗೊತ್ತಿದೆಯಲ್ಲ?" ಎಂದು ಅವರು ಕೇಳಿದಾಗ: "I knew that but I thought that, having come to Oxford, you may!" (ಅದು ನನಗೆ ಗೊತ್ತಿದೆ. ಆದರೆ ಆಕ್ಸಫರ್ಡಕ್ಕೆ ಬಂದು ನೀವು ಸೇದಬಹುದೆಂದು ತಿಳಿದಿದ್ದೆ.) ಎಂದು ಹೇಳಿದನಂತೆ!

---

## ೨೩

. . . . . .                                                                 ಆಕ್ಸಫರ್ಡ

೨೦—೧೧—೩೭

ನಿನ್ನೆ ಯೂನಿಯನ್ನದಲ್ಲಿ ಆದ 'Presidential debate' (ಪ್ರಾಂತೀಯ ಚರ್ಚೆ)ಗೆ ಹೋಗಿದ್ದೆ. ಇದು ಆಕ್ಸಫರ್ಡಿನಲ್ಲಿ ಒಂದು ಮಹತ್ವದ ಪ್ರಸಂಗ. ಪ್ರೇಕ್ಷಕರ ಗ್ಯಾಲರಿಯೆಲ್ಲ ಕಿಕ್ಕಿರಿದು ತುಂಬಿತ್ತು. The Marquis of London derry (ಮಾರ್ಕ್ವಿಸ್ ಆಫ ಲಂಡನ್ ಡೆರಿ) ಹಾಗು Sir Archibald Sinclair (ಸರ ಆರ್ಚಬಾಲ್ಡ ಸಿಂಕ್ಲೇರ್) ಎಂಬ ಇಬ್ಬರು ಸನ್ಮಾನ್ಯ ಅತಿಥಿಗಳಾಗಿದ್ದರು. Ronald Bell (ರೋನಾಲ್ಡ ಬೆಲ್) ಹಾಗು Mayhews (ಮೇಹ್ಯುಜ) ಎಂಬ ಇಬ್ಬರು ವಿದ್ಯಾರ್ಥಿಗಳು ಅಧ್ಯಕ್ಷಸ್ಥಾನಕ್ಕೆ ಹುರಿಯಾಳಾಗಿ ನಿಂತಿದ್ದರು. "That the League of Nations needs drastic reform" (ರಾಷ್ಟ್ರಸಂಘದಲ್ಲಿ ಮೂಲಭೂತವಾದ ಸುಧಾರಣೆ ಆಗಬೇಕು) ಎಂಬುದೇ ವಿಷಯವಾಗಿತ್ತು. ಉತ್ತಮ ಭಾಷಣಗಳಾದವು. ಅತಿಥಿಗಳೂ ಒಂದೊಂದು ಪಕ್ಷವನ್ನು ಹಿಡಿದು ಮಾತನಾಡಿದರು.

ರಾಜಕೀಯ ಪಕ್ಷಗಳೆಂದರೆ ಏನೆಂಬುದು ಇಲ್ಲಿ ಮಾತ್ರ ಗೊತ್ತಾಗುತ್ತದೆ. ಅಲ್ಲದೆ ಅಭಿಪ್ರಾಯಕ್ಕಾಗಿ ಇರುವ ಸ್ವಾತಂತ್ರ್ಯವೂ ಆಶ್ಚರ್ಯಕರವಾದದ್ದು. Mayhews (ಮೇಹ್ಯುಜ) ಎಂಬ ಹುಡುಗನು ಸೋಶಿಯಲಿಸ್ಟ. ಲಂಡನ್‌ಡೆರಿಯವರನ್ನು ಅವನು ಮನಬಂದಂತೆ-ಜಾಣತನದಿಂದ, ಟೀಕಿಸಿದನು. ಈಗಿನ ಸರಕಾರದ ಹುಳುಕನ್ನೆಲ್ಲ ಹೊರಗೆಳೆದನು. ಲೀಗಿನ ಮರಣೋನ್ಮುಖತೆಗೆ ಈ ಸರಕಾರವೇ ಕಾರಣ, ಅದರ ರಚನಾಕ್ರಮವಲ್ಲವೆಂದು ಸಾರಿದನು.

ಸ್ವತಃ ಲಂಡನ್‌ಡೆರಿಯವರು ಅವನ ಭಾಷಣದ ರೀತಿಯನ್ನು ಪ್ರಶಂಸಿಸಿದರು. ಆ ಮೇಲೆ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿದರು 'Conservatism' (ಸ್ಥಿತಿಪ್ರಿಯವಾದ)ದ ತಿರುಳು ಅವರ ಮಾತಿನಲ್ಲಿ ತುಂಬಿತ್ತು. "The idealism of the liberals is quite good. But they do not know human nature. And there is a good deal of human nature in the League...... Other nations like Russia and Germany have known starvation and defeat......We have never been defeated after 1066....The League of Nations is my great ancestor's idea...I dislike all dictatorships. I have been born a democrat. The world is divided between the 'haves' and the 'have-nots.' In England the 'haves' are trying to do their best for the 'have-nots.' (ಲಿಬರಲ್ (ಪ್ರಗತಿಪರ)ರ ಧ್ಯೇಯವಾದವು ಬಹಳ ಚೆನ್ನಾಗಿದೆ. ಆದರೆ ಅವರಿಗೆ ಮನುಷ್ಯಸ್ವಭಾವ ಗೊತ್ತಿಲ್ಲ. ರಾಷ್ಟ್ರಸಂಘದಲ್ಲಿ ಬಹಳಷ್ಟು ಮನುಷ್ಯಸ್ವಭಾವವಿದೆ......ರಶಿಯಾ, ಜರ್ಮನಿ ದೇಶಗಳಿಗೆ ಬಡತನ-ಸೋಲುಗಳು ಗೊತ್ತಾಗಿವೆ... ೧೦೬೬ರ ತರುವಾಯ ನಾವು ಸೋತಿಲ್ಲ. ರಾಷ್ಟ್ರಸಂಘವು ನನ್ನ ದೊಡ್ಡ ಪೂರ್ವಜನೊಬ್ಬನ ಕಲ್ಪನೆ. ....ನನಗೆ ಸರ್ವಾಧಿಕಾರಿತ್ವವೆಂದರೆ ಸೇರುವದಿಲ್ಲ. ನಾನು ಹುಟ್ಟಾ ಪ್ರಜಾಸತ್ತೆಯ ಭಕ್ತ. 'ಇದ್ದವರು' ಹಾಗೂ 'ಇಲ್ಲದವರು,' ಇವರಿಂದ ಜಗತ್ತು ಎರಡು ಹೋಳಾಗಿದೆ. ಇಂಗ್ಲಂಡದಲ್ಲಿ 'ಇದ್ದವರು' 'ಇಲ್ಲದವರ' ಸಲುವಾಗಿ ಕೂಡಿದಷ್ಟು ಉತ್ತಮರೀತಿಯಿಂದ ಹೆಣಗುತ್ತಿರುವರು.) ......ಇವೆಲ್ಲ ಆ ಪಕ್ಷದ ಮೂಲಮಂತ್ರಗಳು!

ಸಿಂಕ್ಲೇರ್ ಇವರು 'ಲಿಬರಲ್' ಪಕ್ಷದವರು, ಅಮೋಘವಾಗಿ ಮಾತನಾಡಿದರು. ಉಗ್ಗುತ್ತಿದ್ದರು ಬೇರೆ! ಒಮ್ಮೊಮ್ಮೆ ಉಗ್ಗ ಹತ್ತಿದ ರೆಂದರೆ ಇಡಿ ನಿಮಿಷ 'ಚರ್ವಿತ ಚರ್ವಣ'ವು ನಡೆಯುತ್ತಿತ್ತು. ಆದರೆ ಒಮ್ಮೆಲೆ ಬಾಣ ಬಿಟ್ಟಹಾಗೆ ಅವರ ವಕ್ತೃತ್ವವು ಹಾರಿ ಸಭಿಕರ ಎದೆಯನ್ನು ತಟ್ಟುತ್ತಿತ್ತು. ಮಾತಿನಲ್ಲಿ ತುಸು ಕೊರತೆಯಿದ್ದಕಾರಣ ಅಂಗ ಚೇಷ್ಟೆಗಳು ಇವರಲ್ಲಿ ಹೆಚ್ಚಾಗಿದ್ದವು. ಕೈಮೈ ಬೀಸಾಡಿ ಬಾಯಿಯನ್ನು



ಸುಪ್ತ-ಸೌಂದರ್ಯ

( ಪುಟ ೫೦ )

ತಿರುವಾಡುತ್ತಿದ್ದರು. "Peace ... justice ... Peace to end war ...the League should not be the war-office of the world... we must organise public opinion in favour of the oppressed in any part of the world ... Sir Samuel Hoare made a magnificent speech. Churchill said "Even we were astonished!". But had Hoare said the same thing in his private talk with Mussolini a week before, the Italian warships would never have left for Abyssinia". ("ಶಾಂತಿ..ನ್ಯಾಯ..ಯುದ್ಧವನ್ನು ನಿಲ್ಲಿಸಲಿಕ್ಕೆಂದು ಶಾಂತಿ.... ರಾಷ್ಟ್ರಸಂಘವು ಜಗತ್ತಿನ ಯುದ್ಧ ಕಚೇರಿಯಾಗಕೂಡದು..ಜಗತ್ತಿನ ಎಲ್ಲ ಭಾಗಗಳಲ್ಲಿಯ ದಲಿತ ಜನಕ್ಕೆ ಅನುಕೂಲವಾದ ಲೋಕಮತವನ್ನು ನಾವು ಕಟ್ಟಬೇಕು... ಸರ್ ಸಾಮ್ಯುಅಲ್ ಹೋರರು ಉತ್ತಮ ಭಾಷಣ ಮಾಡಿದರು. ಚರ್ಚಿಲ್ ಹೇಳಿದರು "**ನಮಗೆ** ಕೂಡ ಆಶ್ಚರ್ಯವಾಯ್ತು" ಎಂದು.ಆದರೆ ಒಂದು ವಾರಮುಂಚೆ ಮುಸೊಲಿನಿಯ ಕೂಡ ಆದ ಖಾಸಗಿ ಮಾತಿನಲ್ಲಿ ಹೋರರು ಅದನ್ನೇ ಹೇಳಿದ್ದರೆ, ಇಟಲಿಯ ಯುದ್ಧ-ನೌಕೆಗಳು ಎಬಿಸೀನಿಯಕೆ ಹೋಗುತ್ತಿರಲೇ ಇಲ್ಲ) ಇವರದು 'spasmodic oratory.' (ಬಿಟ್ಟು ಬಿಟ್ಟು ಬರುವ ಮಾತುಗಾರಿಕೆ) ಜೋಕಾಲಿಯಂತೆ ಏರಿಳಿತಗಳಿವೆ ಇದಕ್ಕೆ!

ಜಗತ್ತಿನ ಸೂತ್ರಗಳನ್ನೇ ಕೈಯಲ್ಲಿ ಹಿಡಿದುಕೊಂಡು ನಿಂತಿದ್ದ ಇಲ್ಲಿಯ ರಾಜಕಾರಣ ಪ್ರವೀಣರು ವಿದ್ಯಾರ್ಥಿಗಳೊಡನೆ ಎಷ್ಟು ಸಲಿಗೆಯಿಂದ ಬಂದು ನಿಲ್ಲುವರು!

* * * *

೨೧—೧೧—೩೬

ಇಂದು 'Mary Rose' (ಮೇರಿ ರೋಜ) ಎಂಬ ನಾಟಕವನ್ನು ನೋಡಿದೆ. ಇದರ ವಿಷಯವನ್ನು ನಾಳಿನ ಪತ್ರದಲ್ಲಿ ಬರೆಯುತ್ತೇನೆ. ಇವತ್ತು 'ground-frost' ಎಂದರೆ ನೆಲಮಂಜು ಇಲ್ಲಿ ಬಿದ್ದಿತ್ತು. ಒಂದು

ಮೂರು ಬಿಟ್ಟು ಮುಂದೆ ಕಾಣುತ್ತಿರಲಿಲ್ಲ. ಆದರೆ ಮುಗಿಲಿನಲ್ಲಿಯು ಚಂದ್ರಾಮನು ಮಂಜಿನೊಳಗಿಂದ ಕ್ಯಾಮರಾದಲ್ಲಿಕಂಡಂತೆ ಕಾಣುತ್ತಿದ್ದ!

* * * *

೨೨—೧೧—೩೬

ಇಂದು ಮನೆಯಲ್ಲಿಯೇ ಇದ್ದೇನೆ. ಅದೆಂಥ ಕೆಟ್ಟ ಇಬ್ಬನ್ನಿ ಬಿದ್ದಿದೆ! 'fog' (ಫಾಗ) ಎಂದರೆ ಏನೆಂಬುದು ಈಗ ಗೊತ್ತಾಯಿತು. "This earth, this heaven, this England" (ಈ ಭೂಮಿ, ಈ ಸ್ವರ್ಗ, ಈ ಇಂಗ್ಲಂಡ) ಎಂದು ಶೇಕ್ಸಪಿಯರನು ಬರೆದಿದ್ದಾನೆ. "this hell" (ಈ ನರಕ) ಎಂಬುವದನ್ನು ಅವನು ಮರೆತಂತೆ ಕಾಣುತ್ತದೆ!

ಇಂದು ಮಿಸೆಸ್. ಟರ್ನರಳು ಮಾತು ಬೆಳೆಸಿದಳು. ಆಂಗ್ಲ ವಿದ್ಯಾರ್ಥಿಗಳಿಗಿಂತ ಭಾರತೀಯರನ್ನೇ ಮನೆಯಲ್ಲಿ ಇರಗೊಡುವದು ಯೋಗ್ಯವೆಂದು ಅವಳ ಅಭಿಪ್ರಾಯವಾಗಿದೆ. "They come dead drunk and sleek in their bed" (ಅವರು ತೆರಪಿಲ್ಲದೆ ಕುಡಿದುಬಂದು ಹಾಸಿಗೆಯಲ್ಲಿ ಬೀಳುತ್ತಾರೆ) ಎಂದು ಆಂಗ್ಲ ವಿದ್ಯಾರ್ಥಿಗಳಬಗ್ಗೆ ಹೇಳಿದಳು! ಬರ್ಮಿಂಗ್ ಹ್ಯಾಮುದಲ್ಲಿರುವ ತನ್ನ ಮಗನನ್ನು ಕಾಣಲು ಅವಳು ತನ್ನ ಮೋಟರಿನಲ್ಲಿ ಇಂದು ಹೋಗಿದ್ದಳಂತೆ. ಸೊಸೆಯು ಈಕೆಯ ಮನಸ್ಸಿಗೆ ಬಂದಿಲ್ಲ. "She is neither pretty nor beautiful nor domesticated nor knows how to manage the establishment ...She is a little monkey" (ಅವಳು ಬೆಡಗಿಯೂ ಅಲ್ಲ, ಚೆಲುವೆಯೂ ಅಲ್ಲ. ಈಲಾಗಿಯೂ ಇಲ್ಲ, ಮನೆ ನಡಿಸುವ ತಿಳುವಳಿಕೆಯೂ ಇಲ್ಲ. .ಅವಳೊಂದು ಮರಿ ಕೋತಿ.) ಎಂದು ದೂರಿದಳು. ಈಕೆಯ ಮಗಳು ಕೂಡ ಈಕೆಯ ಮನಸ್ಸಿಗೆ ಬಂದಿಲ್ಲ; ಮಗನೂ ಇಲ್ಲ. ಆದರೆ ಕರುಳೆಲ್ಲಿ ತಪ್ಪಿದೆ? ಸೇಬು ಹಣ್ಣುಗಳನ್ನು ತೆಗೆದುಕೊಂಡು ಹೋಗಿ ಮಗನಿಗೆ ಕೊಟ್ಟು ಬಂದಳು!

ರಬ್ಬರಿನ ಚೀಲಗಳಲ್ಲಿ ಬಿಸಿನೀರು ತುಂಬಿ ಹಾಸಿಗೆಯಲ್ಲಿ ಇರಿಸಿದ ಹೊರತು ಇಲ್ಲಿಯ ಥಂಡಿಯೇ ಹೋಗುವದಿಲ್ಲ. ನಾನು ಎರಡು ಚೀಲ ಗಳನ್ನು ಕೊಂಡಿದ್ದೇನೆ. ಅವನ್ನು ತುಂಬಿ ಒಯ್ದಿಡುವಾಗ "your

little babies are going to bed" (ನಿನ್ನ ಎರಡೂ ಚಿಕ್ಕ ಮಗುಗಳು ನಿದ್ದೆ ಹೋಗುತ್ತಿವೆ) ಎಂದು ಮಿಸೆಸ್ ಟರ್ನರಳು ನಗೆಯಾಡುತ್ತಾಳೆ!

*   *   *   *

೨೩-೧೧-೩೬

ಬೋಡ್ಲೆಯನ್ ಲಾಯಬ್ರರಿಗೆ ಹೋಗುವ ಮಗ್ಗುಲಲ್ಲಿಯೆ ಶೆಲ್ಲಿಯ ಎರಡು ಉತ್ತಮ ಚಿತ್ರ (portraits) ಗಳನ್ನು ಹಾಕಿದ್ದಾರೆ. ಇದೊಂದು ನನಗೆ ಸ್ಫೂರ್ತಿದಾಯಕವಾಗಿದೆ. ಇಬ್ಬರು ನನ್ನ ಆಂತರಿಕ ಜೀವನವನ್ನು ಮಾಗಿಸಿದರು, ಶೆಲ್ಲಿ ಹಾಗು ಬೇಂದ್ರೆ. ಬೇಂದ್ರೆಯವರ ಸಾನಿಧ್ಯವು ಸದ್ಯಕ್ಕೆ ತಪ್ಪಿದ್ದರೂ ಶೆಲ್ಲಿಯದು ಇದೆಯಲ್ಲ!

*   *   *   *

೨೪-೧೧-೩೬

ಈಗ ಮೂರು ದಿವಸ ಬಿದ್ದ ಮಂಜಿನಿಂದ ಎಲೆಗಳೆಲ್ಲ ಉದುರಿ ಹೋಗಿವೆ. ದೊಡ್ಡ ಮರ, ಸಣ್ಣ ಗಿಡಗಳೆಲ್ಲ ಬರಿದಾದ ಟೊಂಗೆಗಳನ್ನು ಬಿಟ್ಟುಕೊಂಡು ಅಳುಮೋರೆ ಮಾಡಿಕೊಂಡು ನಿಂತಿವೆ! ಸೌಂದರ್ಯ ವನ್ನು ಸುಡಲು ಬಂದ ಉರಿಯ ಹೊಗೆಯಂತೆ ಕೆಳಗೆ ಮೇಲೆ ಎಲ್ಲೆಡೆಗೆ ಸುತ್ತಿ ಮಂಜು ಕಣ್ಣಲ್ಲಿ ಮೂಗಿನಲ್ಲಿ ಹೊಗುತ್ತದೆ. ಆದರೆ ದೊಡ್ಡ ನಿಲುವಂಗಿಯನ್ನು ಹಾಕಿಕೊಂಡಿದ್ದರೂ ಥಂಡಿಯಿಂದ ಥರ ಥರ ನಡಗುತ್ತೇನೆ!

*   *   *   *

ಪ್ರೊ. ವಾಯಿಲ್ಡ್ ಅವರು ಒಂದು ಕಥೆ ಹೇಳಿದರು. ಅಮೇರಿಕನ್ನ ರೆಲ್ಲರೂ ಸ್ವರಗಳನ್ನು ಅನುನಾಸಿಕವಾಗಿ ಉಚ್ಚರಿಸುತ್ತಾರೆ; ಅದರಂತೆ ಅವರು ಒಬ್ಬ ಅಮೇರಿಕನ್ನನಿಗೆ ಹೇಳಿದರು. ಅವನು ಅಲ್ಲಗಳೆದ. ಆಗ ಪ್ರೊಫೆಸರರು ಅದನ್ನು ಸಪ್ರಮಾಣವಾಗಿ ಸಿದ್ಧಗೊಳಿಸಿ ತೋರಿಸಿದರು. ಅವನ ಮೂಗಿನ ಕೆಳಗೆ ಚಾಕೂವಿನ ಅಲಗು ಹಿಡಿದರು, ಅವನು ಸ್ವರ ಗಳನ್ನು ಉಚ್ಚರಿಸುವಾಗ. ಆಗ ಹವೆಯು ಮೂಗಿನೊಳಗಿಂದ ಸಹ ಬಂದು ಆ ಅಲುಗನ್ನು ತೋಯಿಸಿತು, ಗುರುತು ಮಾಡಿತು. ಒಮ್ಮೆ ಕೆಲವು ಅಮೇರಿಕನ್ ಅತಿಥಿಗಳನ್ನು ಊಟಕ್ಕೆ ಕರೆದಾಗ ಈ ಮಾತನ್ನು

ತೆಗೆದನು, ಆ ಅಮೇರಿಕನ್ ಸಭ್ಯಗೃಹಸ್ಥ. ಅವರೆಲ್ಲರೂ ಸಿಟ್ಟಿಗೆದ್ದರು. ಆಗ ಮೂಗಿನ ಕೆಳಗೆ ಚಾಕೂವಿನ ಅಲುಗನ್ನು ಹಿಡಿದು ಬೇಕಾದರೆ ಪರೀಕ್ಷಿಸಬಹುದೆಂದು ಹೇಳಿದ. ಎಲ್ಲರೂ ಊಟಕ್ಕೆಂದಿಟ್ಟ ಚಾಕೂಗಳನ್ನು ಹಿಡಿದುಕೊಂಡು ಸ್ವರಗಳನ್ನುಚ್ಚರಿಸಿ ನೋಡಿ ತೆಪ್ಪಗಾದರು. ತಾವು ಮೂಗಿನಿಂದ ಉಚ್ಚರಿಸುವದಿಲ್ಲವೆಂದು ಅವರ ಕಲ್ಪನೆ!

‡ ‡ ‡ ‡

ಇಂದು ಎಫ್. ಆರ್. ಲೀವ್ಹಿಸ್ ಎಂಬ ಕೇಂಬ್ರಿಜ್ ಪ್ರೊಫೆಸರರ ಭಾಷಣವನ್ನು ಕೇಳಲು ಹೋಗಿದ್ದೆ. ಅವರು 'Scrutiny' (ಸ್ಕ್ರೂಟಿನಿ ಸಮೀಕ್ಷಣ) ಎಂಬ ವಿಮರ್ಶಾ ಮಾಸಿಕವನ್ನು ಹೊರಡಿಸುತ್ತಿದ್ದಾರೆ. 'Richards' (ರಿಚರ್ಡ್ಸ) 'T. S. Eliot' (ಟಿ. ಎಸ್. ಈಲಿಯಟ್) ಇವರ ಹಾದಿಯನ್ನು ತುಳಿದವರು. ಇಂಥ ಮಾಸಿಕವನ್ನು ನಡೆಯಿಸುವದು ಎಷ್ಟು ಕಠಿಣವೆಂಬುದನ್ನು ಅವರು ಬಣ್ಣಿಸಿದರು. ಅದೇ ಅವರ ವಿಷಯ ವಾಗಿತ್ತು. ಅವರ ಮಾತನ್ನು ಕೇಳಿ ನನಗೆ 'ಕನ್ನಡ ಕುಲ'ದ ನೆನ ಪಾಯಿತು! ಇಂಗ್ಲಂಡದಲ್ಲಿಯೇ ಹೀಗಾದರೆ ನಮ್ಮಲ್ಲಿ ಏನಾಗಬೇಡ!

‡ ‡ ‡ ‡

೨೫—೧೧—೩೬

ಇಲ್ಲಿಗೆ ಬರುವದೆಂದರೆ ಒಂದು ಸಾಹಸವನ್ನು ಕೈಕೊಂಡಂತೆ. ನನಗೆ 'ರ್ಯೂಪರ್ಟ್ ಬ್ರೂಕ್'ನ ಸುನೀತೆಯು ನೆನಪಾಗುತ್ತದೆ:

"Glad from a world grown old and cold and weary,
Leave the sick hearts that honour could not move.
And all that little emptiness of love!"

(ಹಳಸಿದ, ಎದೆ ಸುಟ್ಟ, ದಣಿದ ಜಗದಿಂದ ಹರುಷಹೊಂದಿ ಹೊರ ಬಂದು, ಮಾನ–ಮರ್ಯಾದೆಯು ಅಲುಗಿಸದ ಆಸತ್ತ ಬೇಸತ್ತ ಹೃದಯ ಗಳನ್ನೂ ಪ್ರೀತಿಯ ಪೊಳ್ಳುತನವನ್ನೂ ಬಿಟ್ಟುಕೊಡು.) ಇದೊಂದು ಪರಮ ಸಾಹಸ. ಇದನ್ನು ಕೊನೆಗಾಣಿಸಲು ದೇವರ ಕರುಣೆ ಬೇಕು, ಅತುಲವಾದ ಧೈರ್ಯವು ಬೇಕು!

# ೨೩

. . . . . . .

ಆಕ್ಸಫರ್ಡ್

೨೭—೧೧—೩೬

ಇಂದು ಇಲ್ಲಿಯ ರಾಜಮಾನ್ಯ ಕವಿಯಾದ 'ಮೇಸ್‌ಫೀಲ್ಡ'ನ ಕಾವ್ಯಗಾಯನವಿತ್ತು. ಒಂದು ಸಂಘಕ್ಕಾಗಿ, ಬಂದ ದುಡ್ಡನ್ನೆಲ್ಲ ಕೂಡಿಸ ಬೇಕೆಂದು ತಿಕೀಟು ಹಚ್ಚಿದ್ದರು. 'Rhodes House' (ರ್‍ಹೋಡ್ಸಗೃಹ) ದಲ್ಲಿ ಶ್ರೋತೃವೃಂದವು ಕಿಕ್ಕಿರಿದು ನೆರೆದಿತ್ತು. ಮುದುಕಸ್ತ್ರೀಯರೇ ಹೆಚ್ಚಾಗಿದ್ದರು. ಹತ್ತು ನಿಮಿಷ ಹೊತ್ತಾಗಿ ಕಾರ್ಯಕ್ರಮವು ಸುರು ವಾಯಿತು. (ಕಾವ್ಯಗಾಯನಗಳು ಎಲ್ಲ ಕಡೆಗೆ ಒಂದೇ ಎಂದು ಕಾಣು ತ್ತವೆ!) ಮುಗಿಯುವ ಸುಮಾರು ಹೊತ್ತಿಗೆ ಅನೇಕ ಮುದುಕರು ಎದ್ದು ಹೋಗಹತ್ತಿ ಶಾಂತತೆಯನ್ನು ಭಂಗಪಡಿಸಿದರು.

ಮೇಸ್‌ಫೀಲ್ಡನನ್ನು ಸಭೆಗೆ ಕರೆದುಕೊಂಡು ಬಂದ ಕಾರ್ಯದರ್ಶಿ ಹೆಣ್ಣುಮಗಳು: "It will be superfluous and absurd on my part to tell you who Mr. Masefield is" (ಮೇಸ್‌ಫೀಲ್ಡ ಯಾರೆಂದು ನಾನು ನಿಮಗೆ ಹೇಳುವದು ಅನವಶ್ಯಕ ಹಾಗೂ ಅಸಂಗತವಾಗಿದೆ.) ಮುಂತಾಗಿ ಹೇಳಿದ ಮೇಲೆ ಇಬ್ಬರೂ ಕುಳಿತುಕೊಂಡರು. ಪ್ಲ್ಯಾಟ್‌ ಫಾರ್ಮಿನ ಮೇಲೆ ಕವಿಯೊಬ್ಬನೇ ಕುಳಿತನು. ನೋಡಲಿಕ್ಕೆ ಅಷ್ಟೊಂದು ಎತ್ತರವಾದ ಆಳಲ್ಲ. ಆದರೆ ಸಾಧಾರಣವಾಗಿ ಗಡುತರ. ಎದ್ದು ಕಾಣುವ ಮೋರೆ. ತಲೆಯ ಮೇಲೆ ನರೆಗೂದಲು. ಮನೋಹರವಾದ ಮೂರ್ತಿ, ಮೇಸ್‌ಫಿಲ್ಡನದು. "Ladies and gentlemen, I am by pofession a story-teller. My nurse told me a story when I was four years old. I retold it in verse some years back" (ಮಹನೀಯರೆ, ನಾನು ಕಸಬಿನಿಂದ ಕತೆಗಾರ. ನಾಲ್ಕು ವರ್ಷದವನಿದ್ದಾಗ ನನ್ನ ದಾದಿಯು ಒಂದು ಕತೆ ಹೇಳಿದಳು. ಅದನ್ನೇ ನಾನು ಕೆಲವು ವರ್ಷಗಳ ಹಿಂದೆ

ಕವಿತೆಯಲ್ಲಿ ಹೇಳಿದೆ.) ಎಂದು 'ಎಂದೂ ಮುಗಿಯದ' ಕತೆಯಾದ 'One locust came and then another' (ಒಂದು ಜಿಟ್ಟಿಯು ಬಂದಿತು, ಆ ಮೇಲೆ ಮತ್ತೊಂದು) ಎಂಬ ಕಥಾತ್ಮಕ ಕವಿತೆಯನ್ನು ಓದಿದನು. ಸುಂದರವಾಗಿತ್ತು. ಇಂಥ ಸಾಮಾನ್ಯ ಕಥೆಯನ್ನು ಇಷ್ಟು ಅಸಾಮಾನ್ಯವಾಗಿಸಲು ಜಾಣ್ಮೆ ಬೇಕು. ಆ ಮೇಲೆ 'Reynard the fox' (ರೇನಾರ್ಡ್ ದ ಫಾಕ್ಸ್) ಎಂಬ ಪ್ರಸಿದ್ಧ ಕವಿತೆಯ ಕೆಲವು ಭಾಗಗಳನ್ನು ಓದಿದನು: "Casting about for a situation which would illustrate the comradeship and the fellowship in English society (ಎಂಥ ಕಟು ಟೀಕೆಯಿದು!) I fixed upon one of the sports,--fox-hunting. I had seen hounds and fox-hunting as a child. But I did not know the art of fox-hunting. I set about studying it for some days,--in the Bodleian! They were amused with my ordering all sorts of books. And then I talked with such of my friends as were fox-hunters. They were not poets,--but they were rapt when they talked of fox-hunting. (ಎಂಥ ಟೀಕೆ!). And then I wrote my poem." (ಇಂಗ್ಲಿಶ್ ಸಮಾಜದ ಸಖ್ಯವನ್ನೂ ಬಾಂಧವ್ಯವನ್ನೂ ಉದಾಹರಿಸಲು ಯೋಗ್ಯವಾದ ಸನ್ನಿವೇಶವನ್ನು ಹುಡುಕುತ್ತಿರುವಾಗ 'ನರಿಯಬೇಟೆ' ಎಂಬ ಆಟವನ್ನೆ ಗೊತ್ತುಪಡಿಸಿದೆ. ಹುಡುಗನಿದ್ದಾಗ ನಾನು ಬೇಟೆಯ ನಾಯಿಗಳನ್ನೂ ನರಿಬೇಟೆಯನ್ನೂ ನೋಡಿದ್ದೆ. ಆದರೆ ನರಿಬೇಟೆ ನನಗೆ ಗೊತ್ತಿರಲಿಲ್ಲ. ಬೋಡ್ಲಿಯನ್ (ಲಾಯಬ್ರರಿ)ಯಲ್ಲಿ ಅದರ ಅಭ್ಯಾಸ ನಡೆಸಿದೆ. ಎಲ್ಲ ತರದ ಪುಸ್ತಕ ತರಿಸುವದನ್ನು ಕಂಡು ಅಲ್ಲಿಯವರು ನಕ್ಕರು. ತರುವಾಯ ನರಿಬೇಟೆಗಾರರಾದ ಕೆಲವು ಸ್ನೇಹಿತರ ಕೂಡ ಮಾತನಾಡಿದೆ. ಅವರೇನು ಕವಿಗಳಲ್ಲ—ಆದರೆ ನರಿಬೇಟೆಯನ್ನು ಕುರಿತು ಮಾತಾಡಿದಾಗ ಅವರು ಗಕ್ಕಾಗಿದ್ದರು. ಆ ಮೇಲೆ ನಾನು ಈ ಕವಿತೆ ಬರೆದೆ.) ಎಂದು ಹೇಳಿ ಓದಲು ಸುರುವು ಮಾಡಿದನು. ಇಲ್ಲಿ ಭಾವನೆ ಹಾಗು ಕಥಾವಸ್ತುಗಳು ಸರಿಬೆರಿಕೆಯಾಗಿ ಕೂಡಿವೆ. ನರಿಯು ಓಡಿ ಹೋಗುವಾಗ ಅನೇಕ ಪ್ರದೇಶಗಳೊಳಗಿಂದ ಹಾಯುತ್ತದೆ. "You cannot trace it to any single

county. It is a scenery composed from my knowledge of different parts of the countryside. My fox starts running in Berkshire and goes through—shire" (ಯಾವೊಂದು ದೇಶಕ್ಕೂ ನೀವು ಅದನ್ನು ಹೋಲಿಸಲಾರಿರಿ. ಹಳ್ಳಿಗಾಡಿನ ವಿವಿಧಭಾಗಗಳ ಬಗ್ಗೆ ನಾನು ಪಡೆದ ಜ್ಞಾನದಿಂದ ಕೂಡಿದೆ ಆ ದೃಶ್ಯ. ಬರ್ಕಶಾಯರದಲ್ಲಿ ನನ್ನ ನರಿಯು ಓಡಲಿಕ್ಕೆ ಹತ್ತಿ—ಶಾಯರದೊಳಗೆ ಹಾಯುತ್ತದೆ) ಮುಂತಾಗಿ ಹೇಳಿದನು.

ಇದಾದ ಮೇಲೆ ಒಂದು ಭಾವಗೀತೆಯನ್ನು ಓದಿದನು. "My belief is that this world is only a shadow of a more perfect and radiant world. Artists get a gilmpse of it in their moments of exultation and try to convey it in their words of wisdom" (ಈ ಜಗತ್ತು ಹೆಚ್ಚು ಪೂರ್ಣ ಹಾಗು ಶುಭ್ರವಾದ ಇನ್ನೊಂದು ಜಗತ್ತಿನ ಬರೀ ನೆರಳೆಂದು ನನ್ನ ನಂಬಿಗೆಯಿದೆ. ತಮ್ಮ ಉಲ್ಲಾಸ ನಿಮಿಷಗಳಲ್ಲಿ ಕವಿಗಳು ಅದರ ನೋಟ ಕಂಡು ತಮ್ಮ ಜಾಣ ನುಡಿಗಳಿಂದ ಅದನ್ನು ಚಿತ್ರಿಸಲು ಹವಣಿಸುತ್ತಾರೆ.) ಮುಂತಾಗಿ ಹೇಳಿ ಅದನ್ನು ಓದಿದನು. ಕವಿತೆ ಚೆನ್ನಾಗಿತ್ತು. ಆದರೆ ದರ್ಶನ (Vision) ಹಾಗು ಕಥೆಯನ್ನು ಮೇಸ್‌ಫೀಲ್ಡನು ಉತ್ತಮವಾಗಿ ಕೂಡಿಸಬಲ್ಲ, ವಿಚಾರ ಸಂಪತ್ತಿ ಹಾಗು ದರ್ಶನಗಳನ್ನು ಅಷ್ಟೊಂದು ಚೆನ್ನಾಗಿ ಕೂಡಿಸಲಾರ ಎಂದೆನಿಸಿತು. ಆ ಮೇಲೆ "It is a wild wind, the west wind" (ಅದೊಂದು ಕಾಡುಗಾಳಿ, ಪಡುವಣದ ಗಾಳಿ) ಎಂಬ ಕವಿತೆಯನ್ನು ಓದಿದನು. ಆ ಮೇಲೆ "Summer is going" ('ಬೇಸಗೆ ಹೋಗುತ್ತಿದೆ') ಎಂಬ ಕವಿತೆಯನ್ನು ಕೊನೆಗೆ ಅರ್ಥಪೂರ್ಣವಾಗಿ ಓದಿ ಕುಳಿತನು.

ಕವಿತೆಗಳನ್ನು ಮೇಸ್‌ಫೀಲ್ಡನು ಉತ್ತಮವಾಗಿ ಹೇಳಬಲ್ಲ, ನಿಂತು, ಓಡಿಸಿ, ರಾಗವಾಗಿಸಿ, ದನಿಯಲ್ಲಿ ದುಃಖವನ್ನು ತಂದು, ಮಣಿಸಿ, ಕುಣಿಸಿ,—ಆ ಹದವು ದೊರಕಿದೆ ಅವನಿಗೆ. ಆ ಮೇಲೆ ಇನ್ನೊಬ್ಬ ಹೆಣ್ಣು ಮಗಳೆದ್ದು ಆಭಾರಮನ್ನಿಸಿದಳು. "Mr. Masefield is the young

man in the story of the locusts" (ಮೋಸ್‌ಫೀಲ್ಡ್ಸನ ಜಟ್ಟಿಯ ಕಥೆಯಲ್ಲಿಯ ತರುಣ ಮನುಷ್ಯನು) (ಎಂಥ ಹುಚ್ಚು ಹೋಲಿಕೆಯಿದು ಜನಸು ನಗುವದೊಂದು ಉಳಿದಿತ್ತು.) "He has given us his genius, his time" (ಅವನು ನಮಗಾಗಿ ತನ್ನ ಪ್ರತಿಭೆ, ಹೊತ್ತು ಕೊಟ್ಟಿರುವನು) ಮುಂತಾಗಿ.

---

## ೨೪

. . . . . . ಆಕ್ಸಫರ್ಡ್

೨೯—೧೧—೩೬

ಇಲ್ಲಿಯ ಅಂಗಡಿಕಾರರ ರೀತಿಗಳು ಮೋಜಿನವು. ಆದಿತ್ಯವಾರ ಯಾವ ಅಂಗಡಿಗಳೂ ತೆರೆದಿರುವದಿಲ್ಲ. ಆದರೆ ದುಡ್ಡನ್ನು ಹೆಚ್ಚಿಗೆ ಅಭಿಲಾಷಿಸುವವರು ತೆರೆದಿಡುತ್ತಾರೆ. ಔಷಧಾಲಯಕ್ಕೆ ಹೋಗಿದ್ದೆ, ನೆಗಡಿಗೆಂದು. "We open on Sunday. The father keeps preaching in the Church and we keep preaching here to the people" (ಆದಿತ್ಯವಾರ ನಾವು ತೆರೆಯುತ್ತೇವೆ. ಪಾದ್ರಿಯು ಚರ್ಚದಲ್ಲಿ ಬೋಧಿಸುತ್ತಾನೆ, ನಾವು ಇಲ್ಲಿ ಜನಕ್ಕೆ ಬೋಧಿಸುತ್ತ ಇರುವೆವು) ಎಂದು ಅಂಗಡಿಕಾರನು ಹೇಳಿದ. ನಿಜವಾದ ಕಾರಣ ಬೇರೆ, ದುಡ್ಡು ಬೇಕು!

* * * *

೧—೧೨—೩೬

ನಿಮ್ಮಲ್ಲಿ 'ಬಕ್ಷೀಸ್' ಎಂಬ ತಿನ್ನುವ ಪಕ್ವಾನ್ನವಿದೆಯಂತೆ, ಹೌದೇನೆಂದು ಒಬ್ಬ ಹುಡುಗ ನನ್ನನ್ನು ಕೇಳಿದ. ಈ ಹುಡುಗನಿಗೆ ಭಾರತೀಯರ ಮೇಲೆ ಮಮತೆ ಬಹಳ. "We lead a mechanical life. Indians are more civilised than ourselves,—in the control of mind and all that" (ನಮ್ಮ ಜೀವನ ಯಾಂತ್ರಿಕ. ನಮಗಿಂತ ಭಾರತೀಯರು ಹೆಚ್ಚು ನಾಗರಿಕರು, ಮನಸ್ಸಿನ ನಿಗ್ರಹ ಮುಂತಾದ್ದರಲ್ಲಿ)

ಎಂದು ಹೇಳುತ್ತಾನೆ. 'ಬಕ್ಷಿಸ್'ದ ಅರ್ಥ 'tips' (ಟಿಪ್ಸ: ಖುಷಿ) ಎಂದು ಹೇಳಿದಾಗ ಅವನಿಗೆ ಆಶ್ಚರ್ಯವಾಯಿತು.

'Punch' (ಪಂಚ) ಎಂಬ ಇಂಗ್ಲಿಷ ಶಬ್ದವು ಇಂಗ್ಲಿಷಲ್ಲವೆಂದು ಇವತ್ತು ಗೊತ್ತಾಯಿತು. ಪೇಯದಲ್ಲಿ ಐದು ಬೇರೆ ಬೇರೆ ಜಿನಸುಗಳನ್ನು ಹಾಕಿ ಕುಡಿಯುವ ಪದ್ಧತಿಯಿದ್ದಿತಂತೆ. ಆದಕ್ಕೆ 'ಪಂಚ' ಎಂಬ ಸಂಸ್ಕೃತ ಅಭಿದಾನವು ಬಂದಿತು. ಹೀಗೆಂದು ಸ್ಕಾಟಲಂಡದಿಂದ ಬಂದ ಒಬ್ಬ ವಿದ್ಯಾರ್ಥಿಯು ಹೇಳಿದ. ಅವನು ಅಲ್ಲಿಯ ವಿಶ್ವವಿದ್ಯಾಲಯದ ಪದವೀಧರನಿದ್ದಾನೆ. ಆದರೆ ನಾನು ಮುಂಬಯಿಂದ ಬಂದಂತೆ 'ಆಕ್ಸಫರ್ಡ' ಡಿಗ್ರಿಯ ಮಹತ್ವವನ್ನು ಸಂಪಾದಿಸುವದಕ್ಕಾಗಿ 'ಎಡಿಸ್ ಬರೋ'ದಿಂದ ಇಲ್ಲಿಗೆ ಬಂದಿದ್ದಾನೆ. ಅಂತೂ 'Punch' (ಪಂಚ ಎಂಬ ವಿಕಟವಿನೋದಿನಿಯು ಆಂಗ್ಲರ ವಿಶಿಷ್ಟಹಾಸ್ಯದ ಪತ್ರಿಕೆಯೆಂದು ಹೇಳುತ್ತಾರೆ. ಆದರೆ ಅದರ ಹೆಸರಿನಲ್ಲಿಯೇ ಸಂಸ್ಕೃತವಿದೆ. ಕೈಲಾಸಂ ಅವರ ಭಾಷೆಯಲ್ಲಿ ಹೇಳುವದಾದರೆ, ಇದೊಂದು 'ಜೋಕು' (ನಗೆಮಾತು)!

*　　*　　*　　*

೨—೧೨—೩೬

ಕಾಲೇಜಿನಲ್ಲಿ ಊಟದ ವಿಚಾರವೊಂದು ಮೋಜಾಗಿರುತ್ತದೆ! ದೊಡ್ಡ ನಡುಮನೆ, 'ಹಾಲು'. ಆದರಲ್ಲಿ ಹದಿನಾರನೇ ಶತಮಾನದಿಂದ ಹಿಡಿದು ಅನೇಕ ಪ್ರಭೃತಿಗಳ ದೊಡ್ಡ ದೊಡ್ಡ ಚಿತ್ರಗಳು ಎಲಿಜಬೆಥ್ ರಾಣಿಯು ಮಧ್ಯೆ; ಆಕೆಯ ಕಾಲದಲ್ಲಿ ನಮ್ಮ ಕಾಲೇಜು ಸುರುವಾಯಿತು. ಹಾಲಿನಲ್ಲಿ ಎಲ್ಲಕ್ಕೂ ಮೇಲಕ್ಕೆ ಪ್ರೊಫೆಸರರ ಟೇಬಲ್ಲು; ಅದರ ಕೆಳಕ್ಕೆ ಸ್ಕಾಲರರದು; ಆ ಕೆಳಗೆ ಉಳಿದವರ ಮೇಜುಗಳು. ಎಲ್ಲರೂ 'ಗಾವುನ್'ನಲ್ಲಿ ಬರಬೇಕು. ಪ್ರೊಫೆಸರರ ಹಾಗು ಉಳಿದವರ 'ಗಾವುನ್'ಗಳು ಉದ್ದವಾಗಿರುತ್ತವೆ. ಉಳಿದವರವು ಬೆನ್ನಿನ ಮಟ್ಟಿಗೆ, ನಾರುಬಟ್ಟೆಯು ಲಂಗೋಟಿಯಾದ ಹಾಗೆ! ಸರಿ. ಗಂಟೆಯಾದ ಕೂಡಲೆ ಎಲ್ಲರೂ ಬರಬೇಕು. ಬಟ್ಲರರು ಹಾದಿ ಕಾಯ್ದುಕೊಂಡು ನಿಂತಿರುತ್ತಾರೆ; ಬಲ್ಲವನು ತನ್ನ ಬಿಳಿಯ ತುರಾಯಿಯನ್ನು ತಲೆಯ ಮೇಲೆ ಅಲ್ಲಾಡಿಸುತ್ತ

ನಿಂತಿರುತ್ತಾನೆ. ಗೋಡೆಯ ಮಗ್ಗುಲಿಗೆ ದೀಪಗಳನ್ನಿಟ್ಟಿರುತ್ತಾರೆ. ಅವು ಕಣ್ಣಿಗೆ ಬೀಳದೆ ಹಗಲಿನಂತೆ ಬೆಳಕನ್ನು ಕೆಡಹುತ್ತವೆ. ಆ ಬೆಳಕು ಬಲ್ಲವನ ಮೇಲೂ ಬೀಳುತ್ತದೆ!

ಎಲ್ಲರೂ ತಮ್ಮ ತಮ್ಮ ಜಾಗದಲ್ಲಿ ನಿಂತಾಗ ಪ್ರೊಫೆಸರರು ಬರುತ್ತಾರೆ. ಅವರು ಬರಲು ಒಂದು ನಿಮಿಷ ತಡವಾದರೆ ಫಟ್ ಫಟ್ ಎಂದು ಹುಡುಗರು 'stamp' (ಸ್ಟ್ಯಾಂಪ-ಸಪ್ಪಳ) ಮಾಡಲು ಸುರುವು ಮಾಡುತ್ತಾರೆ. ಪ್ರೊಫೆಸರನೇನು, ಅರಸನೇನು, ಯಾರೇನು,– ನಿಯಮಾನುಸಾರವಾಗಿ ಇನ್ನೊಬ್ಬರಿಗೆ ತೊಂದರೆ ಕೊಡದೆ ನಡೆಯ ಬೇಕೆಂಬುದೇ ಈ ಕೃತಿಯಲ್ಲಿಯ ಭಾವನೆ. ಪ್ರೊಫೆಸರರು ಬಂದು 'ಫಟ್' ಎಂದು ಮೇಜಿನ ಮೇಲೆ ಪಾತ್ರೆಯನ್ನು ಅಪ್ಪಳಿಸಿದ ಕೂಡಲೆ 'ಥಟ್' ಎಂದು ನಿಯಮಿತನಾದ ಸ್ಕಾಲರನು ಲ್ಯಾಟಿನ್‌ದಲ್ಲಿ 'Grace' (ಗ್ರೇಸ) ಹೇಳುತ್ತಾನೆ. ಅವನು ಅದನ್ನು ಹೇಳುವಾಗ ಎಲ್ಲರಿಗೂ ನಗೆ! ಉಳಿದ ಹುಡುಗರಿಗೂ ಮಧ್ಯಯುಗದ ಲ್ಯಾಟಿನ್ನು ಅರ್ಥವಾಗುವದಿಲ್ಲ! ಅದು ಮುಗಿದ ಮೇಲೆ 'Amen' (ಆಮೆನ್) ಎಂದು ದೊಡ್ಡ ದನಿಯಿಂದ ಒದರಿ ಕೂಡುತ್ತಾರೆ!

ಒಮ್ಮೊಮ್ಮೆ 'sconcing' (ಸ್ಕಾನ್ಸಿಂಗ: ದಂಡ) ನಡೆಯುತ್ತದೆ. ಪ್ರತಿಯೊಂದು ಮೇಜಿಗೆ ಒಬ್ಬೊಬ್ಬ ವಿದ್ಯಾರ್ಥಿಯು ('ಟರ್ಮ' ನಿಂದ ಹಿರಿಯನು) ಮುಖ್ಯಸ್ಥನಾಗಿರುತ್ತಾನೆ. ಆ ಮೇಜಿನ ಮೇಲೆ ವಾಡಿಕೆ ಯಾಗಿ ಊಟ ಮಾಡುವ ವಿದ್ಯಾರ್ಥಿಗಳಲ್ಲಿ ಒಬ್ಬನು ತಡವಾಗಿ ಬಂದರೆ, ಸುರುವಾಯಿತು! ಮುಖ್ಯಸ್ಥನು ಅವನಿಗೆ ಒಂದು ಸಂದೇಶವನ್ನು ಕಳಿಸುತ್ತಾನೆ. "With the compliments of the senior exhibitioner. Will Mr—explain his reasons for being late?" (ಮುಖ್ಯಸ್ಥನ ವಂದನೆಗಳು. ತಡವಾದದ್ದಕ್ಕೆ ಇಂಥವನು ಕಾರಣ ಹೇಳುವನೇ?) ಬಾಯಿಯಿಂದ ಬಾಯಿಗೆ ಹೋಗಿ ಸಂದೇಶವು ಅಪರಾಧಿಗೆ ಮುಟ್ಟುತ್ತದೆ. ಅದಕ್ಕೆ ಉತ್ತರವಾಗಿ ಅವನು ಏನಾದರೂ ಹೇಳುತ್ತಾನೆ. ಅದು ಮುಖ್ಯಸ್ಥನಿಗೆ ಸಮಾಧಾನಕರವಾಗಿ ಕಂಡುಬರದಿದ್ದರೆ "you

are sconced" (ನಿನಗೆ ದಂಡ ಮಾಡಿದೆ) ಎಂದು ಸುದ್ದಿ ಮುಟ್ಟಿಸಿ ಬಟ್ಲರಗೆ "Mr— is sconced" (ಇಂಥವನಿಗೆ ದಂಡವಾಗಿದೆ) ಎಂದು ಹೇಳುತ್ತಾನೆ. ಆಗ ಒಂದು ದೊಡ್ಡ ಬಿಯರ್ (beer) ಪೇಯದ ಪಾತ್ರೆಯು ಬರುತ್ತದೆ. ಅಪರಾಧಿಯು ಅದನ್ನೆಲ್ಲ ಕುಡಿದರೆ ಅದರ ಕಿಮ್ಮತ್ತನ್ನು ಸುತ್ತಲಿನ ಆರು ಮಂದಿ ಕೊಡಬೇಕು. ಅವನಿಂದ ಕುಡಿಯುವದಾಗದಿದ್ದರೆ ಆರು ಮಂದಿ ಕುಡಿಯುವದಕ್ಕೆ ಅವನು ರೊಕ್ಕ ಕೊಡಬೇಕು! ಹೀಗೆ ಕೊಟ್ಟಾಗ, ಅದು ಎಡಗಡೆಯಿಂದ ಹೋಗ ಬೇಕೋ· ಮೇಜಿನ ಗುಂಟವೋ ಇಲ್ಲವೆ ಬಲಗಡೆಗೋ ಎಂಬುದನ್ನು ಮುಖ್ಯಸ್ಥನು ನಿರ್ಣಯಿಸುತ್ತಾನೆ! 'ಟರ್ಮ' ನಿಂದ ಹಿರಿಯನಾದ ವಿದ್ಯಾರ್ಥಿಯು ಕೆಳಗೆ ಕೂತರೆ— ಚಿಕ್ಕವನಾದವನು ಮೇಲಕ್ಕೆ ಕೂತರೆ— ಅವರನ್ನೂ 'sconce' ಮಾಡುತ್ತಾರೆ! ಇಂದು 'complimentary sconcing' ಕಾಂಪ್ಲಿಮೆಂಟರಿ ಸ್ಕೋನ್ಸಿಂಗ! ಜಯಿತು. ಅಂದರೆ ಕಾಲೇಜಿನಿಂದ ಎಲ್ಲರಿಗೂ ಪುಕ್ಕಟೆಯಾಗಿ ಕುಡಿಯಲು ದೊರೆಯಿತು. ಆಗ ಎಲ್ಲರೂ ಚಮಚೆಯಿಂದ ಮೇಜನ್ನು ನಗಾರಿ ಬಾರಿಸಿದಂತೆ ಬಾರಿಸಿದರು!

*　　*　　*　　*

ನಮ್ಮ ಕಾಲೇಜಿನಲ್ಲಿ ಒಬ್ಬ ಸೀಖ್ ಆಯ್. ಸಿ. ಎಸ್. ಪ್ರೊಬೇಶನ ರಿದ್ದಾರೆ. ಇವರು ಸುತ್ತುವ ರುಮಾಲವು ಎಲ್ಲರ ಕಣ್ಣುಮಾಟವಾಗಿದೆ; ಬಿಟ್ಟ ಗಡ್ಡವು ಭವ್ಯವಾಗಿದೆ. ಆದರೂ ಇವರ ವಯಸ್ಸು ಇಪ್ಪತ್ತೆರಡೇ! ಇವರು ಸರಕಾರದಿಂದ 'nominated' (ನಾಮಿನೇಟೇಡ್) ಇಲ್ಲವೆ ನಿಯಮಿಸಲ್ಪಟ್ಟವರು. ಒಂದೆರಡು ಸಲ ನಾನು ಮಾತನಾಡಿಸಲು ಯತ್ನಿಸಿದೆ. ಆಗ ಮೂಗು ಮುರಿದರು. ಮುಂದೆ ನಾನು ಕಣ್ಣೆತ್ತಿ ನೋಡಲಿಲ್ಲ. ಪಶ್ಚಾತ್ತಾಪವಾಗಿರಬೇಕು; ಮುಂದೊಮ್ಮೆ ಬಂದು ತಾವಾಗಿಯೇ ಮಾತನಾಡಿಸಿದರು! ಪಂಜಾಬದ ಅಭಿಮಾನ ಬಹಳ ಇವರಿಗೆ. 'ಮುಂಬಯಿ ವಿದ್ಯಾರ್ಥಿಗಳೆಂದರೆ ಇವರ ಕಣ್ಣಲ್ಲಿ ಕಃಪದಾರ್ಥ. "Every educated Indian is bilingual. He knows his mother-

tongue and he knows English" (ಪ್ರತಿಯೊಬ್ಬ ಕಲಿತ ಭಾರತೀಯ ನಿಗೆ ಎರಡು ಭಾಷೆ ಬರುತ್ತವೆ, ಅವನ ಮಾತೃಭಾಷೆ ಹಾಗೂ ಇಂಗ್ಲಿಶ್.) ಎಂದು ಎಲ್ಲರೆದುರಿಗೆ ಹೇಳುತ್ತ ತಿರುಗಾಡುತ್ತಾರೆ. ಪಂಜಾಬದವರಂತೆ ಇನ್ನಾರಿಗೂ ಇಂಗ್ಲಿಷು ಮಾತನಾಡಲು ಬರುವದಿಲ್ಲವೆಂದು ಇವರ ಅಭಿಪ್ರಾಯ!

* * * *

ಪ್ರೊ. ರೆನ್ ಅವರು ಇಂದು ಹೇಳುತ್ತಿದ್ದರು: ಮದ್ರಾಸು ವಿಶ್ವವಿದ್ಯಾಲಯದಲ್ಲಿ 'Motto' (ಮೋಟ್ಟೊ—ಆದರ್ಶವಾಕ್ಯ) ಏನಿರ ಬೇಕೆಂಬುದರ ಬಗ್ಗೆ ಒಮ್ಮೆ ಚರ್ಚೆಗೆ ಪ್ರಾರಂಭವಾಗಿತ್ತಂತೆ. ಹಿಂದೂ ಸದಸ್ಯರು ಸಂಸ್ಕೃತದಲ್ಲಿರಬೇಕೆಂದರು; ಮುಹಮ್ಮದೀಯರು 'ಅರಬ್ಬಿ' ಯಲ್ಲಿಯೆಂದರು. ಆಗ "God help us" (ದೇವರು ನಮ್ಮನ್ನು ಕಾಪಾಡಲಿ!) ಎಂಬುದೇ motto (ಮೋಟ್ಟೋ) ಇರಲೆಂದು ಇವರು ಸೂಚಿಸಿದರಂತೆ!

---

## ೨೫

...... ಆಕ್ಸಫರ್ಡ್
೩—೧೨—೩೬

"That this House would support a measure under which separation, whether voluntory or judicial, should mature into divorce at the end of three years on the petition of either spouse." (ದಂಪತಿಗಳಲ್ಲಿ ಒಬ್ಬರ ಅರ್ಜಿಯ ಮೇಲಿಂದ ಸ್ವಸಂತೋಷದ ಅಥವಾ ನ್ಯಾಯಸಮ್ಮತವಾದ ಅಗಲಿಕೆಯು ತಾನಾಗಿಯೇ ಮೂರು ವರ್ಷಗಳ ಕೊನೆಗೆ ಬಿಡುಗಡೆ (ಡಾಯವ್ಹೋರ್ಸ) ಯಲ್ಲಿ ಪರಿಣಮಿಸು ವಂಥ ಕಟ್ಟಳೆಯನ್ನು ಈ ಸಭೆಯು ಅನುಮೋದಿಸುತ್ತದೆ.) ಇದು

ಇಂದಿನ ಯೂನಿಯನ್‌ದಲ್ಲಿಯ ಚರ್ಚೆಯ ವಿಷಯ. ಲ್ಯೂವಿನ್ ಎಂಬ ವಿದ್ಯಾರ್ಥಿಯು ಪ್ರತಿಪಾದಿಸಿದನು. ಒಳ್ಳೇ ಜೋರಿಗೆ ಬಂದು "You future wives and mothers of England!" (ಇಂಗ್ಲಂಡದ ಮುಂದಿನ ಹೆಂಡಂದಿರೇ ಮತ್ತು ತಾಯಂದಿರೇ) ಎಂದು ಉದ್ಗಾರ ತೆಗೆದಾಗ ಅಧ್ಯಕ್ಷರು ಒಮ್ಮೆಲೆ ಎದ್ದು "You need not address us like that sir" (ನೀವು ಹಾಗೆ ನಮ್ಮನ್ನು ಕರೆಯಬಾರದು) ಎಂದು ಹೇಳಿದರು. ಎಲ್ಲರೂ ಬಿದ್ದು ಬಿದ್ದು ನಕ್ಕರು. ಲ್ಯೂವಿನ್ನನು ಸುಮ್ಮನಿದ್ದ. ಎಲ್ಲರೂ ನಗುವದಾದ ಮೇಲೆ: "If in this House there were a gallery and if in the gallery there were a ring of young women and if, under the rules, the president would permit me to address them, I would say,— well sir!" (ಈ ಸಭೆಯಲ್ಲಿ ಗ್ಯಾಲರಿಯೊಂದಿದ್ದರೆ, ಅದರಲ್ಲಿ ಹೆಂಗಸರ ತಂಡವೊಂದಿದ್ದರೆ, ಅವರನ್ನು ಕುರಿತು ಕರೆಯಲಿಕ್ಕೆ ನಿಯಮಗಳ ಮೇರೆಗೆ ಅಧ್ಯಕ್ಷರು ಅಪ್ಪಣೆಕೊಟ್ಟರೆ ನಾನು ಅನ್ನಬಹುದು—ಸರಿ, ಮಹನೀಯರೆ) ಎಂದು ಅಧ್ಯಕ್ಷರ ಕಡೆಗೆ ತಿರುಗಿ ನೋಡಿದ. ಈಗ ಎಲ್ಲರೂ ಅವ**ನೊಡನೆ** ನಕ್ಕರು! ವಿದ್ಯಾರ್ಥಿನಿಯರು ಯೂನಿಯನ್ನದ ಸದಸ್ಯರಾಗಲಾರರು. ಅವರಿಗೆ ಗ್ಯಾಲರಿಯಲ್ಲಿ ಮಾತ್ರ ಪ್ರವೇಶವಿದೆ. ಇದಕ್ಕಾಗಿ ಎಲ್ಲ ವಿದ್ಯಾರ್ಥಿನಿಯರೂ ಸಿಟ್ಟುಬೆಂಕಿ! ಇಂದಿನ ಸಭೆಯು 'ಕೌಟುಂಬಿಕ' ವಿದ್ದುದರಿಂದ ಊರಲ್ಲಿಯ ಮುದುಕ-ಮುದುಕಿಯರೂ ಗೃಹಸ್ಥ-ಗೃಹಿಣಿಯರೂ ಸಹ ಬಂದು ಗ್ಯಾಲರಿಯಲ್ಲಿ ಕುಳಿತಿದ್ದರು.

ಅಲ್ಲದೆ ಈ ವಿಷಯದ ಮೇಲೆ ಮಾತನಾಡಲು ಇಂದು ಈರ್ವರು ವಿದ್ಯಾರ್ಥಿನಿಯರನ್ನು ಆಮಂತ್ರಿಸಿತ್ತು. ಮಿಸ್. ಸಾಂಡೆಲ್ ಎಂಬಾಕೆಯು ಲ್ಯೂವಿನ್ನನನ್ನು ವಿರೋಧಿಸಿದಳು. ಲ್ಯೂವಿನ್ನನ ಹೆಸರನ್ನು ಮರೆತು ಒಂದೆರಡು ಸಲ ಅಧ್ಯಕ್ಷರನ್ನು "What is his name, Mr. President?" (ಅವರ ಹೆಸರೇನು, ಅಧ್ಯಕ್ಷರೇ) ಎಂದು ಕೇಳಿದಳು. ಆಗ ಹತ್ತಿರ ಕುಳಿತ ಸದಸ್ಯನೊಬ್ಬನು ಸಭೆಯ ಹಸ್ತಪತ್ರಿಕೆಯನ್ನು ಆಕೆಗೆ

ಕಾಣಿಕೆಯಾಗಿ ಕೊಟ್ಟನು. ಎಲ್ಲರೂ ಖೊಳ್ಳನೆ ನಕ್ಕರು. ಲ್ಯೂವಿನ್ನನ ವಿಷಯಕ್ಕೆ ಮಾತನಾಡುತ್ತ "His speech was so full of cracks that the edifice was in the danger of falling down" (ಅವನ ಭಾಷಣವು ಇಷ್ಟು ಬಿರುಕುಗಳಿಂದ ಕೂಡಿತ್ತಲ್ಲ, ಕಟ್ಟಡವೆ ಬೀಳುವ ಭಯವಿತ್ತು) ಎಂದು ಹೇಳಿದಳು. ಮುಂದೊಮ್ಮೆ ಅಧ್ಯಕ್ಷರನ್ನು ಸಂಬೋಧಿಸದೆ ಆಕೆಯು, ಲೂವಿನ್ನನನ್ನು ಸಂಬೋಧಿಸಿದಾಗ ಒಬ್ಬ ಸದಸ್ಯನು 'point of order' (ಪಾಯಿಂಟ ಆಫ ಆರ್ಡರ) ನ್ನು ಎತ್ತಲು ಅಧ್ಯಕ್ಷರು "you are proving provocative both to her and to me" (ನೀನು ನನ್ನನ್ನೂ ಆಕೆಯನ್ನೂ ಕೂಡಿಯೇ ಕೆರಳಿಸುತ್ತಿರುವಿ) ಎಂದು ಅವನನ್ನು ಸುಮ್ಮನಾಗಿಸಲು ಪ್ರಯತ್ನಿಸಿದರು. ಆಗ ಆಕೆಯು ರೇಗಿಗೆದ್ದು: "No, Mr. President, I stand corrected. Thanks to the wel-known anti-feminism of this House, we are not familiar with its habits" (ಇಲ್ಲ ಅಧ್ಯಕ್ಷರೇ, ನಾನು ತಿದ್ದುಪಡಿಗೆ ಸಿದ್ಧಳಿರುವೆ. ಈ ಸಭೆಯ ಸ್ತ್ರೀ ವಿರೋಧದ ಪುಣ್ಯದಿಂದ, ಈ ಸಭೆಯ ರೂಢಿ ನಮಗೆ ಗೊತ್ತಿಲ್ಲ ( ಎಂದು ಹೇಳಿದಳು. ಬಿಡುಗಡೆಯ ವಿರುದ್ಧ ಚೆನ್ನಾಗಿ ಮಾತನಾಡಿದಳು. ಒಳ್ಳೆಯ ಮನೆತನದ ಸುಶೀಲ 'ಸನಾತನಿ' ಹೆಣ್ಣುಮಗಳಂತೆ ಕಂಡಳು. ಅವಳ ಉಡುಪು ಸಹ ಅದೇ ಬಗೆಯದಿತ್ತು. ಕೆಲಕೆಲವು ಸಲ ಅಸಂಬದ್ಧವಾದ ಮಾತಿತ್ತು. 'Scandinavia (ಸ್ಕ್ಯಾಂಡಿನೇವ್ಹಿಯಾ) ದೇಶದಲ್ಲಿ ಘಟಸ್ಫೋಟಗಳು ಅಷ್ಟಿಲ್ಲವೆಂದು ಹೇಳುವದಕ್ಕೆ ಹೀಗೆ ಕಾರಣಗಳನ್ನು ತೋರಿಸಿದಳು: "It is an agricultural country. There the farmer, after a hard day's work, is more in need of an easy chair than—than—than—any other form of amusement." (ಅದು ಒಕ್ಕಲತನದ ದೇಶ, ಅಲ್ಲಿ ಒಕ್ಕಲಿಗನಿಗೆ ಬೇರೆ ಯಾವ ವಿನೋದಕ್ಕಿಂತ ದಿನದ ದುಡಿತದ ನಂತರ ಆರಾಮು ಖುರ್ಚಿಯು ಬೇಕಾಗುತ್ತದೆ.)

ಪ್ರತಿಪಾದಕನನ್ನು ಮಿಸ್. ಹ್ಯಾರಿಸನ್ ಎಂಬಾಕೆಯು ಅನುಮೋದಿಸಿದಳು. ಈಕೆ ಸುಧಾರಕಳು. 'ಗಂಡುರಾಮಿ' ಎನ್ನುತ್ತಾರಲ್ಲ,

ಅಂಥ ಹೆಣ್ಣುಮಗಳು. ಇವಳ ಪರಿಚಯವನ್ನು ಮಾಡಿಕೊಡುವಾಗ ಪ್ರತಿಪಾದಕನು "There is no member of the house to whom she is an introduction" (ಇಲ್ಲಿಯ ಯಾವ ಸಭಿಕರಿಗೂ ಅವಳು ಅಪರಿಚಿತಳಿಲ್ಲ) ಎಂದು ವ್ಯಂಗ್ಯೋಕ್ತಿಯಾಡಿದ್ದನು. ಅದಕ್ಕೆ ಎಲ್ಲರೂ ನಕ್ಕರು. ಆಕೆಯೂ ನಕ್ಕಿದ್ದಳು. ಆಕೆಯ ವೇಷವೂ ಇಲ್ಲಿಯ ಝೋಕಿನ ಶಿಖರವನ್ನು ಮುಟ್ಟಿತ್ತು. ಆಂಗ್ಲರ ಉಡಿಗೆಯೆಂದರೇ ಅರ್ಧಮರ್ಧ ದಿಗಂಬರವೆಂಬ ಕಲ್ಪನೆಯು ಸಾಮಾನ್ಯವಾಗಿ ಇದ್ದೇ ಇದೆ. ಈಕೆಯದು ದಿಗ-ದಿಗಂಬರವಾಗಿತ್ತು. ಒಂದು ಕರಿಯ ಪೋಲಕ, ಅದಕ್ಕೆ ಹೊಂದಿಕೊಂಡು ನಿಂತ ಮೊಳಕಾಲುದ್ದ ಪರಕಾರ. ಕರಿಪೋಲಕದ ಮೇಲೆ ಎಡಗಡೆಗೆ ಒಂದು ದೊಡ್ಡ ಬಿಳಿ ಹೂ, 'ಲಿಲಿ'. ಆಕೆಯ ತುಟಿಗಾದರೋ 'ಚಿಲಿ' (Chilly) ಮೆಣಸಿನಕಾಯಿಯಂಥ ಬಣ್ಣ. ವಿಚಿತ್ರ ವ್ಯಕ್ತಿ. ಗ್ರಸ್ತ ಚಂದ್ರನು ಸಹ ಈಕೆಯ ಮೋರೆಗಿಂತ ಹೆಚ್ಚು ಮಾಸಿರಲಾರ! ಪ್ರಾಣಿಯು ಎದ್ದು ನಿಂತು ಬಲು ಆವೇಶದಿಂದ ಮಾತನಾಡಿದಳು. "When we invite some members of the Union to the Ladies' Association, they begin speaking with addressing our president "Mr. President, sir." Now I have my revenge. And I address you "Madam. President." (ಯೂನಿಯನ್ನದ ಸದಸ್ಯರನ್ನು ನಾವು ಸ್ತ್ರೀಸಂಘಕ್ಕೆ ಕರೆದಾಗ ಅವರು ನಮ್ಮಲ್ಲಿಯ ಅಧ್ಯಕ್ಷರಿಗೆ ಮಿಸ್ಟರ್ ಎಂದು ಆರಂಭಿಸುವರು. ಈಗ ನಾನು ಸೇಡು ತೀರಿಸುವೆ. ನಾನು ನಿಮ್ಮ ಅಧ್ಯಕ್ಷರನ್ನು 'ಮ್ಯಾಡಂ ಪ್ರೆಸಿಡೆಂಟ್' ಎಂದು ಕರೆಯುತ್ತೇನೆ) ಎಲ್ಲರೂ ನಕ್ಕರು. ಆ ಮೇಲೆ "there is plenty of under-hand sex-intrigue." (ಒಳಒಳಗಿನ ಕಾಮುಕಾರಸ್ಥಾನವು ಬಹಳ ಇದೆ.) ಅದಕ್ಕಿಂತ ಘಟಸ್ಫೋಟವೇ ಉತ್ತಮವೆಂದು ಆಕೆ ತನ್ನ ವಿಚಾರವನ್ನು ಮುಂಡಿಸಿದಳು.

ಆ ಮೇಲೆ ಡಾ. ಸದರ್ಲಂಡ್ ಎಂಬ ಆಮಂತ್ರಿತ ವಿದ್ವಾಂಸರು ಮಾತನಾಡಿದರು. ಇವರು "The Arches of the years" (ದಿ ಆರ್ಚಿಸ್

ಆಫ್ ದಿ ಯಿರಾರ್ಸ್) ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಇಲ್ಲಿಯ ವೈದ್ಯಶಾಸ್ತ್ರದ ಜಗತ್ತಿನಲ್ಲಿ ಹೆಸರಾದವರು. ಇವರು ಬಿಡುಗಡೆ ಅಂದರೆ ಘಟಸ್ಫೋಟವು ಬೇಡವೆಂದು ಹೇಳಿದರು. "I am pained to know that the titular leaders of my profession are advocating birth-control, abrotion, sterilisation. To kill life is the greatest of sins...... the population of England is now going down by 60% every year." (ನನ್ನ ಉದ್ಯೋಗದಲ್ಲಿಯ ನಾಮಧಾರಿ ಮುಂದಾಳುಗಳು ಸಂತತಿ-ಸಂಯಮ, ಗರ್ಭಪಾತನ, ನಿಸ್ಸಂತಾನ ಇವುಗಳನ್ನು ಬೋಧಿಸುವರೆಂದು ತಿಳಿದು ನನಗೆ ಖೇದವಾಗಿದೆ. ಪ್ರಾಣವನ್ನು ಕೊಲ್ಲುವದೆಂದರೆ ಬಹಳ ಹೆಚ್ಚಿನ ಪಾಪವಾಗಿದೆ. . . ಪ್ರತಿವರುಷ ಇಂಗ್ಲಂಡದ ಜನಸಂಖ್ಯೆಯು ೧೦೦ಕ್ಕೆ ೬೦ ರಂತೆ ಕೆಳಗೆ ಹೋಗುತ್ತಿದೆ.) ಮುಂತಾಗಿ ಭಾವನಾಮಯವಾಗಿ ಮಾತನಾಡಿದರು. "It is now the unmarried who tell the married how to manage their husbands, their children,- and everything" (ಈಗ ಗಂಡಂದಿರನ್ನೂ ಮಕ್ಕಳನ್ನೂ ಹೇಗೆ ನಡೆಸಿಕೊಳ್ಳಬೇಕೆಂದು ಅವಿವಾಹಿತರು ವಿವಾಹಿತರಿಗೆ ಹೇಳುತ್ತಾರೆ) ಎಂದು ಮಿಸ್. ಹ್ಯಾರಿಸನ್ನಳನ್ನು ಟೀಕಿಸಿದರು.

---

## ೨೬

......

ಆಕ್ಸಫರ್ಡ

೪—೧೨—೩೬

ಈಗ ಮಿಸೆಸ್. ಟರ್ನರಳಿಗೆ ಒಳ್ಳೇ ಹುರುಪು. ನೆರೆಹೊರೆಯವರ ಸಂಗಡ ಆಕೆ ಅಷ್ಟು ಮಾತನಾಡುವದಿಲ್ಲ. "They always discuss business. They want to know how students always come to me. But I want some one to talk to. Otherwise I would forget how to talk" (ಅವರು ಯಾವಾಗಲೂ ವ್ಯವಹಾರ ಹಚ್ಚುತ್ತಾರೆ. ವಿದ್ಯಾರ್ಥಿಗಳು ನನ್ನ ಕಡೆ ಯಾಕೆ ಬರುತ್ತಾರೆಂದು ಅವರು ತಿಳಿಯಬೇಕೆನ್ನುವರು. ಆದರೆ ಕೂಡಿಸಿಕೊಂಡು ಮಾತಾಡಲಿಕ್ಕೆ ಒಬ್ಬರು ಬೇಕು ನನಗೆ. ಇಲ್ಲದಿದ್ದರೆ ನಾನು ಮಾತಾಡುವದನ್ನೆ ಮರೆತೇನು.) ಎಂದು ಹೇಳುತ್ತಾಳೆ! ರೇಡಿಯೋದ ಮೇಲೆ ಸುದ್ದಿಯನ್ನು ಕೇಳಲು ಬಲು ಹುರುಪು ಈಕೆಗೆ. ಅಡಿಗೆಯ ಮನೆಯಲ್ಲಿ ಅದು ಯಾವಾಗಲೂ ನಡೆದಿರುತ್ತದೆ. ಮೊನ್ನೆ ಓಡುತ್ತ ಬಂದು ನನ್ನ ಕೋಣೆಯ ಬಾಗಿಲು ಬಡೆದಳು. "ಏನಾಯಿತು?" ಎಂದು ನಾನು ತುಸು ಗಾಬರಿಯಾಗಿ ಕೇಳಿದೆ. "I heard it on the wireless. The Crystal Palace is burned down. They could see the flames for fifty miles around." (ಗಾಳಿಯಂಚೆಯಿಂದ ನಾನು ಕೇಳಿದೆ. ಕ್ರಿಸ್ಟಲ್ ಅರಮನೆ ಸುಟ್ಟು ಹೋಯಿತು. ಸುತ್ತು ೫೦ ಮೈಲುಗಳವರೆಗೆ ಉರಿ ಕಾಣುತ್ತಿದ್ದಿತಂತೆ) ಎಂದು ಹೇಳಿ ಹತ್ತಿರದ ಕೋಣೆಯಲ್ಲಿದ್ದ ಇನ್ನೊಬ್ಬರಿಗೆ ಸುದ್ದಿಯನ್ನು ಬೀರಲು ಓಡಿದಳು.

ಮುಂದೆ—ಅಂದರೆ ಮೊನ್ನೆಯಿಂದ—ಸಮ್ರಾಟ ಹಾಗು ಮಿಸೆಸ್. ಸಿಂಪ್ಸನ್ನರ ವಿಷಯವು ಪ್ರಪಂಚದಲ್ಲೆಲ್ಲ ಹಬ್ಬಿದೆ. ಸಮ್ರಾಟರು

ಮಿಸೆಸ್. ಸಿಂಪ್ಸನ್ ಎಂಬ ಅಮೇರಿಕನ್ ತರುಣಿ (ಈಕೆ ಲಂಡನ್ನಿನಲ್ಲಿ ಇದ್ದಾಳೆ)ಯನ್ನು ಲಗ್ನವಾಗಬೇಕೆನ್ನುತ್ತಾರೆ. ಈಕೆಯ ಮೊದಲಿನ ಇಬ್ಬರು ಗಂಡಂದಿರು ಇನ್ನೂ ಇದ್ದಾರೆ. ಈಗ ಎಲ್ಲ ಕಡೆಗೆ ಇದೇ ವಿಷಯದ ಚರ್ಚೆ. ಕಾಲೇಜಿನಲ್ಲಿ ಕೆಲವು ವಿದ್ಯಾರ್ಥಿಗಳು: "Damn it all! why should not the king marry a commoner? The other kings had their mistresses! A few days back there was the burning of the Crystal Palace. If it goes on like this, no one will atlend to foreign politics" (ಹಾಳಾಗಲಿ! ಯಾಕೆ ಅರಸನು ಒಬ್ಬ ಸಾಮಾನ್ಯಳನ್ನು ಮದುವೆಯಾಗಬಾರದು? ಉಳಿದ ಅರಸರಿಗೆ ವೇಶ್ಯೆಯರು ಇದ್ದರು! ಕೆಲವು ದಿನಗಳ ಹಿಂದೆ ಕ್ರಿಸ್ಟಲ್ ಪ್ಯಾಲೇಸು ಸುಡುವದಾಯಿತು. ಇದು ಹೀಗೇ ನಡೆದರೆ, ಪರದೇಶ ರಾಜಕಾರಣಕ್ಕೆ ಯಾರೂ ಲಕ್ಷ್ಯಕೊಡುವದಿಲ್ಲ) ಎಂದು ಮಾತನಾಡುತ್ತಿದ್ದರು. (ಕ್ರಿಸ್ಟಲ್ ಪ್ಯಾಲೇಸ್ ಎಂದರೆ ಕಾಜಿನ ಅರಮನೆ. ವ್ಹಿಕ್ಟೋರಿಯಾ ರಾಣಿಯ ಕಾಲಕ್ಕೆ ಒಂದು ದೊಡ್ಡ Exhibition (ಪ್ರದರ್ಶನ)ದ ಸಲುವಾಗಿ ಇದರ ರಚನೆಯಾಗಿತ್ತು.)

ಮಿಸೆಸ್. ಟರ್ನರಳ ಹೃದಯದಲ್ಲಿ ಈ ಸುದ್ದಿಯಿಂದ ಕಲಮಲ ವೆದ್ದಿದೆ. ಆಕೆ ತನ್ನ ಮನೆಗೆ ಬರುವ ಅಂಗಡಿಕಾರನನ್ನು ಈ ವಿಷಯವಾಗಿ ಕೇಳಿದಳಂತೆ. ಅವನು "Kingie is no longer mine. I will no more say 'God save the king'. Third-hand, at any rate!" (ಈ ಅರಸನು ಇನ್ನುಮೇಲೆ ನನ್ನವನಲ್ಲ. ನಾನಿನ್ನು ಎಂದಿಗೂ 'ದೇವರು ರಾಜನನ್ನು ಕಾಯಲಿ' ಎನ್ನುವದಿಲ್ಲ. ಎಷ್ಟಾದರೂ ಆವಳದು ಮೂರನೆಯ ಮದುವೆ) ಎಂದು ಹೇಳಿದನಂತೆ! ನಿನ್ನ ಅಭಿಪ್ರಾಯವೇನಿದೆ? ಎಂದು ನಾನು ಕೇಳಿದೆ. "Do you know, my sister would not believe when some one told her that the Prince of Wales swore like the rest of us. What will she say now? .. I wonder what all the high duchesses are thinking of it... The king is the first gentleman in the land. What shall the

people do if he sets such an example? Mrs. Simpson can never be the queen of England. And I am sure millions of people in England think like me. Mrs. Simpson is a fascinating woman. She is a villain. I can tell it in her face." ( ನಿನಗೆ ಗೊತ್ತಿದೆಯೇ? ಪ್ರಿನ್ಸ್ ಆಫ್ ವೇಲ್ಸ್‌ನು ನಮ್ಮೆಲ್ಲರಂತೆ ಆಣೆ ಮಾಡಿದನೆಂದು ಯಾರೋ ಹೇಳಿದಾಗ ನನ್ನ ತಂಗಿ ನಂಬಲೊಲ್ಲಳು. ಈಗ ಅವಳೇನು ಅನ್ನುವಳೋ? ಎಲ್ಲಾ ಗೌರವಸ್ಥ ಡ್ಯೂಕ ಹೆಂಡಂದಿರು ಈ ಬಗ್ಗೆ ಏನೆಂದು ಯೋಚಿಸುತ್ತಿರುವರೋ ನಾನರಿಯೆ. ದೇಶದಲ್ಲಿ ಅರಸನೆಂದರೆ ಮಾದರಿಯ ಮನುಷ್ಯ. ಅವನೇ ಇಂಥ ಮಾದರಿ ಹಾಕಿಕೊಟ್ಟರೆ ಜನರೇನು ಮಾಡಲಿಕ್ಕಿಲ್ಲ? ಮಿಸೆಸ್. ಸಿಂಪ್ಸನ್ನಳೆಂದಿಗೂ ಇಂಗ್ಲೆಂಡಿನ ರಾಣಿಯಾಗಲಾರಳು. ಇಂಗ್ಲಂಡದಲ್ಲಿ ನನ್ನಂತೆ ತಿಳಿಯುವ ಜನ ಕೋಟ್ಯಾವಧಿಯೆಂದು ನನ್ನ ಖಾತ್ರಿಯಿದೆ. ಮಿಸೆಸ್. ಸಿಂಪ್ಸನ್ನಳು ಮೋಹಕ ಹೆಂಗಸು, ಅವಳು ದುಷ್ಟಳು. ಇದನ್ನು ಅವಳ ಎದುರಿನಲ್ಲಿಯೇ ನಾನು ಹೇಳಬಲ್ಲೆ ( ಎಂದು ತನ್ನ ಕಥೆ ಸುರುವು ಮಾಡಿದಳು. 'fascinating woman' ) ಮೋಹಕ ಹೆಂಗಸು ( ಎಂದರೆ ಎಂಥವಳೆಂಬುದನ್ನು ತಿಳಿಸಲು ತನಗೆ ಗೊತ್ತಿದ್ದ ಇಬ್ಬರು ಹೆಣ್ಣುಮಕ್ಕಳ ಚರಿತ್ರವನ್ನು ಹೇಳಿದಳು : "They fascinate both men and women" ( ಅಂಥ ಹೆಂಗಸರು ಗಂಡು-ಹೆಣ್ಣು ಕೂಡಿಯೇ ಮೋಹಿಸುತ್ತಾರೆ ) ಎಂದು ಉದ್ಗಾರ ತೆಗೆದಳು !

* * * *

೫—೧೨—೩೬

ಈ ವಾರದಲ್ಲಿ ನಾನು ಎರಡು ನಾಟಕಗಳನ್ನು ನೋಡಿದೆ. ಮೊದಲನೆಯದು "The Nativity Play" ( ನೇಟಿವ್ಹಿಟಿ ನಾಟಕ–ಕ್ರಿಸ್ತ ಜನ್ಮ ನಾಟಕ ) ಇನ್ನೊಂದು 'Noel Coward' ( ನೋಯಲ್ ಕಾವರ್ಡ ) ಎಂಬ ಪ್ರಸಿದ್ಧ ನಾಟಕಕಾರನು ಬರೆದ "Private Lives" ( ಪ್ರಾಯವ್ಹೇಟ ಲಾಯವ್ಹಜ–ಖಾಸಗಿ ಜೀವನ ) ಎಂಬ ಸುಕುಮಾರ ಪ್ರಯೋಗ. ಈ ಕೃತಿಗಳ ಬಗ್ಗೆ ಇನ್ನೊಂದು ಪತ್ರದಲ್ಲಿ ಬರೆದಿದ್ದೇನೆ.

## ೨೭

. . . . . .

ಲಂಡನ್

೬—೧೨—೩೬

ನನ್ನ ಹಿಂದಿನ ಒಂದು ಪತ್ರದಲ್ಲಿ 'The Indian year Book' (ಹಿಂದುಸ್ಥಾನದ ವಾರ್ಷಿಕ ವರದಿ)ನ್ನು ಹಿಡಿದುಕೊಂಡು ಹಡಗದ ಮೇಲೆ ತಿರುಗಾಡುವ ಹುಡುಗನ ವಿಷಯವನ್ನು ಕಾಣಿಸಿದ್ದೆ. ಅವನು ಈಗ ಲಂಡನ್ನಿನಲ್ಲಿ ಇದ್ದಾನೆ. ಎರಡು ತಿಂಗಳಲ್ಲಿ 'ಕೀರ್ತಿ'ಯನ್ನು ಗಳಿಸಿದ್ದಾನೆ! ಕೆಲವು ದಿವಸಗಳ ಹಿಂದೆ ಇಲ್ಲಿ ಕಲಿಯಲು ಬಂದ ಒಬ್ಬ ಭಾರತೀಯ ತರುಣಿಯನ್ನು ಕರೆದುಕೊಂಡು ಅವನು ತಿರುಗಾಡಲು ನಡೆದನಂತೆ. ಪಾಪ! ಇವನು ಒಳ್ಳೆಯ ಮನಸ್ಸಿನವನೆಂದು ಆ ಹುಡಿಗೆ ತಿಳಿದಿದ್ದಳು. ಲಂಡನ್ನಿನಲ್ಲಿ ತಿರುಗಾಡಿ ಗೊತ್ತಿದ್ದಿಲ್ಲ. "School of Oriental study" (ಪ್ರಾಚ್ಯ ಅಭ್ಯಾಸದ ಶಾಲೆ)ಯಲ್ಲಿ ಆಕೆ ಓದುತ್ತಿದ್ದಳು. ಅದನ್ನು ತೋರಿಸುವೆನೆಂದು ಇವನು ಅವಳನ್ನು ಕರೆದುಕೊಂಡು ನಡೆದ. 'School' (ಶಾಲೆ)ಗೆ ಹೋಗದೆ 'Hyde Park' (ಹಾಯಿಡ ಪಾರ್ಕ)ಗೆ ಹೋದ. 'Hyde Park' (ಹಾಯಿಡ ಪಾರ್ಕ) ಎಂದರೆ ಹೋಳಿ ಹುಣ್ಣಿಮೆಯು ವರ್ಷದಲ್ಲಿ ಹನ್ನೆರಡು ತಿಂಗಳು ನಡೆಯುವ ಸ್ಥಳ. ಆಂಗ್ಲ ದೇಶದ ಕಾಮ-ರತಿಯರು ಇಲ್ಲಿ ಸಮಾಧಿಯಲ್ಲಿ ಮುಳುಗುತ್ತಾರೆ. ಅಲ್ಲಿಗೆ ಕರೆದುಕೊಂಡು ಹೋಗಿ "While in England we must do as the English man does" (ಇಂಗ್ಲಂಡದಲ್ಲಿ ಇದ್ದಾಗ ನಾವು ಇಂಗ್ಲಿಶರಂತೆ ಮಾಡಬೇಕು) ಎಂದು ಅವನು ಅವಳೊಡನೆ ಚೇಷ್ಟೆ ಮಾಡಹತ್ತಿದ. ಹುಡಿಗೆ ಗಾಬರಿಯಾದಳು. ಮುಂದೆ ಆಕೆಯನ್ನು

ಬಲಾತ್ಕರಿಸಿದ. ಅಂದು ರಾತ್ರಿ ಆ ಹುಡಿಗೆ ಅಳುತ್ತ ಇಲ್ಲಿದ್ದ ತನ್ನ ಆಪ್ತರ ಕಡೆಗೆ ಹೋದಳು. "Simply because I am a girl and because I am weak, I have to suffer these things also" (ನಾನು ಹುಡಿಗೆಯೆಂದೂ ದುರ್ಬಲಳೆಂದೂ ಹೀಗೆ ಗೋಳಾಡಬೇಕು) ಎಂದು ಆ ಹುಡಿಗೆಯು ಕಣ್ಣೀರು ಸುರಿಸಿದಳು.

*　　　*　　　*　　　*

ಇಲ್ಲಿ ಭಾರತೀಯ ವಿದ್ಯಾರ್ಥಿಗಳಿರುವ 'ಬೋರ್ಡಿಂಗ್' ಮನೆಗಳು ಅನೇಕವಾಗಿವೆ. ಕೆಲವು ಭಾರತೀಯರಿಂದ ನಡೆಸಲ್ಪಡುತ್ತಿವೆ, ಕೆಲವು ಆಂಗ್ಲ ತರುಣಿಯರಿಂದ. ಆಂಗ್ಲ ತರುಣಿಯೊರ್ವಳು ನಡೆಯಿಸುವ 'ಬೋರ್ಡಿಂಗ್ ಹೌಸಿ'ನ ಸ್ಥಿತಿಯು ವಿಚಿತ್ರವಾಗಿದೆ. ದಕ್ಷಿಣ ಆಫ್ರಿಕೆಯಿಂದ ಬಂದ ಒಬ್ಬಿಬ್ಬ ಜೂಜುಗಾರರು ಇಲ್ಲಿ ಮನೆಮಾಡಿಕೊಂಡಿದ್ದಾರೆ. 'ಬಾರ್' ಅಭ್ಯಾಸವನ್ನು ಮಾಡುವ ಅನೇಕ ಭಾರತೀಯ ತರುಣರೂ ಇದ್ದಾರೆ. ಒಬ್ಬನು ಬೋರ್ಡಿಂಗಿನ ಮಾಲಕಳ ದಾಸಾನುದಾಸನಾಗಿದ್ದಾನೆ. ಆಕೆಯ ಬಲೆಯಲ್ಲಿ ಸಿಕ್ಕು ಬಿದ್ದಿದ್ದಾನೆ. ಸಾವಿರಾರು ರೂಪಾಯಿಗಳನ್ನು ಆಕೆಯ ಸಲುವಾಗಿ ಅವನು ಇಷ್ಟರಲ್ಲಿಯೇ ಖರ್ಚು ಮಾಡಿರಬೇಕು. ಉಳಿದ ಕೆಲವರು ಮಾಲಕಳ ಕಡೆಗೆ ಕಣ್ಣೆತ್ತಿ ನೋಡಿದರೆ ಇವನಿಗೆ ಸಿಟ್ಟುಬೆಂಕಿ. ಅವರನ್ನು ತತ್ಷಣಕ್ಕೆ ಹೊರಗೆ ಹಾಕಿಸಿ ಬಿಡುತ್ತಾನೆ. ಆದರೆ ಇವನ ಮಾತಿನಲ್ಲಿ ದೇಶಾಭಿಮಾನವು ತುಂಬಿ ತುಳುಕುತ್ತದೆ. ಆಂಗ್ಲರೆಂದು ಮಾತೆತ್ತಿದರೆ ನಖಶಿಖಾಂತವಾಗಿ ಉರಿಯುತ್ತಾನೆ!

ಭಾರತೀಯ ಮಾಲಕನಿದ್ದ ಒಂದು ಬೋರ್ಡಿಂಗ್ ಮನೆಯಿದೆ. ಉಳಿದ ಕಡೆಗೆ ಆಂಗ್ಲ ಕೆಲಸಗಿತ್ತಿಯರಿಗೆ ವಾರಕ್ಕೆ ೧೫ ಶಿಲಿಂಗು ದೊರೆತರೆ ಇವನಲ್ಲಿ ೨೦ ಶಿಲಿಂಗು ದೊರೆಯುತ್ತವೆ. ಆ ಐದು ಶಿಲಿಂಗುಗಳಲ್ಲಿ ಇವನ ಕಾಮನಾಪೂರ್ತಿಯೂ ಆಗಬೇಕು! ಅಲ್ಲಿದ್ದ ಭಾರತೀಯ ಕೆಲಸಗಾರರೂ ಈ ಕೆಲಸಗಿತ್ತಿಯರೊಡನೆ ಮಾಲಕನ ಕಣ್ಣಿಗೆ ಕಾಣದಂತೆ 'Romancing' (ಶೃಂಗಾರ) ನಡೆಸಿರುತ್ತಾರೆ! ಸಿಗರೇಟು ಕೊಡುವದು,

ಕಡ್ಡಿಕೊರೆದು ಸಿಗರೇಟಿಗೆ ಹಚ್ಚುವದು, ಹೇಗಾದರೂ ಮಾಡಿ ಕೈಗೆ ಕೈ ಹಚ್ಚುವದು, ಇತ್ಯಾದಿ.

ಈ ಮಾಲಕನ ಕಡೆಗೆ ಒಬ್ಬ ಆಂಗ್ಲ ಕೆಲಸಗಿತ್ತಿಯಿದ್ದಳು. ಆಕೆ ಸುಶಿಕ್ಷಿತಳು. ಒಂದು ವರ್ಷ ಕಾಲೇಜು ಕಲಿತವಳು. ಆದರೆ ಆಕಸ್ಮಾತ್ತಾಗಿ ತಾಯಿಯು ತೀರಿಕೊಂಡಿದ್ದರಿಂದ ದಿಕ್ಕಿಲ್ಲದವಳಾಗಿ ಹೋದಳು. ಉದರಂಭರಣೆಗಾಗಿ ದುಡಿಯಬೇಕಾಯಿತು. ಈ ಬೋರ್ಡಿಂಗ್ ಹೌಸಿನಲ್ಲಿ ಕೆಲಸಕ್ಕಾಗಿ ನಿಂತಳು. ಕೆಲವು ದಿವಸಗಳಲ್ಲಿಯೇ ಆಕೆಗೆ ಮಾಲಕನ ಪೀಡೆಯು ಅಸಹ್ಯವಾಯಿತು. ಅದನ್ನು ಬಿಟ್ಟು ಹೋದಳು. ಆದರೆ ಹೋಗುವ ಪೂರ್ವದಲ್ಲಿ ಅಲ್ಲಿದ್ದ ನನ್ನ ಸ್ನೇಹಿತನೊಡನೆ ಆಕೆಯು ಮನ ಬಿಚ್ಚಿ ಮಾತನಾಡಿದಳು. "Excuse me. Are all the Indian students-who come here, very rich?" (ಕ್ಷಮಿಸಿರಿ. ಇಲ್ಲಿ ಬರುವ ಎಲ್ಲ ಭಾರತೀಯ ವಿದ್ಯಾರ್ಥಿಗಳೂ ಬಹಳ ಶ್ರೀಮಂತರೇ?) ಎಂದು ಪ್ರಶ್ನೆ ಮಾಡಿದಳು. "No, ours is a very poor country" (ಇಲ್ಲ, ನಮ್ಮದು ಬಹಳ ಬಡದೇಶ) ಎಂದು ನನ್ನ ಸ್ನೇಹಿತನು ಹೇಳಿದ. "Yes. that is what I have heard. But how is it that they are able to spend so much money after us?" (ಹೌದು. ನಾನೂ ಅದನ್ನೇ ಕೇಳಿರುವೆ, ಆದರೆ ನಮಗಾಗಿ ಅವರು ಇಷ್ಟು ಹಣ ಹೇಗೆ ಖರ್ಚು ಮಾಡುತ್ತಾರೆ?) ಎಂದು ಕೇಳಿದಳು. "After whom?" (ಯಾರಿಗಾಗಿ?) ಎಂದು ಗೆಳೆಯನು ಕೇಳಿದ. "After us--English girls I mean" (ನಮಗಾಗಿ ಎಂದರೆ ಇಂಗ್ಲಿಶ್ ಹುಡಿಗೆಯರಿಗೆ) ಎಂದಳು. ಗೆಳೆಯನು ನಿರುತ್ತರನಾದ. "An Englishman knows better. He knows that if he wants to dance with us, we also want to dance with him. And there is no payment. But if Indians want to have a good time with us by paying five shillings a night, we do not forego it! If our parents come to know, we tell them that we can never mix with 'niggers'—you know, that is what we call you behind your back. And we meet them secretly, for

money counts. If this is how they behave, how do they expect their own ladies to be loyal to them ?" ( ಇಂಗ್ಲಿಶ್ ಮನುಷ್ಯನಿಗೆ ಚೆನ್ನಾಗಿ ಗೊತ್ತು: ತನಗೆ ಕುಣಿಯಲಿಕ್ಕೆ ಬೇಕಾದರೆ ನಮಗೂ ಬೇಕೆಂದು. ಅದಕ್ಕೇನೂ ಹಣ ಕೊಡಬೇಕಾಗಿಲ್ಲ. ಆದರೆ ಭಾರತೀಯರು ರಾತ್ರಿಯೊಂದಕ್ಕೆ ಐದು ಶಿಲಿಂಗುಕೊಟ್ಟು ಹೊತ್ತು ಕಳೆಯಬೇಕೆಂದರೆ ನಾವೇನು ಅದನ್ನು ಕಳೆದುಕೊಳ್ಳುವದಿಲ್ಲ. ನಮ್ಮ ತಂದೆತಾಯಿಗಳಿಗೆ ಗೊತ್ತಾದರೆ, 'ನಿಗರ'–ಈ ಹೆಸರಿನಿಂದ ನಿಮ್ಮನ್ನು ನಿಮ್ಮ ಬೆನ್ನ ಹಿಂದೆ ನಾವು ಕರೆಯುತ್ತೇವೆ–ಜನರ ಕೂಡ ನಾವು ಎಂದೂ ಸೇರುವದಿಲ್ಲ ಎಂದು ಅವರಿಗೆ ಹೇಳುತ್ತೇವೆ. ಗುಪ್ತವಾಗಿ ನಾವು ಅವರನ್ನು ಕಾಣುತ್ತೇವೆ, ಯಾಕಂದರೆ ರೊಕ್ಕ ಹೆಚ್ಚಿನದು. ಹೀಗೆ ಅವರು ನಡೆಯುವದಾದರೆ ಅವರ ಹೆಂಡಂದಿರು ಅವರಲ್ಲಿ ಹೇಗೆ ಅನುರಕ್ತರಾಗಿರಬೇಕು) ಎಂದು ಕೇಳಿದಳು. "Well, you do not know Indian women. Their loyalty knows no distinction" (ಓ, ನಿಮಗೆ ಹಿಂದುಸ್ಥಾನದ ಹೆಂಗಸರು ಗೊತ್ತಿಲ್ಲ. ಅವರ ಪತಿಭಕ್ತಿಗೆ ಭೇದಭಾವವಿಲ್ಲ) ಎಂದು ಗೆಳೆಯನು ಹೇಳಿದ. ಉಳಿದ ಆಂಗ್ಲ ಕೆಲಸಗಿತ್ತಿಯರಂತೆ ಈಕೆಗೆ ದುಡ್ಡು ಗಳಿಸುವದು ಬೇಕಾಗಿರಲಿಲ್ಲ. ಅಲ್ಲಿಂದ ಬಿಟ್ಟು ಒಬ್ಬ ಆಂಗ್ಲ ಪ್ರೊಫೆಸರನ ಮನೆಗೆ ಕೆಲಸಕ್ಕಾಗಿ ಹೋದಳು.

ಲಂಡನ್ನಿನ ಯಾವ ಭಾಗದಲ್ಲಿಯೂ-ಯಾವುದೊಂದು ಮನೆತನಸ್ಥ ಕುಟುಂಬದಲ್ಲಿಯೂ ಭಾರತೀಯನಿಗೆ ಸ್ಥಾನವು ದೊರೆಯಲಾರದು. ನನ್ನ ಗೆಳೆಯನಿಗೆ ಒಬ್ಬ ಆಂಗ್ಲ ಪ್ರೊಫೆಸರರ ಪರಿಚಯವಿತ್ತು. ಅವರೂ ಭಾರತೀಯ ವಿದ್ಯಾರ್ಥಿಗಳ ಬಗ್ಗೆ ಇದೇ ರೀತಿಯಾಗಿ ಮಾತನಾಡಿದರು.

ಮೇಲೆ ಹೇಳಿದ ಬೋರ್ಡಿಂಗ್ ಹೌಸಿನಲ್ಲಿ ಮೊನ್ನೆ ಗುಜರಾಥದಿಂದ ಒಬ್ಬ ಶ್ರೀಮಂತನು ಬಂದಿದ್ದಾನೆ. ತನಗಾದ ಜಡ್ಡು 'Cancer' (ಕ್ಯಾನ್ಸರ) ಎಂದು ಅವನಿಗೆ ಸಂಶಯವು ಬಂದಿತ್ತು. ಮುಂಬಯಿಯಲ್ಲಿ ಒಬ್ಬಿಬ್ಬ ಡಾಕ್ಟರಿಗೆ ತನ್ನ ಪ್ರಕೃತಿಯನ್ನು ತೋರಿಸಿದ. ಅವರಿಂದ ಸಮಾಧಾನಕರವಾದ ಉತ್ತರವು ದೊರೆಯಲಿಲ್ಲ. ಕೂಡಲೆ ಇಂಗ್ಲಂಡಕ್ಕೆ

ಬರಬೇಕೆಂದು ಗೊತ್ತುಮಾಡಿದ. 'Airmail' (ಏರಮೇಲ) ವಿಮಾನವು ಅಂದೇ ಹಿಂದುಸ್ತಾನವನ್ನು ಬಿಟ್ಟಿತ್ತು. ಮುಂದೆ ಎರಡು ಮೂರು ದಿನ ತಡೆಯುವಷ್ಟು ಅವನಿಗೆ ತಾಳ್ಮೆಯಿರಲಿಲ್ಲ. 'ಸ್ಪೆಶಲ್' ವಿಮಾನವನ್ನು ಹೋಗಿ ಬರುವದನ್ನು ಕೂಡಿಸಿ– ೨೨೦೦ ಪೌಂಡುಗಳಿಗಾಗಿ ಬಾಡಿಗೆ ಹಿಡಿದ! ಇವನಿಗೆ ಇಂಗ್ಲಿಷು ಬರುವದು ಅಷ್ಟಕ್ಕಷ್ಟೆ. ಇನ್ನೊಂದು ನಾಲ್ಕು ಹುಂಬರನ್ನು ತನ್ನ ಜೊತೆಗೆ ಕರೆದುಕೊಂಡು ಬಂದು ಇಲ್ಲಿ ಮುಟ್ಟಿದ. ಬರ್ಮಿಂಗ್‌ಹ್ಯಾಮದಿಂದ ಬಂದೊಡನೆ ೪೦ ಪೌಂಡು ಕೊಟ್ಟು (ಗಾಡಿಖರ್ಚು ಬೇರೆ) ಡಾಕ್ಟರರನ್ನು ಕರೆಕಳಿಸಿದ. ಅವರು "ಕುತ್ತಿಗೆಯಲ್ಲಿ ಏನೋ 'Elongation' (ಇಲಾಗೇಶನ್) ಇದೆ. ಸಣ್ಣ ಶಸ್ತ್ರಕ್ರಿಯೆಯ ಕೆಲಸವಲ್ಲದೆ ಮತ್ತೇನೂ ಬೇಕಿಲ್ಲ. ಇನ್ನೂ ಐದಾರು ತಿಂಗಳು ಬಿಟ್ಟು ಮಾಡಿದರೂ ನಡೆಯುವದು" ಎಂದು ಹೇಳಿದರು. ಶಸ್ತ್ರಕ್ರಿಯೆ! ಆಪ್ತೇಷ್ಟರಿಲ್ಲದೆ ಇಲ್ಲಿ ಹೇಗೆ ಮಾಡುವದು? ಕಾರಣ ಮುಂಬಯಿಗೆ ಹೋಗಿ ಅಲ್ಲಿಯೇ ಮಾಡಿಸಬೇಕೆಂದು ಈಗ ಅವನ ವಿಚಾರ ಇದೆ! ಏನೂ ಅಪಾಯವಾಗುವದಿಲ್ಲವೆಂದು ಡಾಕ್ಟರರು ಎಷ್ಟು ಹೇಳಿದರೂ ಕೇಳಲೊಲ್ಲ. 'ಇಷ್ಟು ದುಡ್ಡು ಹೀಗೆ ಖರ್ಚು ಮಾಡುವರೇ?' ಎಂದು ಒಬ್ಬರು ಕೇಳಿದರು. "ಅದೆಷ್ಟು? ಒಂದು ತಿಂಗಳ ಬಡ್ಡಿ ನನಗೆ!" ಎಂದು ಉತ್ತರ ಬಂತು. ಗೃಹಸ್ಥನು ತಿನ್ನುತ್ತಾನೆ, ತಿರುಗಾಡುತ್ತಾನೆ, ಪುಷ್ಟನಾಗಿದ್ದಾನೆ. ತಲೆಯಲ್ಲಿ ಸಿಕ್ಕ ಒಂದು ಹುಳದ ಸಲುವಾಗಿ ಬಳ ಬಳ ಇಷ್ಟು ದುಡ್ಡನ್ನು ಖರ್ಚು ಮಾಡಿದ!

ಈ ರೀತಿಯಾಗಿ ಹಿಂದುಸ್ತಾನದಿಂದ 'ಮಾಲು' ಬಂದು ಇಲ್ಲಿ ಬೀಳುತ್ತದೆ. ದುಡ್ಡು ಬಂದು ಇಲ್ಲಿ ಹಾಳಾಗುತ್ತದೆ. ಅಂದ ಮೇಲೆ ನಮ್ಮ ಹುಚ್ಚುತನಕ್ಕೆ ಆಂಗ್ಲರೇಕೆ ನಗಬೇಡ? ಮೊನ್ನೆ ಮೊನ್ನೆ ಮುಂಬಯಿಯಲ್ಲಿ ಹಿಂದು-ಮುಸಲ್ಮಾನರ ದಂಗೆಯಾಯಿತಲ್ಲ? ಅದರ ಚಿತ್ರಗಳನ್ನು ಇಲ್ಲಿಯ ಎಲ್ಲ ಸಿನೇಮಾ ಗೃಹಗಳಲ್ಲಿ ತೋರಿಸಿದರು. "ಇಂಥವರಿಗೆ ಸ್ವರಾಜ್ಯ ಬೇಕು!" ಎಂಬ ತಿರಸ್ಕಾರವು ಅದರಲ್ಲಿ ಅಡಕವಾಗಿತ್ತು.

---

೮-೧೨-೩೬

ನನ್ನ ಗೆಳೆಯನೊಬ್ಬನಿಗೆ ನಿಲುವಂಗಿ (over-coat) ಯು ಬೇಕಾಗಿತ್ತು. ಒಂದು ಅಂಗಡಿಗೆ ಹೋಗಿ ಗೊತ್ತಿಲ್ಲದೆ 'Ladies' department' (ಹೆಂಗಸರ ವಿಭಾಗ) ದ ಕಡೆಗೆ ಪ್ರವೇಶಿಸಿದ. ಅಲ್ಲಿ ಮಾರಲು ನಿಂತಾಕೆಯು—ಇವನ ಗುರುತಿನ ಹೆಣ್ಣುಮಕ್ಕಳಿಗಾರಿಗಾದರೂ ಬೇಕಾಗಿರಬಹುದೆಂದು ತಿಳಿದು "Shall I wear it and show it you" (ನಾಸು ತೊಟ್ಟು ತೋರಿಸಲಿಯಾ?) ಎಂದು ಕೇಳಿದಳು. ಅರ್ಥವಾಗದೆ ಸನ್ನ ಸ್ನೇಹಿತನು 'ಹೂಂ' ಎಂದ. ಆಕೆಯು ಒಂದಾದ ಮೇಲೆ ಇನ್ನೊಂದನ್ನು ಹಾಕಿ ತೋರಿಸಿದಳು. ಇವನಿಗೆ ಏನೂ ತಿಳಿಯದೆ ಕಡೆಗೆ ಗಟ್ಟಿಮನಸ್ಸು ಮಾಡಿ: "I want to wear it. Shall I try it?" (ನಾಸು ತೊಡಬೇಕಾಗಿದೆ. ನೋಡಲಿಯಾ?) ಎಂದು ಕೇಳಿದ. "Good gracious! I am sorry, sir, we do'nt sell for men" (ಅಯ್ಯೋ ದೇವರೆ! ನಾವು ಗಂಡಸರಿಗೆ ಇಲ್ಲಿ ಮಾರುವದಿಲ್ಲ, ಸ್ವಾಮಿ, ಕ್ಷಮಿಸಿರಿ) ಎಂದು ಹೇಳಿದಳು ಆ ಹೆಣ್ಣುಮಗಳು!

ಇನ್ನೊಬ್ಬನಿಗೆ 'ಹೇರ್ ಕಟಿಂಗ್' ಮಾಡಿಸಬೇಕಾಗಿತ್ತು. ಇಲ್ಲಿಯ ಹೆಣ್ಣುಮಕ್ಕಳೂ 'ಹೇರ್ ಕಟ್' ಮಾಡಿಸುತ್ತಾರೆ. ಕಾರಣ ಇಲ್ಲಿ ಒಂದೇ ಸಲೂನಿಸಲ್ಲಿ ಹೆಣ್ಣುಮಕ್ಕಳ ಹಾಗು ಗಂಡಸರ 'department' (ವಿಭಾಗ) ನ್ನು ಇಟ್ಟಿರುತ್ತಾರೆ. ನನ್ನ ಸ್ನೇಹಿತನು ಹೆಣ್ಣುಮಕ್ಕಳ ಶಾಖೆಗೆ ಹೋಗಿ ಟೊಪ್ಪಿಗೆಯನ್ನು ತೆಗೆದಿಟ್ಟ. ಅಲ್ಲಿದ್ದ 'ಹಜಾಮಿಣಿ'ಯು ಆಶ್ಚರ್ಯದಿಂದ ಇವನ ಕಡೆಗೆ ನೋಡಿದಳು. ಇವನಿಗೆ ಅರ್ಥವಾಗಲಿಲ್ಲ. "We do it only for ladies, sir" (ಇಲ್ಲಿ ಬರೀ ಹೆಂಗಸರಿಗೆ

ಮಾತ್ರ ಇದೆ, ಸ್ವಾಮಿ) ಎಂದು ಹೇಳಿದಾಗ ಸುಮ್ಮನೆ ಹೊರಗೆ ಬಂದ!

ಒಬ್ಬರು ಹೇಳುತ್ತಿದ್ದರು: ಅವರ ಗುರುತಿದ್ದ ವಿದ್ಯಾರ್ಥಿಯು ರಸಿಯಾ, ಫಿನ್‌ಲ್ಯಾಂಡ್ ಮೊದಲಾದ ಎಲ್ಲ ದೇಶಗಳನ್ನು ತಿರುಗಾಡಿ ೬೦ ಪಾನು ಉದ್ದವಾದ ಪತ್ರವನ್ನು ಬರೆದು ತಂದೆಗೆ ಕಳಿಸಿದ. ತಂದೆಗೆ ಹೊಸ ಸಂಸ್ಕೃತಿಯು ಝಳವು ಬಡಿದಿರಲಿಲ್ಲ. ಈ ಪತ್ರವನ್ನು ನೋಡಿ ಗಾಬರಿಯಾದ. ಮೊದಲನೆಯ ಪಾನನ್ನು ಓದಿದಾಗ, ಬರಿ ವರ್ಣನೆಯಿತ್ತು. ಮನೆಯಲ್ಲಿದ್ದ ಮಗಳಿಗೆ ಹೇಳಿದ: "ಇದನ್ನೆಲ್ಲ ನಾನೆಲ್ಲಿ ಓದಲಿ! ನೀನು ಓದಿ ನೋಡಿ ಅವನು ಸುಖವಾಗಿದ್ದಾನೋ ಇಲ್ಲೋ ಹೇಳಿಬಿಡು!"

* * * *

೧೦—೧೨—೩೬

ಇಂದು ಅರಸನು ತನ್ನ ಸಿಂಹಾಸನವನ್ನು ಬಿಟ್ಟುಕೊಟ್ಟನು, ತಾನು ಪ್ರೀತಿಸುವ ಲಲನೆಗಾಗಿ.

* * * *

೧೪—೧೨—೩೬

ಲಂಡನ್ನಿನಲ್ಲಿ ಭೂಗರ್ಭವನ್ನು ಒಡೆದು ಇಲೆಕ್ಟ್ರಿಕ್ ಗಾಡಿಗಳನ್ನು ನಡೆಸುತ್ತಿದ್ದಾರಷ್ಟೇ! ಇಲ್ಲಿಯ 'escalators'(ಎಸ್ಕಲೇಟರ್ಸ್) ಮುಂತಾದ್ದರ ಬಗ್ಗೆ ಒಮ್ಮೆ ಬರೆದಿದ್ದೆ. ಇಲ್ಲಿಯ ಒಬ್ಬ ಪ್ರೊಫೆಸರರು ಹೇಳಿದರು: ಮುಂದಿನ ಯುದ್ಧಗಳು ವಿಮಾನದಲ್ಲಿ ಆಗತಕ್ಕವು; ಆಗ ಲಂಡನ್ನಿನ ಮೇಲೆ ವೈರಿಗಳು ದಂಡೆತ್ತಿ ಬಂದಾಗ ಗಾಳಿಯೊಳಗಿಂದ ಗುಂಡಿನ ಮಳೆಗರೆಯಬಹುದು. ಆದರೆ ಈಗಿದ್ದ 'underground' (ನೆಲದೊಳಗಿನ) ನಿಲ್ಮನೆಗಳಲ್ಲಿ ಲಂಡನ್ನಿನ ಜನರೆಲ್ಲ ಇರುವ ವ್ಯವಸ್ಥೆಯನ್ನು ಮಾಡಿದೆ. ರಸ್ತೆಯಗುಂಟ ನಿಲ್ಲಿಸಿದ ಕಟ್ಟಿಗೆಯ ಪಾಟಿಗಳನ್ನು ಕಿತ್ತೊಗೆದರೆ ತೀರಿತು. ವೈರಿಗಳಿಗೆ ಈ ನಿಲ್ಮನೆಗಳ ದಾರಿಯು ಕೂಡ ಗೊತ್ತಾಗುವಹಾಗಿಲ್ಲ!

ಆದರೂ ಲಂಡನ್ನು ಉಳಿಯುವದೋ ಇಲ್ಲೋ ನೋಡಬೇಕು!

* * * *

ಇಲ್ಲಿಯ ಒಬ್ಬ 'professor of Astrophysics' (ಎಸ್ಟ್ರೋ ಫಿಜಿಕ್ಸಿನ ಅಧ್ಯಾಪಕ) ನು ಒಬ್ಬ ಸಿನೇಮಾ ನಟಿಯನ್ನು ಮದುವೆ ಯಾದನು. ನಾಲ್ಕನೆಯ ದಿನವೇ ಆ ಹೆಣ್ಣುಮಗಳು ಬಿಡುಗಡೆಗಾಗಿ ಅರ್ಜಿ ಮಾಡಿದಳು. ಇದರಲ್ಲಿ ತಪ್ಪಾರದೋ ತಿಳಿಯದಾಗಿದೆ!

*    *    *    *

ಲಂಡನ್ನಿನಲ್ಲಿದ್ದ ಭೂಗರ್ಭಶಾಸ್ತ್ರದ ಪ್ರೊಫೆಸರರು ಕೆಲಸಕ್ಕಾಗಿ ಆಕ್ಸಫರ್ಡಿಗೆ ಹೋಗಿದ್ದರು. ಗಾಡಿಯಲ್ಲಿ ಬರುವಾಗ ಅವರಿಗೆ ಹಾದಿ ಯಲ್ಲಿ ಕೆಲವು ಕಣಿ ಕಲ್ಲುಗಳು ಕಣ್ಣಿಗೆ ಬಿದ್ದವು. ತತ್‍ಕ್ಷಣವೇ ಸರಪಳಿ ಯನ್ನು ಎಳೆದು ಗಾಡಿ ನಿಲ್ಲಿಸಿಬಿಡುವವರು, ಆದರೆ ಮುಂದಿನ ನಿಲ್ಮನೆಯ ವರೆಗೆ ಹೋಗಿ ಇಳಿದು, ತಿರುಗಿ ಹಳಿಗುಂಟ ನಡೆಯುತ್ತ ಬಂದು ಆ ಕಲ್ಲುಗಳನ್ನು ಹೊತ್ತರು. ಅಲ್ಲಿಂದ ನಿಲ್ಮನೆಗೆ ಹೋಗಿ ಕಾಲೇಜಿಗೆ ಫೋನ್' ಮಾಡಿದರು: "ನಾಲ್ಕು ಗಂಟೆಗಿದ್ದ ಕ್ಲಾಸನ್ನು ಆರುಗಂಟೆಗೆ ತೊಗೊಳ್ಳುತ್ತೇನೆ; ಕೆಲವು ಕಲ್ಲುಗಳು ಸಿಕ್ಕಿವೆ; ಅವನ್ನು ತರಲು ತಡವಾಯಿತು" ಎಂದು. ಆರು ಗಂಟೆಗೆ ಹರ್ಷಭರಿತರಾಗಿ ಆ ಕಲ್ಲು ಗಳನ್ನು ಮೇಜಿನ ಮೇಲಿಟ್ಟು ಎರಡು ತಾಸು ಅಂದು ಮಾತನ್ನು ಬೆಳೆಸಿದರೆಂದು ಅವರ ವಿದ್ಯಾರ್ಥಿಯಾದ ನನ್ನ ಗೆಳೆಯನು ಹೇಳುತ್ತಿದ್ದ.

*    *    *    *

ಇಲ್ಲಿ ಒಬ್ಬ ಭಾರತೀಯ ವಿದ್ಯಾರ್ಥಿಯಿದ್ದಾನೆ. ಹೆಣ್ಣು ಕೊಟ್ಟ ಮಾವನು ಅವನನ್ನು ಕಲಿಯಲಿಕ್ಕೆಂದು ದುಡ್ಡು ಕೊಟ್ಟು ಕಳಿಸಿದ್ದಾನೆ. ಅವನು ಆ ದುಡ್ಡನ್ನು ಇಲ್ಲಿಯ ಹೆಣ್ಣಿಗೆ ಕೊಡುತ್ತಿದ್ದಾನೆ!

*    *    *    *

'ಮ್ಯಾಟ್ರಿಕ್' ಸಹ ಆಗದೆ 'ಬಾರ್' ಕಲಿಯಲು ಬಂದ ಕೆಲವು ಶ್ರೀಮಂತ ಹುಡುಗರ ಸ್ಥಿತಿಯು ಇಲ್ಲಿ ಬಲು ವಿಚಿತ್ರವಾಗಿದೆ.

## ೨೯

. . . . . .

ಲಂಡನ್

೧೪—೧೨—೩೬

ಈಗ ವಿಲಾಯತಿಯಲ್ಲಿ ಒಂದು ದೊಡ್ಡ ಪ್ರಶ್ನೆಯೆದ್ದಿದೆ,—ಅರಸನು ರಾಜ್ಯವನ್ನು ಮಿಸೆಸ್. ಸಿಂಪ್ಸನ್ ಎಂಬ ಲಲನೆಗೋಸ್ಕರ ಬಿಟ್ಟುಕೊಟ್ಟ ವಿಷಯ. ಅರಸನ ಮನಸ್ಸಿನಲ್ಲಿ ಈಕೆಯನ್ನು ಲಗ್ನ ಮಾಡಿಕೊಳ್ಳುವದಿತ್ತು. ಈಕೆಯು ಎರಡುಸಲ ಬಿಡುಗಡೆ ಹೊಂದಿದ ಹೆಣ್ಣೆಂದೂ ದೇಶದ ಜನರು ಇಂಥ ವಿವಾಹವನ್ನು ಎಂದಿಗೂ ಮನ್ನಿಸಲಾರರೆಂದೂ ಮುಖ್ಯ ಮಂತ್ರಿಯು ಅರಸನಿಗೆ ಹೇಳಿದ. ಆಕೆಯು 'ರಾಣಿ' ಯಾಗದಿದ್ದರೂ ಅಡ್ಡಿಯಿಲ್ಲ; ತನ್ನ ಪತ್ನಿಯನ್ನಾಗಿಸಿಕೊಳ್ಳಲು ಪಾರ್ಲಿಮೆಂಟಿನ ಅಪ್ಪಣೆ ಸಿಗಬಹುದೇನೆಂದು ಅರಸ ಕೇಳಿದ. ಇಲ್ಲವೆಂದು ಉತ್ತರ ಬಂತು. ಆಗ: "I-cannot rule over the empire as I like without the woman I love, by my side" (ನನ್ನ ಕೂಡ ನಾನು ಒಲಿದ ಹೆಂಗಸು ಇಲ್ಲದೆ ನನಗೆ ತೋರಿದಂತೆ ನಾನು ಸಾಮ್ರಾಜ್ಯವಾಳಲಾರೆನು) ಎಂದು ಅರಸನು ಹೇಳಿ ಸಿಂಹಾಸನವನ್ನು ಬಿಟ್ಟುಕೊಟ್ಟು ಮಿಸೆಸ್. ಸಿಂಪ್ಸನ್ನಳೊಡನೆ ದೇಶತ್ಯಾಗ ಮಾಡಿ ಹೊರಟು ಹೋದ. ಆವನ ತಮ್ಮನಿಗೆ ಪಟ್ಟವಾಯಿತು.

ಇಷ್ಟು ಆದ ಸಂಗತಿ. ದೇಶದಲ್ಲಿ ಇದರ ಬಗ್ಗೆ ಅನೇಕ ಅಭಿಪ್ರಾಯಗಳು ನೆಲೆಸಿವೆ. ಮೊನ್ನೆ ಒಬ್ಬ 'ಬಿಶಪ್'—(ಆಚಾರ್ಯ) ನ ಕಡೆಗೆ ಒಬ್ಬ ಮುದುಕಿಯು ಹೋಗಿ: "Hands off the king! Abdication means revolution!" (ಅರಸನಿಂದ ದೂರಾಗಿರಿ! ರಾಜ್ಯತ್ಯಾಗವೆಂದರೆ

ಕ್ರಾಂತಿ) ಎಂದು ಘೋಷಿಸಿದಳು. ಆದರೆ ನಾನು ಮೊನ್ನೆ ಹೇರ್ ಕಟಿಂಗ್ ಸಲೂನಿಗೆ ಹೋಗಿದ್ದೆ. ಅಲ್ಲಿಯ ಹಜಾಮನು ಸಿಟ್ಟಿನಲ್ಲಿದ್ದ. ಏನಾಯಿತೆಂದು ಕೇಳಿದೆ. ಆಗ ಅವನ ಸಿಟ್ಟೆಲ್ಲ ಹೊರಬಿತ್ತು: "He should not have got mixed up with that class of woman. He wanted to introduce the morals of Hollywood into the royal family. He has lowered not only his prestige but the prestige of the British nation in the eyes of the world. Perhaps young, educated men like you might appreciate his ideas. I am oldfashioned like Mr. Baldwin. And I am sure that 75% of his Indian subjects think so too" (ಆ ತರದ ಹೆಂಗಸಿನ ಕೂಡ ಅವನು ಬೆರೆಯಬಾರದಿತ್ತು. ಅರಸುಮನೆತನದಲ್ಲಿ 'ಹೋಲಿವುಡ್ಡಿ'ನ ನೀತಿರೀತಿಗಳನ್ನು ತಂದು ಬಿಡಬೇಕೆಂದು ಅವನು ಮಾಡಿದ್ದನು. ತನ್ನದು ಮಾತ್ರವಲ್ಲ, ಬ್ರಿಟಿಶ್ ರಾಷ್ಟ್ರದ ಮಾನಮರ್ಯಾದೆಯನ್ನೆ ಅವನು ಜಗತ್ತಿನ ಕಣ್ಣಲ್ಲಿ ಕೆಳಕ್ಕೆಳೆದಂತಾಯ್ತು. ಒಂದು ವೇಳೆ ನಿಮ್ಮಂಥ ತರುಣ ವಿದ್ಯಾವಂತ ಜನರಿಗೆ ಅವನ ವಿಚಾರಗಳು ಸೇರಬಹುದು. ನಾನು ಬಾಲ್ಡವಿನ್ನನಂತೆ ಹಳೆಯತರದ ಮನುಷ್ಯ. ಹಿಂದುಸ್ಥಾನದ ಪ್ರಜೆಗಳಲ್ಲಿ ನೂರಕ್ಕೆ ೭೫ ಜನ ಹೀಗೇ ನನ್ನಂತೆ ವಿಚಾರಿಸುತ್ತಿರುವರೆಂದು ನನ್ನ ಖಾತ್ರಿಯಿದೆ) ಎಂದು ಹೇಳಿದ. ಅಷ್ಟರಲ್ಲಿ "King Edward's farewell" (ಎಡ್ವರ್ಡ ಅರಸನ ನಿರೋಪ) ಎಂದು ಇನ್ನೊಬ್ಬ ಹಜಾಮನು ವರ್ತಮಾನಪತ್ರವನ್ನು ಓದುತ್ತ ಬಂದ; ತಮ್ಮನು ಅರಸನಾದನೆಂದು ಇಷ್ಟರಲ್ಲಿ ಡಂಗುರ ಹೊಡೆದಿದ್ದರು. (Pro-clamation: ಪ್ರಕಟನೆ) "Why do you call him 'King' any longer? It has never happened in this country that there were two kings at one and the same time" (ಯಾಕೆ ಇನ್ನುಮುಂದೆ ಅವನಿಗೆ ಅರಸನೆನ್ನುತ್ತೀ? ಒಂದೇ ಹೊತ್ತಿಗೆ ಈ ದೇಶಕ್ಕೆ ಇಬ್ಬರು ಅರಸರು ಎಂದೂ ಇರಲಿಲ್ಲ.) ಎಂದು ಕವಕ್ಕನೆ ಮೊದಲನೆಯ ಹಜಾಮನು ಎರಡನೆಯವನ ಮೈಮೇಲೆ ಹೋದ! ಬಾಲ್ಡವಿನ್ನನ ಮೇಲೆ ಇವನಿಗೆ ಬಹಳ

ಪ್ರೇಮ. "He carried the whole House with him but for a few fools who would do the same even if angel Gabriel came with his trumpet, you know what I mean by 'Angel Gabriel'" (ದೇವತೆ ಗ್ಯಾಬ್ರಿಯಲ್ ತನ್ನ ತುತೂರಿಯೊಡನೆ ಬಂದಿದ್ದರೂ ತಾವು ಮಾಡುವದನ್ನು ಬಿಡದ ಕೆಲವು ಮೂರ್ಖರ ಹೊರತಾಗಿ ಉಳಿದ ಸಭೆಯನ್ನೆಲ್ಲ ಅವನು ತನ್ನದಾಗಿ ಮಾಡಿಕೊಂಡನು—ದೇವತೆ ಗ್ಯಾಬ್ರಿಯಲ್ ಎಂದರೆ ನನ್ನರ್ಥ ನಿಮಗೆ ತಿಳಿಯಿತೇ?) ಎಂದು ಕೇಳಿದ. "ಹೂಂ! ಮುಂದೆ ಸಾಗಲಿ!" ಎಂದು ನಾನು ಉತ್ತರ ಕೊಟ್ಟೆ! "The king should give up his personal considerations for the State. He himself is subject to his brith" (ರಾಜ್ಯದ ಸಲುವಾಗಿ ಅರಸನು ತನ್ನ ಸ್ವಂತದ ಹಿತಾಹಿತಗಳನ್ನು ಬಿಟ್ಟುಕೊಡಬೇಕು. ಅವನಿಗೂ ತನ್ನ ಜನ್ಮದ ಕಟ್ಟುನಿಟ್ಟುಗಳಿವೆ.) ಎಂದೆಂದ ಹಜಾಮ. "ನಿನ್ನ ಬೇಡಿಕೆಯಂತೆ ಒಬ್ಬ ರಾಜಕುಮಾರಿಯನ್ನು ಲಗ್ನಮಾಡಿಕೊಂಡು ಮಿಸೆಸ್. ಸಿಂಪ್ಸನ್ನಳೊಡನೆ ರಹಸ್ಯವಾಗಿ ಸಂಬಂಧವನ್ನಿಟ್ಟಿದ್ದರೆ? ಆ ತರಹದ ನೀತಿಯು ನಿಮಗೆ ಬೇಕೇನು?" ಎಂದು ನಾನು ಕೇಳಿದೆ. "In the land of the half-mads" (ಅರೆಹುಚ್ಚರ ನಾಡಿನಲ್ಲಿ) ಎಂದು ಬರ್ನಾರ್ಡ್ ಶಾ ಬರೆದ ಲೇಖವು ನನಗೆ ನೆನಪಾಯಿತು. "Well, that would have been a matter between him and his own conscience." (ಸರಿ, ಅದು ಅರಸ ಹಾಗೂ ಅವನ ವಿವೇಕದ ನಡುವಿನ ಮಾತು) ಎಂದೆಂದ ಹಜಾಮ!

ನನ್ನ ವಿಚಾರವು ಹೀಗೆ: ನೀತಿಯ ಮಾತು ಒತ್ತಟ್ಟಿಗಿರಲಿ. ಆದದ್ದರ ರಹಸ್ಯವೇನು? ಒರ್ವ ಲಲನೆಗಾಗಿ ಸಾಮ್ರಾಜ್ಯದ ಭೋಗವನ್ನು ಬಿಟ್ಟುಕೊಡುವಂಥ ತ್ಯಾಗವು ಉತ್ಪನ್ನವಾಗುವಷ್ಟು ಪವಿತ್ರವಾಗಿತ್ತೇ ಅರಸನ ಪ್ರೇಮ? ಅದೇ ಪ್ರೇಮವು ಇನ್ನೊಬ್ಬ ಲಲನೆಯಲ್ಲಿ ಅರಸನಿಗೆ ದೊರಕುವದು ಶಕ್ಯವಿದ್ದಿಲ್ಲವೆ? ಅಥವಾ ಇದೆಲ್ಲ ಮಿಸೆಸ್. ಸಿಂಪ್ಸನ್ನಳ ಮಾಯೆಯೆನ್ನಬೇಕೊ? 'ಕ್ಲಿಯೋಪಾತ್ರ' (Cleopatra)ಳ ರೀತಿಯು ಇಲ್ಲಿರಲಿಕ್ಕಿಲ್ಲವಷ್ಟೆ? ಯಾರಿಗೆ ಗೊತ್ತು? ಇನ್ನೊಂದು ಸಂಭವವಿದೆ.

ಮೊದಲಿಗೆ ನಿರ್ಭಯದಿಂದ ಆವಳೊಡನೆ ಅರಸನು ವರ್ತಿಸಿದಾಗ, ಇಷ್ಟೊಂದು ದೀರ್ಘಕ್ಕೆ ಜನತೆಯ ಕುತೂಹಲವು ಹೋಗಬಹುದೆಂದು ಆತನಿಗೆ ಗೊತ್ತಿರಲಿಕ್ಕಿಲ್ಲ. ಮೊದಲು ಅಮೇರಿಕೆಯ ಸುದ್ದಿಗಾರರು ಇದರ ಪ್ರಕಟನೆಗೆ ಕಾರಣರಾದರು. ವಿವಾಹಿತ ತರುಣಿಯೊಡನೆ–ಅಮೇರಿಕನ್ ತರುಣಿಯೊಡನೆ- ಅರಸನ ಶೃಂಗಾರ ಚೇಷ್ಟೆಯು ನಡೆದಿರುವದನ್ನು ಜಗತ್ತಿಗೆ ಸಾರಿದರು. ಇದರಿಂದ ವಿಲಾಯತಿಯ ಜನರಿಗೆ ಅಪಮಾನ ವಾದಂತಾಯಿತು. ಅವರ ಹೃದಯವು ಕಳವಳಗೊಂಡಿತು; ಮುಖ್ಯ ಮಂತ್ರಿಗೆ ಅವರು ಪತ್ರ ಬರೆದರು. ಮುಖ್ಯಮಂತ್ರಿಯು ಅರಸನಿಗೆ ಹೇಳಿರಬಹುದು,–ಈ ಹೆಣ್ಣುಮಗಳ ಉಸಾಬರಿಯನ್ನು ಬಿಡಬೇಕು, ಇಲ್ಲವೆ ಸಿಂಹಾಸನವನ್ನು ಬಿಟ್ಟುಕೊಡಬೇಕೆಂದು. ಎಲ್ಲವೂ ಜಗಜ್ಜಾಹೀರಾಗಿ ಅವಳನ್ನು ಲಗ್ನವಾಗದೆ ಹೋದರೆ ಜಗತ್ತೇ ತನ್ನನ್ನು ದೂಷಿಸ ಬಹುದು; ಲಗ್ನವಾಗಿ ಅರಸನಾಗಿರುವದು ಶಕ್ಯವಿಲ್ಲ. ಕಾರಣ ಮಿಂಚಿ ಹೋದ ತಪ್ಪಿಗಾಗಿ ನಿರ್ವಾಹವಿಲ್ಲದೆ ಅರಸನು ಸಿಂಹಾಸನವನ್ನು ಬಿಟ್ಟಿರ ಬೇಕಲ್ಲವೆ ? ಪ್ರೇಮ, ಮಾಯೆ, ತಪ್ಪಿಗಾಗಿ ಕೊಡಬೇಕಾದ ದಂಡ, ಹೀಗೆ ಅರಸನ ನಿಶ್ಚಯದಲ್ಲಿ ಮೂರು ಅರ್ಥಗಳನ್ನು ಕಾಣಬಹುದು. ಯಾವುದು ನಿಜ ? ದೇವರಿಗೆ ಗೊತ್ತು. ಆ ಕಾದಲರಿಗೆ ಗೊತ್ತು. ಅಂತೂ ಅರಸನ ಜೀವಿತದ ಈ ಕಾಲಾವಧಿಯು ದಂತಕಥೆಯಾಗುವದು. ನಾನು ವಿವರಿಸಿದ ಬೇರೆ ಬೇರೆ ಉದ್ದೇಶಗಳನ್ನು ಹಿಡಿದು ನಾಟಕಕಾರರು ದೃಶ್ಯಗಳನ್ನು ರಚಿಸುವರು. ಇಲ್ಲಿದ್ದ ಸತ್ಯದ ಬಗ್ಗೆ ಚರಿತ್ರಕಾರರು ಜಗಳಾಡುವರು, ಅರಸನ ಮುಂದಿನ ಜೀವಿತವು ಸಮಸ್ಯೆಯನ್ನು ಬಿಡಿಸದೆ ಹೋದರೆ. ಆಗ ಬ್ರೌನಿಂಗ್ ಕವಿಯ 'The Ring And the Book' (ದಿ ರಿಂಗ್ ಯ್ಯಾಂಡ್ ದಿ ಬುಕ್)ದಲ್ಲಿಯಂತೆ ಸತ್ಯವು ಅನೇಕ ಮುಖವಾಗಿ ಕಾಣುವದು !



# ೩೦

......

ಲಂಡನ್

೧೫—೧೨—೩೬

ಇಂದು ಹಾಯಿಡ್ ಪಾರ್ಕಿಗೆ ಹೋಗಿದ್ದೆ. ಸುಮಾರು ಮೂರು ನೂರು ವರ್ಷಗಳಿಂದ ಪ್ರಸಿದ್ಧವಾದ ಸ್ಥಳವಿದು. 'Hyde Park' (ಹಾಯಿಡ ಪಾರ್ಕ) ಎಂಬ ನಾಟಕವನ್ನು ಶರ್ಲೆ ಎಂಬ ಕವಿಯು 'The last of the Elizabethans' (ಎಲಿಝೂಬೆಥನ್‌ರಲ್ಲಿ ಕೊನೆಯಾತ) ಬರೆದಿದ್ದಾನೆ. ಅಂದಿನಿಂದ ಶೃಂಗಾರದ ಆಗಾರವಿದು. ಆದರೆ ನಾನು ತಿರುಗಾಡಲು ಹೋದಾಗ ಒಂದೆರಡು 'ದೃಶ್ಯ'ಗಳು ಮಾತ್ರ ಕಣ್ಣಿಗೆ ಬಿದ್ದವು. ಚಳಿಗಾಲದಲ್ಲಿ ಶೃಂಗಾರಕ್ಕೆ ಹೀಗೆ ಬಯಲಿನಲ್ಲಿ ಆಸ್ಪದವಿಲ್ಲ! ಇಂದು ತುಸುವೆ ಮಂದವಾಗಿ ಬಿಸಿಲು ಬಿದ್ದಿತ್ತು. ಉದ್ದನ್ನ ಮರಗಳು ಎಲೆಯಿಲ್ಲದೆ ನಿಂತಿದ್ದವು. ಇದು ಅಡವಿಯನ್ನೊಳಗೊಂಡ ತೋಟ ವೆಂದರೂ ಸಲ್ಲುವದು. 'Lawns' (ಲಾನ್ಸ) ಎಂದರೆ ಪ್ರಶಸ್ತವಾದ ಹುಲ್ಲುಗಾವಲಗಳಿವೆ. ನಡುವೆ ಒಂದು 'Serpentine' (ಸರ್ಪಂಟಾ ಯಿನ್) ಇಲ್ಲವೆ ಹಾವಿನಾಕಾರದ ಕೆರೆಯಿದೆ. ಇಲ್ಲಿ ನೂರಾರು ನೀರು ಗೋಳಿಗಳಿವೆ. ಮುದುಕಿಯರು ಪಾರಿವಾಳಗಳಿಗೆ ಹಾಗೂ ಗುಬ್ಬಿಗಳಿಗೆ ಕಾಳೊಗೆಯುತ್ತ ನಿಂತಿರುತ್ತಾರೆ. ಕೆಲವು ಕೈ ಮೇಲೆ ಬಂದು ಕೂತು ತಿನ್ನುತ್ತವೆ. ಹಿಂಸೆಯ ಹಿರಿಯನಾದ ಆಂಗ್ಲನು ಇಲ್ಲಿ ಪ್ರೇಮದ ತಪೋವನವನ್ನು-ಉಪವನವನ್ನು-ಕಟ್ಟಲು ಬಯಸಿದ್ದಾನೆ! 'Physical

Energy' (ದೇಹಶಕ್ತಿ) ಎಂಬ ಮೂರ್ತಿಶಿಲ್ಪವು ನೋಡುವ ಹಾಗಿದೆ. 'ವಾಟ್ಸ್' ಎಂಬ ಶಿಲ್ಪಿಯು ಇದನ್ನು ಕಟೆದನು. ಅಲ್ಲದೆ 'ಹಾಯಿಡ್ ಪಾರ್ಕ' ವಾಗ್ಮಿಗಳ ಸಾಲೆ. ಶಾ, ಬಾಲ್ಡ್ವಿನ್ ಮೊದಲಾದ ಇಂದಿನ ಪ್ರಸಿದ್ಧ ವಾಗ್ಮಿಗಳು ಮೊದಲು ಇಲ್ಲಿ ಮಾತನಾಡಲು ಕಲಿತರು. ಯಾರೂ ಒಂದು ಕಡೆಗೆ ನಿಂತು ಮಾತನಾಡಲು ಸುರುವು ಮಾಡಿದರೆ ಸಾಕು, ಸುತ್ತು ಮುತ್ತು ಮೋಜಿಗಾಗಿ ನಿಂತ ಜನರು ಬಂದು ನೆರೆಯುತ್ತಾರೆ! ಒಬ್ಬ ನಿಗ್ರೋ ಮಾತುಗಾರನ ಭಾಷಣವನ್ನು ಕೇಳಲು ಅನೇಕರು ನೆರೆದಿದ್ದರು.

‡ ‡ ‡ ‡

೧೬—೧೨—೩೨

'Ginger' (ಜಿಂಜರ) ಎಂಬ ಶಬ್ದವು ಸಂಸ್ಕೃತದಿಂದ ಇಂಗ್ಲಿಷಿನಲ್ಲಿ ಬಂದಿದೆಯೆಂದೂ ಅದು ಮೂಲತಃ ಭಾರತೀಯ ಆರ್ಯೇತರ ಭಾಷೆ ಗಳಿಂದ ಹುಟ್ಟಿದೆಯೆಂದೂ ಆಂಗ್ಲ ಭಾಷಾಶಾಸ್ತ್ರಜ್ಞರು ಬರೆಯುತ್ತಾರೆ. "ಇಂಗು" ಎಂಬ ಶಬ್ದವಿರಬಹುದೇನು?

‡ ‡ ‡ ‡

ಫರ್ಗ್ಯುಸನ್ ಕಾಲೇಜಿನಲ್ಲಿ ನನ್ನ ಕೈಕೆಳಗೆ ಕಲಿತ ಒಬ್ಬ ವಿದ್ಯಾರ್ಥಿ ನಿಯು ಇಂದು ಭೆಟ್ಟಿಯಾಗಿದ್ದಳು. ಇಲ್ಲಿ ಟಿ. ಡಿ. ಗಾಗಿ ಬಂದಿ ದ್ದಾಳೆ. ನೂರೆಂಟು ಸಲ "I mean" (ಆಯ್ ಮೀನ್; ನಾನು ಹೇಳುವ ದೆಂದರೆ) ಉಪಯೋಗಿಸುತ್ತಾಳೆ!

‡ ‡ ‡ ‡

ನಾನಿದ್ದ ಬೋರ್ಡಿಂಗ್ ಹೌಸಿನಲ್ಲಿ ಇಬ್ಬರು ಚೈನಾದೇಶದ ವಿದ್ಯಾರ್ಥಿಗಳಿದ್ದಾರೆ. 'Technology' (ಟೆಕ್ನಾಲಾಜಿ) ಕಲಿಯಲು ಬಂದಿ ರುವರು. ಆದರಿಂದ ಚೈನಾದಲ್ಲಿಯ ಕಾರಖಾನೆಗಳಿಗೆ ಉಪಯೋಗ ವಾಗುವದಂತೆ. ಉತ್ತಮವಾಗಿ ಇಂಗ್ಲಿಷು ಮಾತನಾಡುತ್ತಾರೆ. ಆದರೆ ಇಲ್ಲಿಯ ಮಾಲಕಳ ಇಬ್ಬರು ಗೆಳತಿಯರು ಬಂದು ಇಲ್ಲಿದ್ದಾರೆ. ಅವರು

ದಾದಿಯರು (Nurses) ಇಲ್ಲಿ ಅವರಿಗೆ ಬೇಕಾದ ಪ್ರೋತ್ಸಾಹ ಸಿಗಬಹು ದೆಂದು ಅವರು ಬಂದು ಇದ್ದಂತೆ ಕಾಣುತ್ತದೆ. ಇವರಿಬ್ಬರು ಹಾಗು ಕೆಲವು ಭಾರತೀಯ ವಿದ್ಯಾರ್ಥಿಗಳೂ ಅದನ್ನು ಚೆನ್ನಾಗಿಯೇ ದಯು ಪಾಲಿಸಿದ್ದಾರೆ !

‡ ‡ ‡ ‡

ಯಾವುದೊಂದು ವಿಷಯುವನ್ನು ಅಭ್ಯಸಿಸಲು ಸಂಯುಮವಿಲ್ಲದೆ ವಿಷಯುಗಳನ್ನು ಬದಲಿಸುವ ವಿದ್ಯಾರ್ಥಿಯು ಒಬ್ಬನಿದ್ದಾನೆ. ಆಂಗ್ಲ ವಾಙ್ಮಯುವನ್ನು ಬಿಟ್ಟು ಈಗ ಅರ್ಥಶಾಸ್ತ್ರವನ್ನು ಕಲಿಯುುತ್ತಿದ್ದಾನೆ. ಹಿಂದುಸ್ಥಾನಕ್ಕೆ ಹೋದ ಮೇಲೆ ರಾಜಕಾರಣದಲ್ಲಿ ಭಾಗತೆಗೆದು ಕೊಳ್ಳುವ ವಿಚಾರವಿದ್ದುದರಿಂದ ಹೀಗೆ ಬದಲಿಸಬೇಕಾಯಿತೆಂದು ಅವನ ಹೇಳಿಕೆ. ಆದರೆ ಅವನ ರಾಜಕಾರಣವು ಇಷ್ಟಕ್ಕೇ ನಿಲ್ಲುತ್ತದೆ: "Come on ! Let us discuss the king's abdication !" (ಬನ್ನಿರಿ. ಅರಸನ ರಾಜತ್ಯಾಗವನ್ನು ಚರ್ಚಿಸೋಣ) ಅಂದರೆ, ಆರಾಮ ಕುರ್ಚಿಯಲ್ಲಿ ಕೂತು ಹರಟೆ ಹೊಡೆಯುುವದು ಬೇಕು !

---

## ೩೧

. . . . . .

ಲಂಡನ್

೧೭—೧೨—೩೬

ಈ ವಾರ ನಾನು ‘Madame tussaud’s’ (ಮ್ಯಾಡಮ್ ಟ್ಯುಸಾಡ್ಸ) ಎಂಬ ‘ಮೇಣಬಸ್ತಿ’ ಗೆ ಹೋಗಿದ್ದೆ. ಇದೊಂದು ಅಮೋಘವಾದ ಮೂರ್ತಿ ಸಂಗ್ರಹ. ಫ್ರೆಂಚ ಮಹಾಕ್ರಾಂತಿಯ ಕಾಲದ ಒಬ್ಬ ಮಹಿಳೆಯು ಮೇಣದಲ್ಲಿ ಮನುಷ್ಯರ ಮೂರ್ತಿಗಳನ್ನು ಮೂಡಿಸುವದರಲ್ಲಿ ಹೆಸರಾಗಿದ್ದಳು. ಆಕೆ ಹಾಗು ಆಕೆಯ ಶಿಷ್ಯಪರಂಪರೆಯು ಮೂಡಿಸಿದ ಮೂರ್ತಿಗಳು ಇಲ್ಲಿವೆ. ಈ ಸಂಗ್ರಹಾಲಯವು ಒಂದು ದೊಡ್ಡ ಸಂಸ್ಥೆಯಾಗಿದೆ. ಇದರದೇ ಹೊಟೆಲ್ಲು, ಸಿನೇಮಾ ಗೃಹಗಳಿವೆ. ಕೀರ್ತಿವಂತರಾದವರ ಮೂರ್ತಿಗಳೆಲ್ಲ ಇಲ್ಲಿವೆ. ಹೊಸದಾಗಿ ಯಾರಾದರೂ ಬೆಳಕಿಗೆ ಬಂದರೆ, ಅವರ ಮೂರ್ತಿಯೂ ಇಲ್ಲಿ ಸ್ಥಾಪಿತವಾಯಿತೆಂದೇ ತಿಳಿಯಬೇಕು! ಗಾಂಧೀಜಿಯವರನ್ನೂ ಮೇಣದ ಗೊಂಬೆಯಾಗಿಸಿ ಇಲ್ಲಿ ಕೂಡಿಸಿದ್ದಾರೆ! ಆದರೆ ಅವರ ಹೋಲಿಕೆಯು ಎಳ್ಳಷ್ಟಾದರೂ ಬಂದಿಲ್ಲ. ಬಿಳಿಯನು ಒಬ್ಬ ಕರಿಯ ಮನುಷ್ಯನನ್ನು ನೋಡಿ ಅವನ ಕರಿತನ–ಹರಕತನವನ್ನು ಮಾತ್ರ ಚಿತ್ರಿಸಿದಂತೆ ಇದೆ.

ಬಾಗಿಲದಲ್ಲಿ ಮೇಣದ ಗೊಂಬೆ–ಸಿಪಾಯಿಯನ್ನು ನಿಲ್ಲಿಸಿದ್ದಾರೆ ನಿಜವಾಗಿ ಸಿಪಾಯಿಯೆಂದು ನಾನು ತಿಕೀಟು ತೋರಿಸುವ ಗಡಿಬಡಿಯಲ್ಲಿದ್ದೆ! ನನ್ನ ‘ರತ್ನಪಕ್ಷಿ’ (ದೂರದ ದಾರಿ) ಯಲ್ಲಿಯ ಸನ್ನಿವೇಶವು ನೆನಪಾಯಿತು. ಒಳಗೆ ಹೋದೆ. ‘Voltaire’ (ವ್ಹೋಲ್ಟೇರ) ಎಂಬ ಫ್ರೆಂಚ್ ಕವಿ, ಆಗಿನ ಕಾಲದ ಅನೇಕ, ಫ್ರೆಂಚ್ ಮಹಿಳೆಯರು, ತಮ್ಮ ವೇಷದಲ್ಲಿಯೇ ಕಣ್ಣಿಗೆ ಬಿದ್ದರು. ಮಿಸೆಸ್ ಸಿಂಪ್ಸನ್‌ಳು ಜಗತ್ಪ್ರಸಿದ್ಧಳಾಗಿ ಈಗ ಸುಮಾರು ಹದಿನೈದು ದಿನಗಳಾಗಿವೆ. ಇಷ್ಟರಲ್ಲಿಯೇ ಆಕೆಯ ಮೇಣದ ಗೊಂಬೆಯೊಂದನ್ನು ಮಾಡಿ ಬೆಳಕನ್ನು ಕೆಡವಿ ಒಂದು

ಮೂಲೆಯಲ್ಲಿ ನಿಲ್ಲಿಸಿದ್ದಾರೆ. ಹಾಗೇ ಮುಂದೆ ಹೋದೆ. ಈಗಿನ ಆಂಗ್ಲ ಅರಸುಮನೆತನವೆಲ್ಲ ಕಣ್ಣಿಗೆ ಬಿತ್ತು. ಆಮೇಲೆ ಅನೇಕ ಆಂಗ್ಲ ಮಂತ್ರಿಗಳು ಕಣ್ಣೆದುರಿಗೆ ಬಂದರು. ಸ್ವತಃ 'Madame tussaud' (ಮ್ಯಾಡಂ ಟ್ಯುಸಾಡ) ಳ ಪ್ರತಿಮೆಯೂ 'Sleeping Beauty' (ಮಲಗಿದ ಚೆಲುವು) ಎಂಬ ಶಯನಾವಸ್ಥೆಯ ಆಕೃತಿಯ ಬದಿಯಲ್ಲಿ ಕುಳಿತಿದೆ. ಮಲಗಿದ ರಾಜಕುಮಾರಿಯೂ ಉಸುರಾಡಿಸಿದಾಗ ಎದೆಯ ಏರಿಳಿತದ ಉಸಿರು ಕಂಡುಬರುವಂತೆ ವಿದ್ಯುತ್ತಿನ ವ್ಯವಸ್ಥೆಯನ್ನು ಮಾಡಿದ್ದಾರೆ. ಸುಪ್ತ ಸೌಂದರ್ಯದ ಬದಿಗೆ ಈ ಮುದುಕಿಯ ಪ್ರತಿಮೆಯನ್ನಿಟ್ಟುದು ಯಥಾಯೋಗ್ಯವಾಗಿದೆ. ಅವಳು ಸೃಜಿಸಿದುದೆಲ್ಲ 'ಸುಪ್ತ ಸೌಂದರ್ಯ'–ಜೀವಕಳೆಯಿದ್ದರೂ ಜೀವವಿಲ್ಲದ ರಾಜ್ಯ! ಅರಸುಮನೆತನದ ಎದುರಿಗೆ ಈಗಿನ ಮಂತ್ರಿಮಂಡಳವು ಕೂತಿದೆ. ನಡುವೆ ಬೇರೆಬೇರೆಯವರ ಅನೇಕಾನೇಕ ಪ್ರತಿಮೆಗಳಿವೆ. ಸಾಹಿತ್ಯವಿಭಾಗದಲ್ಲಿ ಚಾಸರ್, ಶೇಕ್ಸಪೀಯರ್, ಮಿಲ್ಟನ್, ಶಾ, ಕಿಪ್ಲಿಂಗ್ ಮೊದಲಾದವರಿದ್ದಾರೆ. ಜೀವಂತ ಸಾಹಿತಿಗಳು ಇಲ್ಲಿ ಬಂದು ತಮ್ಮ ಮೋರೆಯನ್ನು ನೋಡಿಕೊಂಡು ಹೋದರೆ ಅವರಿಗೆನಿಸಬಹುದು,– ಮೇಣದಲ್ಲಿ ತಮ್ಮ ಆಕೃತಿಯೂ ಅರಳಿದಂತೆ ತಮ್ಮ ಮನಸ್ಸಿನ ಮೇಣದಲ್ಲಿ ತಾವು ಜಗತ್ತನ್ನು ಅರಳಿಸುವರೆಂದು :

"ನನ್ನ ಮನಸಿನ ಮೇಣ ಮಾಡಿ ಕಟ್ಟುವೆ ನಾನು
ಚಿನ್ನದಾದರು ನಿನ್ನ ಮೇಣಬಸ್ತಿಯನೊಮ್ಮೆ......"

ಇದಕ್ಕಿಂತ ಸನ್ನಿವೇಶಗಳನ್ನು ಕಲ್ಪಿಸಿದ ರೀತಿಯೂ ಆಶ್ಚರ್ಯಕರವಾಗಿದೆ. ಮೂರ್ತಿಸಿದ ಸನ್ನಿವೇಶಗಳಿಗೆ "Tableaux" (ಟ್ಯಾಬ್ಲೋ) ಎಂದು ಹೇಳುತ್ತಾರೆ. 'ಮ್ಯಾಗ್ನಾ ಚಾರ್ಟಾ' ವನ್ನು ಸಹಿ ಮಾಡಿದ ಜಾನನ ರೀತಿ, ನೆಲ್ಸನ್ನನು ಸತ್ತ ರೀತಿ, ಕ್ರಿಶ್ಚನ್ನರನ್ನು ರೋಮನ್ನರು ಸಿಂಹಗಳ ಬಾಯಿಗೆ ಕೊಡುವ ರೀತಿ, ಎಲ್ಲವನ್ನೂ ಬೆಳಕಿನ ಆಟದಿಂದ ಕಣ್ಣು ಕಟ್ಟುವಂತೆ ಮಾಡಿದ್ದಾರೆ. ಮುಖ್ಯ ಪಾತ್ರವೊಂದೇ ಅಲ್ಲ, ಉಳಿದ ಎಲ್ಲ ವ್ಯಕ್ತಿಗಳ ಭಿನ್ನಭಿನ್ನ ಭಾವನೆಯನ್ನೂ ನಿಚ್ಚಳವಾಗಿ ತೋರಿಸಿದ್ದಾರೆ. ಸ್ಕಾಟಲಂಡದ ರಾಣಿಯಾದ ಮೇರಿಯ ವಧೆಯನ್ನು ಹೃದಯದ್ರಾವಕವಾಗುವಂತೆ ಏರ್ಪಡಿಸಿದ್ದಾರೆ. ಆ ಸುಂದರಿಯ ಕುತ್ತಿಗೆಯ ಮೇಲೆ–ನೆಲಕ್ಕೆ

ಕೊತು ಕಬ್ಬಿಣದ ತುಂಡಿನ ಮೇಲೆ ಇಟ್ಟಂಥ ಕುತ್ತಿಗೆ–ಬುಡದಲ್ಲಿ ಕಣ್ಣು ಮುಚ್ಚಿವೆ– ಕಣ್ಣು ಕಟ್ಟಿಕೊಂಡ ಕೊಲೆಗಾರನ ಕೊಡಲಿಯು ಬೀಳುತ್ತದೆ, ಇನ್ನೊಂದು ಕ್ಷಣಕ್ಕೆ ಬೀಳುತ್ತದೆ! ಉಳಿಸಬೇಕೆಂದು ಜೀವವು ಹಾತೊರೆಯುವದು! ಆದರೆ ನಿರುಪಾಯವಾಗಿ ಸುತ್ತಲು ನೋಡುತ್ತ ನಿಂತವರ ಪ್ರತಿಮೆಗಳನ್ನು ನೋಡಿ ಸುಮ್ಮನಾಗುವದು.

ಇಲ್ಲಿಯೇ ಫ್ರೆಂಚ್ ಮಹಾಕ್ರಾಂತಿಯ ಕಾಲಕ್ಕೆ ಲುಯಿಯನ್ನೂ ಅವನ ಅರಸುಮನೆತನವನ್ನೂ ವಧಿಸಿದ 'ಗಿಲೋಟಾಯಿನ್' ಚೂರಿಯು ನೋಡಲು ಸಿಗುವದು. ಎಷ್ಟೊಂದು 'ಅರಸೊತ್ತಿಗೆಯ ಕುತ್ತಿಗೆಗಳನ್ನು ಅದು ಕಡಿದಿತು!' ಎಂದು ವಿಚಾರ ಬಂದಾಗ ನಮ್ಮ ಕುತ್ತಿಗೆ ಶಿರಗಳು ಬಿಗಿದು ಬರುವವು! 'ಬ್ಯಾಸ್ಟಾಯಿಲ್' ಎಂಬ ಪ್ರಸಿದ್ಧ ಫ್ರೆಂಚ್ ಸೆರೆಮನೆಯ ಕೀಲಿಕೈಯು ಹತ್ತಿರದಲ್ಲಿಯೇ ಕಾಣುವದು. ನೂರಾರು ವರ್ಷಗಳ ದಾಸ್ಯದ ಪ್ರತೀಕವದು. ಚೂರಿಯು ಈ ದಾಸ್ಯವನ್ನು ಕಡಿದು ಹಾಕಿದ ಕ್ರಾಂತಿಯ ಪ್ರತೀಕ! ಜಗತ್ತಿನ ಅದ್ಭುತಗಳಲ್ಲಿ ಇವೆರಡು!

ಆಮೇಲೆ 'Record Makers' (ರೆಕಾರ್ಡ ಮೇಕರ್ಸ) ಎಂಬ ವಿಭಾಗದ ಕಡೆಗೆ ನಡೆದೆ. ಇಲ್ಲಿ ಭೂಶೋಧಕರು, ಪ್ರಸಿದ್ಧ ಸಿನೇಮಾ ನಟ-ನಟಿಯರು, ಆಟಗಾರರು ಈ ಎಲ್ಲರ ಪ್ರತಿಮೆಗಳಿವೆ. ಇಲ್ಲಿಂದ 'ಅರಸರ ವಿಭಾಗ'ಕ್ಕೆ ಹೋದಾಗ ಆಂಗ್ಲದೇಶದ ಅನೇಕ ಅರಸು-ಅರಸಿಯರು ಕಾಣುವರು. ಇಲ್ಲಿ ಮುಖ್ಯವಾಗಿ ಎಂಟನೇ ಹೆನ್ರಿಯನ್ನು ನೋಡಬೇಕು! ಅವನ ಆರು ಪತ್ನಿಯರು– ಇವರಲ್ಲಿ ಅನೇಕರಿಗೆ ಹೆನ್ರಿಯು ಮರಣ ಶಿಕ್ಷೆ ವಿಧಿಸಿದ! ದೀನರಾಗಿ ಅವನನ್ನು ನೋಡುತ್ತ ನಿಂತಿದ್ದಾರೆ. ಈ ಮೇಣಬಸ್ತಿಯಲ್ಲಿ ಅಮೇರಿಕನ್ ಹಾಗು 'ಧಾರ್ಮಿಕ' ವಿಭಾಗಗಳೂ ಇವೆ.

ಇಲ್ಲಿಂದ ಸಾಗಿ ಕೆಳಗಿನ ಕತ್ತಲೆಯ ಕೋಣೆಯಲ್ಲಿ ಹೋಗಬೇಕು. ಅದಕ್ಕೆ "Chamber of Horrors" (ಭೀಕರ ಮಂದಿರ) ಎಂದು ಹೆಸರು. ಒಳಗೆ ಹೋಗುವಾಗ ಸಹ ಮೈಮೇಲೆ ಮುಳ್ಳು ಬರುತ್ತದೆ. ಮಿಣಿ ಮಿಣಿ ಕಂದೀಲುಗಳನ್ನು ಹಾದಿಗುಂಟ ಹಚ್ಚಿಟ್ಟಿದ್ದಾರೆ.

ಸೆರೆಮನೆಯ ವಾತಾವರಣವೆಲ್ಲ ಇಲ್ಲಿ ಬಂದಿದೆ. ಒಳಗೆ ಕೈದಿಗಳು, ಕೊಲೆಗಾರರು, ಪ್ರಸಿದ್ಧ ಅಪರಾಧಿಗಳು ಇವರೆಲ್ಲರ ಪ್ರತಿಮೆಗಳು ಒಂದೊಂದು ಮೂಲೆಯಲ್ಲಿ ಹೆದರಿಕೆ ಬರುವ ಹಾಗೆ ನಿಂತಿವೆ. ಕೆಲವು ಸೆರೆಮನೆಯಲ್ಲಿರುವಂತೆ ಒಂದು ಸಣ್ಣ ಕಂದೀಲಿನ ಬೆಳಕಿನಲ್ಲಿ ಕೂತಿವೆ. ಯಾವನೋ ಒಬ್ಬ ಪುಣ್ಯಾತ್ಮನು ಒಂದು ಸಣ್ಣ ಟಬ್ಬಿನಲ್ಲಿ ಒಬ್ಬ ಹೆಣ್ಣು ಮಗಳನ್ನು ಮುಳುಗಿಸಿದನಂತೆ. ಅದನ್ನು ಇಲ್ಲಿ ತಂದಿಟ್ಟಿದ್ದಾರೆ. ಅನೇಕ ಹೆಣ್ಣು ಅಪರಾಧಿಗಳ ಮೇಣದಾಕೃತಿಗಳು ಇಲ್ಲಿವೆ. ಹಳೆಯ ಸೆರೆಮನೆಗಳ ದೊಡ್ಡ ಗಂಟೆಗಳಿವೆ. ಅಲ್ಲದೆ ಮರಣ ದಂಡನೆಯನ್ನು ವಿವಿಧವಾಗಿ ವಿಧಿಸುವ ರೀತಿಗಳನ್ನು ಇಲ್ಲಿ ಉದಾಹರಿಸಿದ್ದಾರೆ, Guillotine (ಗ್ಯುಲೋ-ಟಾಯಿನ) ವಿದ್ಯುತ್ತಿನ ರೀತಿ, ಮುಂತಾದ್ದು. ಮರೆಗೆ 'for adults only' (ದೊಡ್ಡವರಿಗಾಗಿ ಮಾತ್ರ) ಎಂಬ ಮೂಲೆಯಿದೆ. ಅಲ್ಲಿ ಹೊಟ್ಟೆಯಲ್ಲಿ ಮುಳ್ಳು ಮಳೆಯನ್ನು ಹಾಕಿ ಮನುಷ್ಯನನ್ನು ತೂಗು ಬಿಡುವ ಮಾದರಿಯು ಕಾಣುವದು. ಇಲ್ಲಿಂದ ಹೊರಗೆ ಬಿದ್ದರೆ ಸಾಕೆಂದು ಮನಸ್ಸು ಕಳವಳಗೊಂಡು ಹೊಯ್ದಾಡುವದು. ವೇದಾಂತ-ಕಾವ್ಯವನ್ನೆಲ್ಲ ಬಿಟ್ಟು ವಿನೋದವನ್ನು ಬೇಡುವದು. ಅದಕ್ಕೂ ಆಸ್ಪದವಿದೆ. ಇಲ್ಲಿಂದ ಹೊರಬಿದ್ದೊಡನೆ ನಾವು "Amusement Arcode" (ವಿನೋದ ಗೃಹ) ಹಾಗು "The Hall of Distorting Mirrors" (ವಿರೂಪಗೊಳಿಸುವ ಕನ್ನಡಿಗಳ ಮನೆ) ಎಂಬ ವಿಭಾಗಗಳನ್ನು ಪ್ರವೇಶಿಸಬಹುದು. ಮೊದಲ ನೆಯದು 'Slot Machine' (ಸ್ಲಾಟ ಮಶೀನ) ದ ರಾಜ್ಯ. ಒಂದು ಪೆನಿಯನ್ನು ಯಂತ್ರದಲ್ಲಿಟ್ಟರೆ ಸಾಕು, ಎರಡು ಗೊಂಬೆಗಳು 'ಸಾಯಕಲ್' ಪಂದ್ಯಾಟವನ್ನು ಸುರುವು ಮಾಡುವವು! ಇನ್ನೊಂದು ಯಂತ್ರದ ಎದುರಿಗೆ ನಿಂತು ಅಲ್ಲಿಯ ಕನ್ನಡಿಯಲ್ಲಿ ಮೋರೆ ನೋಡುತ್ತ ಪೆನಿಯನ್ನಿಟ್ಟರೆ ನಮ್ಮ ಭವಿಷ್ಯವು ಕಾಣುವದಂತೆ! ನಾನಿಟ್ಟು ನೋಡಿದೆ. 'ಪಂಚ ಭವತಿ ಪಂಚ ನಭವತಿ' ತರಹರದ ಭವಿಷ್ಯಗಳನ್ನೊಳಗೊಂಡ ಕಾರ್ಡೊಂದು ಮಾತ್ರ ಕೈಯಲ್ಲಿ ಬಂತು! ಇನ್ನೊಂದರಲ್ಲಿ ಪೆನಿಯನ್ನು ಇಟ್ಟು ಕೈಯೊತ್ತಿದರೆ, ಹಸ್ತ ಸಾಮುದ್ರಿಕದ ರೀತಿಯಿಂದ ಭವಿಷ್ಯವು



**ಟಬ್ಬಿನಲ್ಲಿಯ ಕೊಲೆ**

( ಪುಟ ೧೫೨ )



ಮೇಣದಲ್ಲಿ ಅರಳಿಸಿದ ಮೂರ್ತಿಗಳು (Record Makers)

( ಪುಟ ೧೧ )

ತಿಳಿಯುವದೆಂದು ಬರೆದಿದ್ದಾರೆ. ಆದರೆ ತಿಳಿಯುವದಿಲ್ಲವೆಂದು ನಮಗೆ ಹಿಂದುಗಡೆ ಹೊಳೆಯುತ್ತದೆ! ಇಂಥ ನೂರೆಂಟು ಆಟಗಳಿವೆ ಇಲ್ಲಿ!

ಹೀಗೆ ಆಶ್ಚರ್ಯ, ಆನಂದ, ದುಃಖ, ಕುತೂಹಲ, ಭಯ, ವಿನೋದ,– ಈ ಭಾವನಾಲಹರಿಗಳಿಂದ ತಟಸ್ಥರಾಗಿ ನಾವು ಮೇಣಬಸ್ತಿಯಲ್ಲಿ ಅಲೆಯುತ್ತೇವೆ. ಹೊರಗೆ ಬಂದಮೇಲೆ ಜಗತ್ತಿನ ಕಲ್ಪನೆ ಬರುತ್ತದೆ, ಲಂಡನ್ನಿನ ಮಳೆ, ಮೋಟರಿನ ಸಪ್ಪಳ, ಧಡಂ ಧಡಾಕಿ..!

---

## ೩೨

ಆಕ್ಸಫರ್ಡ

. . . . . . ೧೯—೧೨—೩೬

ನಾವಿದ್ದಲ್ಲಿಗೆ ಒಂದು ವಿಚಿತ್ರ ಜೋಡಿ ಬಂದಿದೆ. ಒಬ್ಬ ಸೀಖ್ ಸಭ್ಯಗೃಹಸ್ಥನು ಒಬ್ಬ ಶ್ವೇತಕುಮಾರಿಯನ್ನು ಲಗ್ನಮಾಡಿಕೊಂಡು ಸ್ಕಾಟ್ಲಂಡದಿಂದ ಇಲ್ಲಿಗೆ ಬಂದಿದ್ದಾನೆ. ಅವನ ವಯಸ್ಸು ಸುಮಾರು ಮೂವತ್ತೈದಿರಬೇಕು; ಹೆಣ್ಣುಮಗಳದು ಮೂವತ್ತರಷ್ಟು. ಅವನ ಭವ್ಯವಾದ ಗಡ್ಡವನ್ನು ನೋಡಿದರೆ ಹೆದರಿ ಆ ಹೆಣ್ಣುಮಗಳು ಓಡಿ ಹೋಗಬೇಕು; ಆದರೆ ಲಗ್ನವಾಗಿದ್ದಾಳೆ. "He is a nice man to talk to. But I do'nt like his appearance" (ಅವನು ಮಾತಾಡಲಿಕ್ಕೆ ಸೊಗಸಾದ ಮನುಷ್ಯ. ಆದರೆ ಅವನ ಮುಖಚರ್ಯೆ ನನಗೆ ಸೇರುವದಿಲ್ಲ) ಎಂದು 'ವಿನಿ' (Winnie) ಎಂಬ ಇಲ್ಲಿಯ ಕೆಲಸಗಿತ್ತಿಯು ಹೇಳಿದಳು. "But some one liked it!" (ಆದರೆ ಯಾರೋ ಒಬ್ಬರಿಗೆ ಸೇರಿತಲ್ಲ!) ಎಂದು ನಾನೆಂದೆ. "Yes. Definitely" (ಹೌದು, ನಿಜವಾಗಿ) ಎಂದು ಆಕೆ ನಕ್ಕಳು.

* * * *

೨೦—೧೨—೩೬

ಇಲ್ಲಿ 'ಹರಿಜನ' ಜಾತಿಯ ಒಬ್ಬ ತರುಣರಿದ್ದಾರೆ. ಅವರು ನಿಷ್ಪ್ರಾಣಿಯವರು. ಆದರೆ—ಅಥವಾ ಅಂತೇ—ಮರಾಠಿ ಮಾತನಾಡುತ್ತಾರೆ. 'ಬಾರ್' ಪರೀಕ್ಷೆಗಾಗಿ ಬಂದಿದ್ದಾರೆ. ಸ್ವಭಾವದಿಂದ ಸಜ್ಜನರು. ನಾನು ಕರ್ನಾಟಕ ಕಾಲೇಜಿನಲ್ಲಿ 'ಫೆಲೋ' ಇದ್ದಾಗ ಇವರು ಅಲ್ಲಿ ನನ್ನ ಕೈಕೆಳಗೆ ಕಲಿತಿದ್ದರಂತೆ. ಇಂದು ಅವರೊಡನೆ ಹರಿಜನರ ಸಮಸ್ಯೆಯ ಬಗ್ಗೆ ಮಾತನಾಡಿದೆ. ಈ ಸಂವಾದಕ್ಕೆ ನನ್ನ ಗೆಳೆಯರೊಬ್ಬರನ್ನು ಅಧ್ಯಕ್ಷರನ್ನಾಗಿ ಮಾಡಿದ್ದೆ.

ಇವರು ಡಾಕ್ಟರ್ ಅಂಬೇಡಕರರ ಅನುಯಾಯಿಗಳು. ಉಳಿದ ಮತದವರಂತೆ ಹಿಂದುಗಳು ಹರಿಜನರಿಗೆ ಬಾಧ್ಯತೆಯನ್ನೂ ದ್ರವ್ಯಸಹಾಯವನ್ನೂ ಕೊಡಲು ಸಿದ್ಧರಾದರೆ ಅವರು ಹಿಂದು ಸಮಾಜದಲ್ಲಿಯೇ ಉಳಿಯಬಹುದೆಂದು ನನ್ನ ಹರಿಜನ ಮಿತ್ರರು ಸಾಧಿಸಿದರು. 'ಕೋಟ್ಯಾವಧಿ ರೂಪಾಯಿಯನ್ನು ಖರ್ಚು ಮಾಡುವೆವು; ನಮ್ಮ ಧರ್ಮವನ್ನು ಸ್ವೀಕರಿಸಿ'ರೆಂದು ಆಗಾಖಾನರಿಂದ ಸಂದೇಶವು ಡಾಕ್ಟರರಿಗೆ ಹೋಗಿದೆಯೆಂದು ಹಾರು ಸುದ್ದಿ; ಅಂಥ ಆಶ್ವಾಸನವನ್ನೇ ಮ್ಯಾಕ್ಡೊನಾಲ್ಡ ಮಂತ್ರಿಗಳು ಅವರಿಗೆ ಕ್ರಿಸ್ತಮತದ ವಿಷಯವಾಗಿ ಕೊಟ್ಟಿರುವರೆಂದು ಸುದ್ದಿ. ಇದರ ಬಗ್ಗೆ ನಾನು ನನ್ನ ಸ್ನೇಹಿತರಿಗೆ ಕೇಳಲಿಲ್ಲ. ಒಂದು ಮಾತ್ರ ನಿಜ. ಇಲ್ಲಿಯ ಎಲ್ಲ ಮಿಶನರಿ ಸಂಘಗಳು ಜ್ಯಾನುವರಿ ತಿಂಗಳಲ್ಲಿ ಒಂದು ದೊಡ್ಡ ಸಭೆಯನ್ನು ಕೂಡಿಸಿವೆ. "A splendid opportunity for christian believers. Funds wanted to spread the gospel among the millions of untouchables in India" (ಕ್ರಿಶ್ಚನ ಶ್ರದ್ಧಾಳುಗಳಿಗೆ ಸುವರ್ಣಸಂಧಿ. ಹಿಂದುಸ್ಥಾನದ ಲಕ್ಷಾವಧಿ ಅಸ್ಪೃಶ್ಯರಲ್ಲಿ ಕ್ರಿಸ್ತಸಂದೇಶವನ್ನು ಬೀರಲು ಹಣಬೇಕು.) ಎಂಬ ಘೋಷಗಳು ಕಾಣಬರುತ್ತಿವೆ, ಕೇಳಬರುತ್ತಿವೆ.

ಹರಿಜನರ ಉದ್ಧಾರಕ್ಕೆ ಮೂರು ಹಾದಿಗಳಿವೆ: (೧) ಹಿಂದುಗಳು ತಮ್ಮ ವ್ಯವಹಾರವನ್ನು ತಿದ್ದಿ—ಸಾರ್ವತ್ರಿಕವಾಗಿ ತಿದ್ದಿ—ಅವರೊಡನೆ

ಸರಿಸಮಾನರಾಗಿ ನಡೆದುಕೊಳ್ಳಬೇಕು. (೨) ತಮ್ಮದೇ ಒಂದು ಸಂಗಡ ಸನ್ನು ಕಟ್ಟಬೇಕು. ದ್ರಾವಿಡ ಕಾಲದ ತಮ್ಮ ಸಂಸ್ಕೃತಿಯನ್ನು ಶೋಧಿಸಿ ಅದರ ತಳಹದಿಯ ಮೇಲೆ ಹೊಸ ಜನಾಂಗವನ್ನು ಕಟ್ಟಬೇಕು. ಈಗ ಅವರು ಪಾಲಿಸುವ ಧರ್ಮಗಳ್ಕೇ ಸಮನ್ವಯದ ರೂಪವನ್ನು ಕೊಟ್ಟು ಆಚರಿಸಬೇಕು. (ಇದನ್ನು ನಾನು ಸೂಚಿಸಿದಾಗ–ನಮಗೆ ದ್ರವ್ಯಸಹಾಯವಿಲ್ಲ, ಶಿಸ್ತಿಲ್ಲ,–ಅದು ದೊರೆತ ಕಡೆಗೆ ನಾವು ಹೋಗುವದು ಸುಲಭವಾದುದೆಂದು ನನ್ನ ಸ್ನೇಹಿತರು ಹೇಳಿದರು.) (೩) ಧರ್ಮಾಂತರ. ಇವುಗಳಲ್ಲಿ ಮೊದಲನೆಯ ಹಾಗು ಕಡೆಯ ಸುಧಾರಣೆಗಳು ದೈವವು ವಿಧಿಸಿದಂತೆ ನಡೆದಿವೆ. ನನ್ನ 'Harijan to his American brother' (ತನ್ನ ಅಮೇರಿಕನ ಅಣ್ಣತಮ್ಮನಿಗೆ ಹರಿಜನನ ಹೇಳಿಕೆ) ಎಂಬ ಕವಿತೆಯನ್ನೋದಿ ಸಂವಾದವು ಮುಗಿಯಿತು.

ಅವರು ತಮ್ಮ ಅನೇಕ ಕಟು ಅನುಭವಗಳನ್ನು ಹೇಳಿದರು–ಬಾವಿಗಳಲ್ಲಿಯ ನೀರಿನ ಬಗ್ಗೆ, ಹಿಂದು ಸ್ನೇಹಿತರ–ರಾಷ್ಟ್ರಭಕ್ತರ ಸಹ–ಮನೆಗೆ ಹೋಗಿದ್ದರ ಬಗ್ಗೆ. "ಹಾದಿಯಲ್ಲಿ ಭೆಟ್ಟಿಯಾಗಿ ಮಾತನಾಡಿಸಿದವರು 'ಹರಿಜನರೆಂದು' ಹೇಳಿದ ಕೂಡಲೆ ದೂರ ಸರಿದರು! ನಿಮಗೆ ಕೊಡೆಯನ್ನು ಹಿಡಿದುಕೊಳ್ಳುವ ರೂಢಿಯೇಕೆಂದು ಕೇಳಿದರು! ಹೀಗೆ ಒಂಟೆಗೆ ನಾಲು ಹತ್ತಿಕೊಂಡ ಹಾಗೆ ನಾವು ಹಿಂದು ಸಮಾಜಕ್ಕೆ ಎಷ್ಟು ದಿನ ಹತ್ತಿಕೊಂಡಿರಬೇಕು" ಎಂದು ನನ್ನ ಸ್ನೇಹಿತರು ಕೇಳಿದರು. ಅವರ ಆ ಉಪಮೆಯಲ್ಲಿ ಹರಿಜನರ ಅನುಪಮವಾದ ದುಃಖವು ಎಷ್ಟೊಂದು ಔಚಿತ್ಯದಿಂದ ವ್ಯಕ್ತವಾಗುತ್ತದೆ!

* * * *

'Revudeville' (ರೆವ್ಯೂಡೆವ್ಹಿಲ್ಲ) ಎಂಬ ಹೊಸ ತರಹದ ದೃಶ್ಯ ಪ್ರಯೋಗವನ್ನು ನೋಡಲು ಹೋಗಿದ್ದೆ. 'ಸುಪ್ತಸೌಂದರ್ಯ'ದ Ballet (ಬ್ಯಾಲೆಟ್) ಇಲ್ಲವೆ ಸಾಮೂಹಿಕ ಸನ್ನಿವೇಶಪರ ನೃತ್ಯವು ನೋಡುವ ಹಾಗಿತ್ತು: ಇಲ್ಲಿ ಮಾತಿಲ್ಲ; ಎಲ್ಲವೂ ಮುದ್ರೆ, ಸನ್ನೆ ಹಾಗು ನೃತ್ಯದ ಮೇಲೆ ನಡೆಯುತ್ತದೆ. 'Tableau' (ಟ್ಯಾಬ್ಲು) ವನ್ನು ನೋಡಿ ನನ್ನಲ್ಲಿ

ಆಶ್ಚರ್ಯ ಉಂಟಾಯಿತು. ಕೆಲವು ಸುಂದರ ದೃಶ್ಯಗಳನ್ನು ರೂಪಿಸಲು ನಟಿಯರು ಇಲ್ಲಿ ನಗ್ನರಾಗಿ ಬರುತ್ತಾರೆ. 'ತಮಾಶಾ' ಅಲ್ಲವಷ್ಟೆ?? ವೇಷ ಹಾಗು ಬೆಳಕಿನ ರಚನೆಯು ಅಪ್ರತಿಮವಾದದ್ದು. ಶೃಂಗಾರ ಹಾಸ್ಯಗಳನ್ನು ಒಂದರ ಮೇಲೊಂದು ಪ್ರಯೋಗಿಸುವದೇ 'Revu' (ರಿವ್ಯೂ)ದ ಜೀವಾಳ.

*　　　*　　　*　　　*

೨೧—೧೨—೩೬

ಇಂದು ಇಲ್ಲಿಯ ಒಬ್ಬ ಸ್ನೇಹಿತರು ಯುನಿವ್ಹರ್ಸಿಟಿ ಕಾಲೇಜಿನ ಹತ್ತಿರ ಇರುವ 'Indian Emporium' (ಇಂಡಿಯನ್ ಎಂಪೋರಿಯಂ)ಗೆ ಹೋಗಿ ಮಾವಿನ ಹಣ್ಣಿನ ಡಬ್ಬಿಯನ್ನು ತೆಗೆದುಕೊಂಡು ಬಂದರು. ಹಣ್ಣನ್ನು ಹೆಚ್ಚಿ ಕರಣಿಯನ್ನು ತೆಗೆದು ಡಬ್ಬಿಯಲ್ಲಿಟ್ಟು ಹಿಂದುಸ್ತಾನದಿಂದ ಇಲ್ಲಿಗೆ ಕಳಿಸುತ್ತಾರೆ. ಎಲ್ಲರೂ ಕೂಡಿ ತಿಂದೆವು. ಎಲ್ಲರಿಗೂ ತಾವು ತಮ್ಮ ತಮ್ಮ ಮನೆಯಲ್ಲಿ ಮಾವಿನ ಹಣ್ಣನ್ನು ತಿಂದ ಕಥೆಯು ನೆನಪಾಯಿತು. ಮುದುಕರು ಮನೆಯಲ್ಲಿ ಕೂತು ಹಣ್ಣಿನ ರಾಶಿಯನ್ನು ಇಳಿಸಿದಾಗ "ಇದು ಯಾವ ಗಿಡದ ಹಣ್ಣು? ತೋಟದ ಬಾವಿಯ ಹತ್ತಿರದ ಗಿಡದ್ದಿರಬಹುದೇನು?" ಎಂದು ಲೆಕ್ಕ ಹಾಕುವದು ನೆನಪಾಗಿ ಎಲ್ಲರೂ ನಕ್ಕೆವು.

---

## ೩೩

......

ಲಂಡನ್

೨೩—೧೨—೩೩

ನಿನ್ನೆ ನಾನು ಒಂದು ನಾಟಕವನ್ನು ನೋಡಿ ತಿರುಗಿ ಬರುತ್ತಿದ್ದೆ. 'Corner-house'( ಕಾರ್ನರ ಹೌಸ್ )ನಲ್ಲಿ ಕಾಫಿ ತೆಗೆದುಕೊಂಡು ಬಂದೆ. ಲಂಡನ್ನಿನ ವೈಭವವೆಲ್ಲ ರಾತ್ರಿಯ ವೇಳೆಯಲ್ಲಿ ಕಣ್ಣುಕಟ್ಟುತ್ತದೆ. ವಿದ್ಯುಲ್ಲತೆಯನ್ನು ಜಾಹೀರಾತುಗಾರರು ಕುಣಿಸಾಡಿ ಬಿಟ್ಟಿದ್ದಾರೆ. 'Strand' (ಸ್ಟ್ರ್ಯಾಂಡ) 'Piccadily' (ಪಿಕ್ಯಾಡಿಲಿ) ಮೊದಲಾದ ಕೂಟಗಳಲ್ಲಿ ದೀಪಗಳೇ ಬೇಕಿಲ್ಲ. ಓಕಳಿಯಂಥ ಬೆಳಕು ಎಲ್ಲ ಕಡೆಯಿಂದ ಬಂದು ನುಗ್ಗುತ್ತದೆ. ಒಂದು ಮಾಯಾನಗರದಲ್ಲಿ ತಿರುಗಾಡಿದಂತೆ ಭಾಸವಾಗುತ್ತದೆ. ಅದರಲ್ಲಿ 'Corner-house' ( ಕಾರ್ನರ ಹೌಸ ) ಹೊಕ್ಕೊಡನೆ ತೀರಿತು ! ನಾನು ಹೋದ 'Corner-house' ( ಕಾರ್ನರ ಹೌಸ )ನಲ್ಲಿ ಕಮಲದ ಹೂವನ್ನೇ ಎಲ್ಲೆಡೆಗೆ ವಾಸ್ತುಶಿಲ್ಪಿಯು ಉಪಯೋಗಿಸಿದ್ದನು. ಅಲ್ಲಿಯ ಎಲ್ಲ ಭವ್ಯಸ್ತಂಭಗಳು ಕಮಲಗಳಂತೆ ಅರಳಿ ಕಣ್ಣು ಕುಕ್ಕಿಸುವಂಥ ಬೆಳಕನ್ನು ಬಿಡುತ್ತಿದ್ದವು. ಕಣ್ಣೆತ್ತಿ ನೋಡಲು, ಎಲ್ಲೆಡೆಗೆ ಕಮಲದ ಆಕೃತಿಗಳನ್ನೇ ಕೊರೆದಿದ್ದು ಕಾಣುತ್ತಿತ್ತು. ಸುತ್ತಲು ಉತ್ತಮ ಅರಿವೆಗಳನ್ನು ಧರಿಸಿದ ಸೇವಕರು ( Waiters); ಒಂದೆಡೆಗೆ ವಿಚಿತ್ರ ವೇಷಗಳನ್ನು ಧರಿಸಿ ಹಾಡುವ, ಬಾರಿಸುವ ಮೇಳದವರು. ಸ್ವತಃ ಉಪಹಾರಗೃಹದಲ್ಲಿ ನೂರಾರು ಜನರು ಕೂತು ಹರಟೆ

ಹೊಡೆಯುತ್ತಿದ್ದಾರೆ, ನಗುತ್ತಿದ್ದಾರೆ, ಕುಡಿಯುತ್ತಿದ್ದಾರೆ! 'Auden' (ಆಡೆನ್) ಕವಿಯು ಬರೆದಂತೆ, "Pairs off in twos and twos" (ಎರಡೆರಡರ ಜೋಡು)–ಗಂಡು–ಹೆಣ್ಣು ಮದೋನ್ಮತ್ತತೆಯಲ್ಲಿ ಕಲೆತು ಕುಳಿತಿವೆ! ರಾತ್ರಿಯೆಲ್ಲ ಈ ಉಪಹಾರಗೃಹಗಳು ತೆರೆದಿರುತ್ತವೆ. ರಾತ್ರಿಯೆಲ್ಲ ಇಲ್ಲಿಯ ಲೀಲೆ ಸಾಗಿರುತ್ತದೆ!

ನನ್ನ ಪರಿಚಯದವರೊಬ್ಬರು ಹೊತ್ತಾಗಿ ಮನೆಗೆ ಹೋದರು. ಎಷ್ಟು ಗಂಟೆ ಬಾರಿಸಿದರೂ ಒಳಗಿನವರಿಗೆ ಎಚ್ಚರವಾಗಲಿಲ್ಲ. ತಿರುಗಿ ನೋಡಿದರು. ತಾವು ಕುಳಿತ ಟ್ಯಾಕ್ಸಿಯಲ್ಲಿ ತಮ್ಮ ಕೋಟು ಹಾಗು ಕೀಲಿಕೈಯನ್ನು ಮರೆತುಬಿಟ್ಟಿದ್ದರು. 'Public Telephone' (ಪಬ್ಲಿಕ್ ಟೆಲಿಫೋನ)ಗೆ ಹೋಗಿ ಅಲ್ಲಿಂದ ಮನೆಯವರನ್ನು ಎಬ್ಬಿಸಲು ಪ್ರಯತ್ನಿಸಿದರು. ಅದೂ ಸಾಧ್ಯವಾಗಲಿಲ್ಲ. ಇನ್ನೇನು ಮಾಡುವದು? ಬೆಳಗಾಗುವವರೆಗೆ ಎಲ್ಲಿಯಾದರೂ ವೇಳೆ ಕಳೆಯಬೇಕೆಂದು 'Corner-house' (ಕಾರ್ನರ ಹೌಸ)ಗೆ ಹೋದರು. ಅಲ್ಲಿಯ 'waiter' (ವೇಟರ) ನಿಗೆ ತಮ್ಮ ಕಥೆ ಹೇಳುತ್ತ ಕಾಫಿ ಕುಡಿಯುತ್ತ ತೂಕಡಿಸುತ್ತ ಕುಳಿತರು. ಆ 'waiter' (ವೇಟರ) ನೂ ತೂಕಡಿಸುತ್ತಿದ್ದ. ಅಷ್ಟರಲ್ಲಿ ಒಬ್ಬ ಹುಡಿಗೆ ಬಂದು ಇವರ ಹತ್ತಿರ ಕುಳಿತು "you have lovely hair!" (ನಿಮ್ಮ ಕೂದಲು ಸುಂದರವಾಗಿವೆ) ಎಂದು ಬಾಣವೆಸೆದಳು. ಇವರು ಗಾಬರಿಯಾಗಿ ವರ್ತಮಾನಪತ್ರವನ್ನು ಓದುತ್ತ ಕುಳಿತವರು ಮೋರೆಯನ್ನೇ ಮೇಲಕ್ಕೆತ್ತಲಿಲ್ಲ. ಅವರಿಗೆ ಯಾರಲ್ಲಿಯೂ–ಸ್ವತಃ ತಮ್ಮಲ್ಲಿಯೂ ಕೂಡ-ವಿಶ್ವಾಸವಿರಲಿಲ್ಲ!

ಹೀಗೆ ಸಂಭವಿಸುತ್ತಿರುತ್ತದೆ. ನಾನು ಇನ್ನೊಂದು ಮಾತು ಬರೆಯುತ್ತಿದ್ದೆ! ನಾಟಕದಿಂದ ತಿರುಗಿ ಬರುವಾಗ 'ಟ್ಯೂಬ್' ದಿಂದ ಇಳಿದೆ. ಇಬ್ಬರು ಸಿಪಾಯರು ಒಬ್ಬ ಹೆಣ್ಣುಮಗಳನ್ನು ಹೊರುತ್ತಿದ್ದರು. 'Dance' (ಡಾನ್ಸ: ಕುಣಿತ)ಗೆಂದು ಹೋಗಿ ಕುಡಿದು ಬಂದು ಪ್ರಜ್ಞೆ ತಪ್ಪಿ ಗಾಡಿಯಲ್ಲಿ ಬಿದ್ದಿದ್ದಳು; ನಿಲ್ಮನೆಯಲ್ಲಿ ಆಕೆಯನ್ನು ಅಧಿಕಾರಿಗಳು ಇಳಿಸಿಕೊಂಡರು. ಸುಂದರ ರೂಪ, ವೇಷ, ಆದರೆ....ಏನಿದ್ದೇನು!

'Clay! Clay!' (ಮಣ್ಣು! ಮಣ್ಣು!) ಎಂದು ಕೈಲಾಸಂರವರ ನಾಟಕದಲ್ಲಿ ಕೃಷ್ಣನೊದರುವದು ನೆನಪಾಗುತ್ತದೆ!

* * * *

ನಾಡಿದ್ದು ಕ್ರಿಸ್ತನ ಜನ್ಮದಿವಸ. ಈಗಾಗಲೆ ಪ್ರತಿಸಂಜೆಗೆ ಹೆಣ್ಣುಮಕ್ಕಳು ಹಾಗು ಗಂಡಸರು ಕೂಡಿಕೊಂಡು ಒಟ್ಟು ದನಿಯಲ್ಲಿ 'Carols' (ಕ್ಯಾರೋಲ್ಸ) ಅಂದರೆ 'ಹುಟ್ಟಿದ ಹಾಡು' ಗಳನ್ನು ಹಾಡುತ್ತ ಹೋಗುತ್ತಿದ್ದಾರೆ.

* * * *

ನನ್ನ ಸ್ವಭಾವದಲ್ಲಿ ಒಂದು ದೋಷವಿರಬೇಕು: ನನ್ನ ಅನುಕೂಲವನ್ನು ನೋಡಲಿಕ್ಕೆ ಗೆಳೆಯರ ಇಲ್ಲವೆ ಪರಿಚಿತರ ಸಹಾಯವನ್ನು ಸಹಜವಾಗಿ ತೆಗೆದುಕೊಳ್ಳುತ್ತೇನೆ. ಆದರೆ ಅವರ ತೊಂದರೆಗಳ ಬಗ್ಗೆ ಅಷ್ಟೇ ಸಹಜವಾಗಿ ವಿಚಾರಮಾಡುವದಿಲ್ಲ. ಅವರು ಹೇಳಿದರೆ ಮಾತ್ರ ಅತ್ತಕಡೆಗೆ ಲಕ್ಷ್ಯಕೊಡುತ್ತೇನೆ. ಇದರಿಂದ ಅನೇಕರು ನೊಂದುಕೊಳ್ಳುತ್ತಾರೆ. ಒಂದು ಸಾಧನೆಯ–ಸಂಕಲ್ಪದ–ಭಾರವನ್ನು ಹೊತ್ತ ಮನುಷ್ಯನಿಗೆ ಇಂಥ ಸಹಾನುಭೂತಿಯನ್ನೂ ಸಹ ಸಾಗಿಸಿಕೊಂಡು ಅವುಗಳನ್ನು ತಾಕಲಾಡಗೊಡದೆ–ಹೋಗಲು ಏಕೆ ಬರಬಾರದು?

---

## ೩೪

ಲಂಡನ್

೨೫—೧೨—೩೬

ಇಂದು ಕ್ರಿಸ್ತಜಯಂತಿ. ಲಂಡನ್ನಿನಲ್ಲಿಯ ವೈಭವವು ಮುಗಿಲು ಮುಟ್ಟಿದೆ. ಮನೆಮನೆಯಲ್ಲಿಯ ಹಿಗ್ಗು ಎಗ್ಗಿಲ್ಲದೆ ಸಾಗಿದೆ. ನಮ್ಮ ಬೋರ್ಡಿಂಗ್ ಮನೆಯಲ್ಲಿ ಇಂದು ಕ್ರಿಸ್ತಮಸ್ ಪಾರ್ಟಿಯಿದೆ. ಇಬ್ಬರು ಮೂವರು ತರುಣಿಯರು ಹೊರಗಿನಿಂದ ಆಮಂತ್ರಿತರಾಗಿದ್ದಾರೆ. ಇಂದು 'Turky' (ಬಾತಕೋಳಿ) ಕೊಯ್ಯುವ ದಿನ! ಮೇಜವಾನಿ ಪಸರಿಸಿದೆ ಮೋಜು ನಡೆದಿದೆ.

ಇಲ್ಲಿ ಒಂದು ಮಾತನ್ನು ಸ್ಪಷ್ಟಗೊಳಿಸಬೇಕು. ಪ್ರತಿಯೊಂದು ಮನೆಯಲ್ಲಿ ಇವತ್ತು 'Mistletoe' (ಮಿಸಲ್‌ಟೋ) ಎಂಬ ಬಳ್ಳಿಯ ತುಣುಕುಗಳನ್ನು ತೂಗುಹಾಕಿರುತ್ತಾರೆ, ದೀಪಾವಳಿಯಲ್ಲಿ ನಾವು ಮಾಲಿಂಗನ ಬಳ್ಳಿಯನ್ನು ಉಪಯೋಗಿಸುವಂತೆ. ಈ ಬಳ್ಳಿಯ ಬುಡಕ್ಕೆ ನಿಂತ ಯಾವ ಹೆಣ್ಣುಮಗಳನ್ನೂ ಸಹ ಯಾರೂ ಮುದ್ದಿಸಬಹುದು. ಇದು ರೋಮನ್ ಕಾಲದ ಪದ್ಧತಿಯಂತೆ. ಕ್ರಿಸ್ತಯುಗಗಳಲ್ಲಿ ಸಹ ಉಳಿದುಕೊಂಡು ಬಂದಿದೆ. ಈಗ ಅದು ಒಂದು ಹೆಜ್ಜೆ ಮುಂದುವರಿದಿದೆ. ಇಂಥ ಒಬ್ಬ ತರುಣಿಯನ್ನು ಮುದ್ದಿಸಬೇಕಾಗಿದೆಯೆಂದು ತಿಳಿಯುವಾ. ಆ ಬಳ್ಳಿಯ ತುಣುಕನ್ನು ಒಯ್ದು ಅವಳ ತಲೆಯ ಮೇಲೆ ಬಾಗಿಸಿದರೆ ತೀರಿತು, ಅವಳನ್ನು ಮುದ್ದಿಸಲು ಎಲ್ಲ ಭಾಧ್ಯತೆಯಿದ್ದಹಾಗೆ! ಈ ಮುದ್ದುಗಳಲ್ಲಿ ಕಾಮದ ಮದ್ದಿರುವದಿಲ್ಲ; ಎಲ್ಲರನ್ನೂ ಆನಂದಗೊಳಿಸಿ ಆಪ್ತಬಂಧುತ್ವವನ್ನು ಬೆಳಿಸುವದೇ ಈಗ ಅದರ ಉದ್ದೇಶವೆಂದು ಕಾಣುತ್ತದೆ. ಇದು ಪೂರ್ವಪೀಠಿಕೆಯಾಯಿತು. ನಮ್ಮ ಬೋರ್ಡಿಂಗಿನಲ್ಲಿಯ ಕ್ರಿಸ್ತಮಸ್ ಪಾರ್ಟಿಯ ವಿಷಯವನ್ನು ಇನ್ನು ಬರೆಯುತ್ತೇನೆ. ನಾನು ಊಟಕ್ಕೆ ಹೋದಾಗ ಎಲ್ಲರೂ ಬಂದು ಕುಳಿತಿದ್ದರು. ಅಕಸ್ಮಾತ್ತಾಗಿ

ನಾನು ಹೋಗಿ ಕುಳಿತ ಟೇಬಲ್ಲಿನ ಕಡೆಗೇ ಹಿಂದುಗಡೆ ಮೂವರು ಹೆಣ್ಣು ಮಕ್ಕಳು ಬಂದು ಕುಳಿತರು. ಟೇಬಲ್ಲಿನ ಮೇಲೆ ಕಾಗದದ ಚೆಂಡು, ಕೊಳವೆ ಮುಂತಾದವುಗಳನ್ನು ಇಟ್ಟಿದ್ದರು. ಇಬ್ಬರು ಒಂದನ್ನು ಹಿಡಿದು ಎರಡೂ ಕಡೆಗೆ ಜಗ್ಗಿದರೆ ವಿಲಕ್ಷಣ ಸಪ್ಪಳವಾಗುತ್ತಿತ್ತು. ಅದರೊಳಗಿಂದ ಕೊಡಂಗಿಯ ಟೊಪ್ಪಿಗೆಗಳು ಹೊರಬೀಳುತ್ತಿದ್ದವು. ಅವನ್ನು ಎಲ್ಲರೂ ಹಾಕಿಕೊಳ್ಳಬೇಕು, ಹೆಣ್ಣುಗಂಡಿನ ಭೇದವಿಲ್ಲದೆ. ನಾನು ಹಾಕದೆ ಇರುವದನ್ನು ನೋಡಿ ನನ್ನ ಹತ್ತಿರ ಕುಳಿತ ಹೆಣ್ಣುಮಗಳಿಗೆ ಸಮಾಧಾನವಾಗಲಿಲ್ಲ. "You must have a hat" (ನೀವು ಒಂದು ಟೊಪ್ಪಿಗೆ ಹಾಕಿಕೊಳ್ಳಲೇಬೇಕು) ಎಂದು ಒಂದು ಕೋಡಂಗಿಯ ಟೊಪ್ಪಿಗೆಯನ್ನು ತಂದು ನನ್ನ ತಲೆಯ ಮೇಲಿಟ್ಟಳು. ಮಂಗನಂತೆ ಅದನ್ನು ತಲೆಯಮೇಲಿಟ್ಟುಕೊಂಡು ನಾನು ಸುಮ್ಮನೆ ಕುಳಿತೆ!

ಮುಂದೆ ಬಡಿದಾಟಕ್ಕೆ ಆರಂಭವಾಯಿತು, ಕಾಗದದ ಚೆಂಡುಗಳನ್ನು ತೆಗೆದುಕೊಂಡು ಒಬ್ಬರನ್ನೊಬ್ಬರು ಹೊಡೆಯುವದು! ನನ್ನೆದುರಿಗೆ ಕುಳಿತ ಹೆಣ್ಣುಮಗಳ ಚಾಪಲ್ಯವು ಅಷ್ಟಿಷ್ಟೆಂದಲ್ಲ. ಗುರಿಯಿಟ್ಟು ಹೊಡೆಯುತ್ತಿದ್ದಳು, ಚೀರಾಡುತ್ತಿದ್ದಳು! ಗಂಡುಮಕ್ಕಳಲ್ಲಿ ಒಬ್ಬ ಚೈನಾದೇಶದ ವಿದ್ಯಾರ್ಥಿಯು ಹಿರಿದಾಗಿದ್ದನು. ಅವನ ಚೆಂಡಿನ ಹೊಡತಕ್ಕೆ ತಾಳಲಾರದೆ ಆ ಹೆಣ್ಣುಮಗಳು ಒದರುತ್ತಿದ್ದಳು!

ಈ ಎಲ್ಲ ಗಡಿಬಿಡಿಯಲ್ಲಿ ಊಟವು ನಡೆದೇ ಇತ್ತು. ಅದು ಮುಗಿದ ಮೇಲೆ 'mistletoe' (ಮಿಸಲ್‌ಟೋ)ದ ಮಹಾತ್ಮ್ಯಕ್ಕೆ ಪ್ರಾರಂಭವಾಯಿತು. ಚೈನಾ ವಿದ್ಯಾರ್ಥಿಯು ಬಳ್ಳಿಯ ಒಂದು ತುಣುಕನ್ನು ಹಿಡಿದುಕೊಂಡು ಬಂದು ಒಬ್ಬ ತರುಣಿಯನ್ನುದ್ದೇಶಿಸಿ "Look there are six berries in it. You must give me six kisses" (ನೋಡು, ಇದರಲ್ಲಿ ಆರು 'ಬೆರಿ' ಕಾಯಿಗಳಿವೆ. ನೀನು ನನಗೆ ಆರು ಮುದ್ದುಕೊಡಬೇಕು) ಎಂದು ವಾದ ಹಾಕಿ ಕಡೆಗೆ ಗೆದ್ದನು. ಆದರೆ ಅನೇಕ ಭಾರತೀಯ ವಿದ್ಯಾರ್ಥಿಗಳು ನಾಚಿಕೊಂಡು ಮುಂದುವರಿಯಲಾರದೆ ಸುಮ್ಮನಿದ್ದರು. ಆಗ ಒಬ್ಬ ಹೆಣ್ಣುಮಗಳು ತನ್ನ ವಿಜಯಯಾತ್ರೆಯನ್ನು ಪ್ರಾರಂಭಿಸಿದಳು! ಆಕೆಯ ಉತ್ಸಾಹದ ಮುಂದೆ ಯಾರ

ಆಟವೂ ನಡೆಯಲಿಲ್ಲ; ಎಲ್ಲರನ್ನೂ ಬಗ್ಗಿಸಿ ಮುದ್ದಿಸಿಬಿಟ್ಟಳು. ಡ್ಯಾನ್ ಎಂಬ ನಮ್ಮ ಆಳುಮಗನು ಗಂಭೀರನಾಗಿ ಅತ್ತಿತ್ತ ಓಡಾಡುತ್ತಿದ್ದನು. ಇಬ್ಬರು ಹೆಣ್ಣುಮಕ್ಕಳು ಅವನನ್ನು ಕುಸ್ತಿ ಹಿಡಿದು ಕೈತಿರುವಿ ಮಿಸುಕಾಡದ ಹಾಗೆ ಮಾಡಿ ಮುದ್ದಿಸಿದರು. ಮುದುಕಿಯಾದ 'ಎನಿ' ಎಂಬ ಆಳುಮಗಳನ್ನು ಚೈನಾದ (ಚೈನೀ?) ವಿದ್ಯಾರ್ಥಿಯು ನಿಲ್ಲಿಸಿ ಮುದ್ದಿಸಿದಾಗ ಎಲ್ಲರೂ ಹೊಟ್ಟೆತುಂಬ ನಕ್ಕರು!

ಈ ಎಲ್ಲ ಪೀಕಲಾಟದಲ್ಲಿ ನನ್ನ ಎದೆಯು ಡವಡವಿಸುತ್ತಿತ್ತು. ಪುಣ್ಯಕ್ಕೆ ಯಾರೂ ನನ್ನೆಡೆಗೆ ನುಳಿದಿರಲಿಲ್ಲ. ಆದರೆ ಬೋರ್ಡಿಂಗಿನ ಮಾಲಕಳ ಕಣ್ಣಿಗೆ ಇದು ಬೀಳದೆ ಹೋಗಲಿಲ್ಲ. ಆಕೆಯು ನನ್ನೆಡೆಗೆ ಬೊಟ್ಟುಮಾಡಿ "ಇವರನ್ನು ಮುದ್ದಿಸಬೇಕು" ಎಂದು ಒಬ್ಬ ಹೆಣ್ಣು ಮಗಳ ಕಿವಿಯಲ್ಲಿ ಹೇಳಿದಳು. ಆಗ ಪ್ರಸಂಗ ಮೈಮೇಲೆ ಬಂತೆಂದು ನಾನು ತುಸು ಬೆದರಿದೆ. ಉಪಾಯುಗಾಣದೆ ಕೊನೆಗೆ ಒಂದು ಸಿಗರೇಟು ಹೊತ್ತಿಸಿಕೊಂಡು ಬಿಟ್ಟುಬಿಡದೆ ಸೇದುತ್ತ ಸುಮ್ಮನೆ ಕುಳಿತೆ. ಆದರೆ ಆ ಹೆಣ್ಣುಮಗಳು ನನ್ನ ಸಿಗರೇಟಿಗೆ ಬೆದರುವಳೆ? ಬಂದು ಅದನ್ನು ಬದಿಗೆ ಸರಿಸಿ ನನ್ನನ್ನು ಮುದ್ದಿಸಿ ಹೋದಳು!

ಈ ಹೊತ್ತಿನಲ್ಲಿ ನಾನು ಸುಮ್ಮನಿದ್ದದ್ದೇ ನೆಟ್ಟಗಾಯಿತು. ಒಲ್ಲೆನೆಂದು ಒಬ್ಬ ವಿದ್ಯಾರ್ಥಿಯು ಗುದುಮುರಿಗೆ ಹಾಕಿದ. ಜುಲುಮೆ ಯಿಂದ ಅವನನ್ನು ಮುದ್ದಿಸಲು, ಅವನು ಅಳಹತ್ತಿದ! ನಿಜವಾಗಿ ನೋಡಿದರೆ ಇಲ್ಲಿಯ ಪದ್ಧತಿಯ ಪ್ರಕಾರ, ನಾಚುತ್ತಿರುವ ಹೆಣ್ಣನ್ನು ಹಿಡಿದು ಗಂಡೇ ಮುದ್ದಿಸಬೇಕು. ಆದರೆ ಈ ಬೋರ್ಡಿಂಗಿನಲ್ಲಿ, 'East meets West!' (ಪೂರ್ವ ಪಶ್ಚಿಮ ಸಂಸ್ಕೃತಿಗಳ ಸಂಗಮ ವಾಯಿತು!) ನಾಚುತ್ತಿರುವ ಭಾರತೀಯ ವಿದ್ಯಾರ್ಥಿಗಳನ್ನು ಜುಲುಮೆ ಯಿಂದ ಹಿಡಿದು ಹೆಣ್ಣುಮಕ್ಕಳೇ ಮುದ್ದಿಸಬೇಕಾಯಿತು!

ಮುಂದೆ ನೃತ್ಯಕ್ಕೆ ಆರಂಭವಾಯಿತು. ಜಾಣತನದಿಂದ ತಪ್ಪಿಸಿ ಕೊಂಡು ನಾನು ಹೊರಗೆ ಬಂದೆ!

---

# ೩೫

. . . . . . .

ಲಂಡನ್

೩೦—೧೨—೩೬

ಒಬ್ಬ ಪರಿಚಯಸ್ಥನು ಒಂದು ಹೋಟೆಲ್ಲಿನಲ್ಲಿ ಕುಳಿತಿದ್ದನು. ಅಲ್ಲಿ ಒಬ್ಬ ಆಂಗ್ಲನಿದ್ದ. ಒಬ್ಬರನ್ನೊಬ್ಬರು ನೋಡಿ ನಕ್ಕರು. ಆ ಮೇಲೆ ಆಟ, ನೋಟ, ಹೀಗೆ ನೂರೆಂಟು ವಿಷಯಗಳ ಬಗ್ಗೆ ಹರಟೆ ಹೊಡೆದರು. ಭಾರತೀಯ ವಿದ್ಯಾರ್ಥಿಯೇ ಅವನ ಖರ್ಚನ್ನು ನೋಡಿಕೊಂಡ. 'Skating' (ಸ್ಕೇಟಿಂಗ)ಗೆ ಹೋಗಬೇಕೆಂದು ಗೊತ್ತಾಯಿತು. ಅಲ್ಲಿಂದ ತಪ್ಪಿಸಿ ಆಂಗ್ಲನು 'Greyhound racing' (ಗ್ರೇಹೌಂಡ ರೇಸಿಂಗ್)ಗೆ ಹೋಗೋಣವೆಂದನು. ಅಲ್ಲಿ ದುಡ್ಡನ್ನು ಕೇಳತೊಡಗಿದನು. ಅವನ ತೊಡಕನ್ನು ತಪ್ಪಿಸಿಕೊಳ್ಳಬೇಕಾದರೆ ಈ ವಿದ್ಯಾರ್ಥಿಗೆ ಸಾಕುಬೇಕಾಗಿ ಹೋಯಿತು !

‡ ‡ ‡ ‡

೪—೧—೩೭

ಇಂದು Palladium (ಪ್ಯಾಲೇಡಿಯಂ) ಥಿಯೇಟರಿನಲ್ಲಿ 'Peter Pan' (ಪೀಟರ ಪ್ಯಾನ) ಎಂಬ ನಾಟಕವನ್ನು ನೋಡಲು ಹೋಗಿದ್ದೆ. 'ಬ್ಯಾರಿ' ಎಂಬ ನಾಟಕಕಾರನು ಸಣ್ಣ ಹುಡುಗರಿಗಾಗಿ ಬರೆದ ನಾಟಕ ಇದು. ಆದರೆ ಹಿರಿಯರು ಸಹ ನಾಟಕಗೃಹದಲ್ಲಿ ಕಿಕ್ಕಿರಿದು ತುಂಬಿದ್ದರು. ನಮಗೆ ನಿಂತು ನೋಡಲು ಮಾತ್ರ ತಿಕೀಟು ದೊರೆತವು! ವರ್ಷಾನುವರ್ಷ ಈ ನಾಟಕವನ್ನು ನೋಡಿದರೂ ಜನರು ದಣಿಯುವದಿಲ್ಲ !

ಮೊತ್ತಮೊದಲು ಇದರ ನೋಟಗಳ ವೈಭವದಿಂದ ಜನರು ಅರ್ಧ ಸಂತುಷ್ಟರಾಗುತ್ತಾರೆ. ಕರ್ನಾಟಕದಲ್ಲಿ 'ಕುರುಕ್ಷೇತ್ರ'ವನ್ನು ನೋಡಿ ತಣಿಯುವ ಹಳ್ಳಿಗರು ಹುಚ್ಚರೆಂದು ಹೀಯಾಳಿಸಲು ಬರುವದಿಲ್ಲ.

ನೋಟಗಳಲ್ಲಿಯೂ ಅರ್ಥವಿದೆ. ಚಲಚ್ಚಿತ್ರಗಳಲ್ಲಿ ಶಕ್ಯವಾಗುವಂಥ ದೃಶ್ಯಗಳನ್ನೇ ಇಲ್ಲಿ ರಂಗಭೂಮಿಯ ಮೇಲೆ ಇಳಿಸಿದ್ದರು: 'The Never Never Land' (ಎಂದಿಗೂ ಇರದ ದೇಶ) 'tree-tops' (ಮರದುದಿ) ಮುಂತಾದದ್ದು. ಕಿನ್ನರರಾದ ಹುಡುಗರು ರಂಗಭೂಮಿಯ ಮೇಲೆಲ್ಲ ಗಾಳಿಯಲ್ಲಿ ಹಾರಾಡಲು ಬರುವಂತೆ ಯಂತ್ರಗಳನ್ನು ನಿರ್ಮಿಸಿದ್ದರು. ಬಣ್ಣ ಬಣ್ಣದ ಬೆಳಕುಗಳು ಪ್ರತಿಕ್ಷಣ ದೃಶ್ಯಗಳಿಗೆ ಹೊಸತಾದ ಚಮತ್ಕಾರವನ್ನು ತಂದುಕೊಡುತ್ತಿದ್ದವು. ವೇಷಭೂಷಣದ ಔಚಿತ್ಯ, ಸೌಂದರ್ಯಗಳು ಅವರ್ಣನೀಯವಾಗಿದ್ದವು. ಅವುಗಳ ವೈಭವವೂ ಅಂತಹದೇ. ನಟ-ನಟಿಯರು ಚಲಚ್ಚಿತ್ರಗಳ ಜಗತ್ತಿನಲ್ಲಿ ಪ್ರಸಿದ್ಧರಾದ– 'Charles Laughton' (ಚಾರ್ಲ್ಸ್ ಲಾಟ್ಟನ್) ಅವನ ಪತ್ನಿ, ಮುಂತಾದವರು. ಇದೆಲ್ಲ ಕೂಡಿ ನಾಟಕವು ಒಂದು ಮೋಹನ ಮಂತ್ರವಾಯಿತು !

ವಸ್ತುವಾದರೂ ಹಾಗೆಯೇ: ಕಿನ್ನರ-ಕಿಂಪುರುಷರು, ಚಿರಬಾಲ್ಯವನ್ನು ಹೊಂದಿದ 'Peter Pan' (ಪೀಟರ ಪ್ಯಾನ)ನು, ಸಮುದ್ರದ ಮೇಲಿನ ಬಂಡುಗಾರರು 'Pirates' (ಪಾಯರೇಟ್ಸ) ಮೊಸಳೆ, ನವಿಲು ಮೊದಲಾದ ವಿಚಿತ್ರ ಪಶು-ಪಕ್ಷಿಗಳು,–ಎಲ್ಲವೂ ಚಿಕ್ಕವರ ಮನಸ್ಸನ್ನು ಎಳೆಯುವಂಥವು. ಅದರಲ್ಲಿ ಬೇರೆ 'ಬ್ಯಾರಿ'ಯ ವಿನೋದ, ಸರಸ ಸಂಭಾಷಣೆ, ಅದ್ಭುತರಮ್ಯ ಕಲ್ಪನಾಶಕ್ತಿ ಇದರಿಂದೆಲ್ಲ ಆಬಾಲವೃದ್ಧರು ಮರುಳರಾದರು. ನಡುವೆ 'Fairy' (ಫೇರಿ) ಇಲ್ಲವೆ ಕಿನ್ನರರಾಣಿಯು ಮರಣೋನ್ಮುಖಳಾದಾಗ "She will live if children still believe in fairies. Tell me whether you believe or no?" (ಮಕ್ಕಳಿಗೆ ಕಿನ್ನರರಲ್ಲಿ ವಿಶ್ವಾಸವಿದ್ದರೆ ಅವಳಿನ್ನೂ ಬದುಕುವಳು. ನೀವು ನಂಬುತ್ತೀರೋ ಇಲ್ಲವೋ ಹೇಳಿರಿ) ಎಂದು ಕಣ್ಣೀರು ತಂದು 'Peter Pan' (ಪೀಟರ ಪ್ಯಾನ)ನು ಉದ್ಗಾರತೆಗೆದಾಗ 'Yes!' (ಹೌದು) ಎಂದು ಥಿಯೇಟರನಲ್ಲಿದ್ದ ಎಲ್ಲ ಚಿಕ್ಕಮಕ್ಕಳು ಒಂದೇ ದನಿಯಿಂದ ಒದರಿದರು! 'Yes!' (ಹೌದು) ಎಂದು ನಾನೂ ಕೂಗಿದೆ. 'Oh!' (ಓ) ಎಂದು ಒಂದು ಸಣ್ಣ ಮಗುವು ಒದರಿಕೊಂಡಿತು !

ಕರ್ನಾಟಕದ ರಂಗಭೂಮಿಯ ಮೇಲೆ ವಿಧವೆಯರಿಗೆ ಕೆಂಪು ಸೀರೆಯನ್ನುಡಿಸಿ, ಇಲ್ಲವೆ ಕೋಟು-ಶರ್ಟು ಹಾಕಿದ ತರುಣರನ್ನು ತಂದು ಬಿಡುತ್ತೇವೆ. ಒಂದು ಕಡೆಗೆ ಕುರುಕ್ಷೇತ್ರ, ಇನ್ನೊಂದು ಕಡೆಗೆ ಈ ಸಾಮಾಜಿಕ ನಾಟಕಗಳು. ನಮ್ಮ ರಂಗಭೂಮಿಯು ನಿಜವಾಗಿ ಅದ್ಭುತರಮ್ಯವಾಗುವದೆಂದು......?

---

## ೩೬

...... ಆಕ್ಸಫರ್ಡ

೫—೧—೩೭

ಇಲ್ಲಿಯ ನನ್ನ ಪರಿಚಯದವರೊಬ್ಬರು ಇಂದು ತಮ್ಮ ಕರುಣ ಕಥೆಯನ್ನು ನನ್ನೆದುರು ಹೇಳಿಕೊಂಡರು. ಅವರಿಗೆ ಸಹಾನುಭೂತಿಯು ಬೇಕಾಗಿತ್ತು. ನನ್ನ ಸ್ನೇಹದಲ್ಲಿ ಅದನ್ನು ಅವರು ಕಂಡಿರಬೇಕು. ಅವರು ಇಲ್ಲಿ I. C. S. (ಆಯ್. ಸಿ. ಎಸ್.)ಗಾಗಿ ಬಂದಿದ್ದಾರೆ. ಆದರ ಜೊತೆಗೆ ಇನ್ನೊಂದು ಪರೀಕ್ಷೆಗಾಗಿ ಅಭ್ಯಾಸ ಮಾಡುತ್ತಲಿದ್ದಾರೆ. ಮೊದಲಿನಿಂದ ಸದ್ಗುಣಿಗಳು. ಒಳ್ಳೆಯ ಮನೆತನದವರು. ಆದರೆ ಅನುಭವವಿಲ್ಲದ ತರುಣರವರು. ಭೂಮಿಯಿಂದ ಬಸಲಿಸಿದ ಬಳ್ಳಿಯು ಬೇರೆ ಸ್ವರೂಪವನ್ನು ಹೊಂದುವಂತೆ ಒಂದು ವಾತಾವರಣದಿಂದ ಇನ್ನೊಂದು ವಾತಾವರಣದಲ್ಲಿ ತಂದಿರಿಸಿದ ಜೀವವು ಹೇಗೆ ವಿದ್ರೂಪವನ್ನು ಹೊಂದಬಹುದೆಂಬುದನ್ನು ಇಲ್ಲಿ ನೋಡಬಹುದಾಗಿದೆ.

ಕೆಲವು ಬೆಂಗಾಲಿ ತರುಣರಿದ್ದ ಬೋರ್ಡಿಂಗಿನಲ್ಲಿ ಇವರು ಬಂದೊಡನೆ ಕಾಲಿಟ್ಟರು. ಇವರು ಚಹವನ್ನು ಸಹ ಕುಡಿಯುತ್ತಿರಲಿಲ್ಲ. ಬೆಂಗಾಲಿಗಳು 'Drinking parties' (ಕುಡಿಯುವ ಪಾರ್ಟಿ) ಏರ್ಪಡಿಸುತ್ತಿದ್ದರು. ಹಾದಿಯಲ್ಲಿ ಸಿಕ್ಕ ಆಂಗ್ಲ ತರುಣಿಯರನ್ನು ತರುತ್ತಿದ್ದರು.

(ಈ ತರುಣಿಯರು ಇದಕ್ಕಾಗಿಯೇ ಬಾಯಿಬಿಟ್ಟು ನಿಂತಿರುತ್ತಾರೆ). ಎಲ್ಲರೂ ಕೂಡಿ ಮದ್ಯಪಾನ ಮಾಡುವಾಗ ತರುಣಿಯರಿಗೆ ಹೆಚ್ಚು ಮದ್ಯವನ್ನು ಕೊಟ್ಟು ತೂಕ ತಪ್ಪಿಸುವದು, ಆ ಮೇಲೆ ಒಬ್ಬೊಬ್ಬರು ಒಬ್ಬಳನ್ನು ಆರಿಸಿಕೊಳ್ಳುವದು....ಹೀಗೆ ನಡೆದಿತ್ತು. ನನ್ನ ಪರಿಚಯಸ್ಥರು ತಮ್ಮ ಒಬ್ಬ ಬೆಂಗಾಲಿ ಸ್ನೇಹಿತನಿಗೆ ಇದರ ಬಗ್ಗೆ ಕೇಳಿದಾಗ: "Oh! what does it matter? 95% of the Indians who come over here do it" (ಓ! ಆದರಲ್ಲೇನಿದೆ? ನೂರಕ್ಕೆ ೯೫ ಜನ ಇಲ್ಲಿ ಬರುವ ಭಾರತೀಯರು ಅದನ್ನು ಮಾಡುತ್ತಾರೆ) ಎಂದು ಉತ್ತರ ಬಂತು. ಇವರು ಸುಮ್ಮನಿದ್ದರು.

ಮುಂದೊಮ್ಮೆ ಇವರು ತಮ್ಮ ಬೆಂಗಾಲಿ ಸ್ನೇಹಿತನ ಕೋಣೆಯಲ್ಲಿ ಕುಳಿತಾಗ ಅಲ್ಲಿ ಒಬ್ಬ ಆಂಗ್ಲ ತರುಣಿಯು ಬಂದಳು. (ಈ ಸ್ನೇಹಿತರಿಗೆ ವೈವಿಧ್ಯ ಬೇಕಾಗಿತ್ತಂತೆ. ಪ್ರತಿವಾರ ಬೇರೆ ಬೇಟೆಯನ್ನು ಹುಡುಕಿಕೊಂಡು ಬರುತ್ತಿದ್ದರು; ಬೇಟೆ ಮುಗಿದ ಮೇಲೆ ಅವರನ್ನು ಬಿಟ್ಟು ಬಿಡುವದು. ಇದರಿಂದ ಅವರ ಅಭ್ಯಾಸಕ್ಕೆ ತೊಂದರೆಯಾಗುತ್ತಿರಲಿಲ್ಲ. ಇವರಲ್ಲಿ ಕೆಲವರು I. C. S. (ಆಯ್. ಸಿ. ಎಸ್.) ಸಹ ಪಾಸಾಗಿರುವರಂತೆ.) ಈಕೆ ಎಲ್ಲಿಯೋ ಒಂದು ಕಡೆಗೆ 'ಟಾಯಿಪಿಂಗ್' ಮೊದಲಾದ ಕೆಲಸ ಮಾಡಿಕೊಂಡು ಇದ್ದಳು. ಮುಂದೆ ಭಾರತೀಯ ವಿದ್ಯಾರ್ಥಿಗಳ ಸವಿ ಹತ್ತಿತು. ಅವರೊಡನೆ ಸಂಭೋಗವನ್ನು ಬೆಳೆಸಿದರೂ ಬಸಿರಾಗದಂತೆ ನೋಡಿಕೊಳ್ಳುತ್ತಿದ್ದಳು. ಆದರೆ ಸೆರೆ ಕುಡಿದು ತೀರ ಎಚ್ಚರ ತಪ್ಪಿದಾಗ ಕೈಮೀರಿ ಹೋಯಿತು. ಬಸಿರಾದಳು. ಬಸಿರಿನಲ್ಲಿಯ ಮಗುವನ್ನು ಕೊಲ್ಲುವದು ಆಕೆಯ ಮನಸ್ಸಿಗೆ ಬರಲಿಲ್ಲ. ಯಾವನಾದರೊಬ್ಬ ಭಾರತೀಯ ವಿದ್ಯಾರ್ಥಿಗೆ ಗಂಟು ಬಿದ್ದು ಅವನೊಡನೆ ಲಗ್ನವಾಗಿ ಅವನ ಮೇಲೆ ಈ ಕೂಸಿನ ಭಾರವನ್ನು ಹೊರಿಸಿಬಿಡಬೇಕೆಂದು ಅವಳ ಹಂಚಿಕೆಯಾಗಿತ್ತು. ಕಾರಣ ಕೋಣೆಯಿಂದ ಕೋಣೆಗೆ ಅಲೆದಾಡುತ್ತಿದ್ದಳು. ಮೇಲೆ ಹೇಳಿದ ಬೆಂಗಾಲಿ ತರುಣನ ಕೋಣೆಗೆ ಬಂದಾಗ ಆಕೆಗೆ ಮೇಲೆ ಹೇಳಿದ ನನ್ನ ಪರಿಚಯಸ್ಥರ ಗುರುತಾಯಿತು. ಕೂಡಲೆ ಕೈಮೇಲೆ

ಕೈಯಿಟ್ಟಳು. ಇವರು ತಮ್ಮ ಕೈಯನ್ನು ಹಿಂತೆಗೆದುಕೊಂಡರು. ಆಗ "Let me kiss you. It is so funny" (ನಿಮ್ಮನ್ನು ನಾನು ಮುದ್ದಿಸಗೊಡಿರಿ. ಅದು ಬಹಳ ಮೋಜಾಗಿದೆ) ಎಂದು ಮುದ್ದಿಸಲು ಪ್ರಯತ್ನಿಸಿದಳು. ಇವರು "No. I do not like it" (ಒಲ್ಲೆ ನನಗದು ಸೇರದು) ಎಂದು ಹೇಳಿದರು. "You are the funniest young man I have ever met with. When will you enjoy life? When you grow old perhaps!" (ನಾನು ಕಂಡವರಲ್ಲಿ ನೀವು ಬಹಳ ವಿಚಿತ್ರ ತರುಣರು. ನೀವೆಂದು ಸಂಸಾರಸುಖವನ್ನು ಕಾಣುವಿರಿ?—ನೀವು ಮುದುಕರಾದ ಮೇಲೇನೊ!) ಎಂದು ಚೇಷ್ಟೆ ಮಾಡಿದಳು. ಇವರು "I want to remain pure and true to my future wife" (ನಾನು ಶುದ್ಧವಾಗಿದ್ದು ಮುಂಬರುವ ಹೆಂಡತಿಗೆ ಪ್ರಾಮಾಣಿಕನಾಗಬೇಕೆನ್ನುವೆ) ಎಂದು ಹೇಳಿದರು. "Oh! come! come! I hope you will not have such a serious outlook on life" (ಓಹೊ! ಬನ್ನಿ! ಬನ್ನಿ! ಜಗತ್ತಿನ ಬಗ್ಗೆ ನೀವು ಇಷ್ಟು ಗಂಭೀರವೃತ್ತಿಯನ್ನು ಇಟ್ಟುಕೊಳ್ಳುವದಿಲ್ಲವೆಂದು ನನ್ನ ಆಶೆ.) ಎಂದು ಆಕೆ ಮನವೊಲಿಸಿ "We will only remain friends" (ನಾವು ಬರೀ ಗೆಳೆಯರಾಗಿರೋಣ) ಎಂದು ಹೇಳಿದಳು. "Friendship with a lady might end in all sorts of complications" (ಹೆಂಗಸಿನ ಕೂಡ ಗೆಳೆತನವು ಎಲ್ಲಾ ತರದ ತೊಡಕಿನಲ್ಲಿ ಮುಗಿದೀತು) ಎಂದು ಇವರು ಹೇಳಿದಾಗ "I will take good care of that" (ನಾನದನ್ನು ನೋಡಿಕೊಳ್ಳುವೆ) ಎಂದು ಆಕೆಯು ಆಶ್ವಾಸನ ಕೊಟ್ಟಳು.

ನನ್ನ ಪರಿಚಯಸ್ಥರು ಇದೇ ಹೊತ್ತಿಗೆ ಪರೀಕ್ಷೆಯನ್ನು ಮುಗಿಸಿದ್ದರು. (ಮುಂದೆ ಇಳಿಯಲಿಲ್ಲವೆಂದು ತಿಳಿಯಿತು) ಹೊಸತಾಗಿ ಅಭ್ಯಾಸವು ಸುರುವಾಗುವ ತನಕ ಎಲ್ಲರಂತೆ ಮೋಜು ಮಾಡಿದರೆ ದೋಷವಿಲ್ಲೆಂದು ಅವಳನ್ನು ತಿರುಗಾಡಲು ಕರೆದುಕೊಂಡು ಹೋದರು, ಸಿನೇಮಾ ಗೃಹಕ್ಕೆ ನಡೆದರು, ಮೈತ್ರಿಯು ಬೆಳೆಯಿತು; ದೇಹಸಂಬಂಧದಲ್ಲಿ ಪರಿಣಮಿಸಿತು. ಪುಣ್ಯಕ್ಕೆ ಲಗ್ನವಾಗುವದೊಂದು ತಪ್ಪಿತು. ಆದರೆ

ಆ ಬಸಿರಿನ ಗತಿಯೇನು? ಪರಿಚಯಸ್ಥರು ಹಾಗು ಒಂದಿಬ್ಬರು 'ಹಳೆಯ ಗೆಣೆಯರು' ಕೂಡಿ ಹತ್ತು ಪೌಂಡು ಕೂಡಿಸಿ ಆಕೆಯನ್ನು ಒಬ್ಬ ಡಾಕ್ಟರನ ಕಡೆಗೊಯ್ದು ಶಸ್ತ್ರಕ್ರಿಯೆ ಮಾಡಿಸಿದರು. ಈಗ ಇವರಿಗೆ ಅಭ್ಯಾಸ ಮಾಡಬೇಕಾಗಿದೆ. ಆದರೆ ಆ ಹೆಣ್ಣುಮಗಳ ಕಾಟ ತಪ್ಪಿಲ್ಲ. ಇವರ ಮನಸ್ಸೂ ಗಟ್ಟಿಯಾಗಿಲ್ಲ. ಆಕೆಯನ್ನು ತಪ್ಪಿಸೋಣವೆಂದು ಒಂದು ಓಣಿಯಿಂದ ಇನ್ನೊಂದು ಓಣಿಗೆ ಇವರು ತಮ್ಮ ಕೋಣೆಯನ್ನು ಬದಲಿಸುತ್ತಿದ್ದಾರೆ. ಆದರೆ ಕಾಮಪೀಡಿತರಾಗಿ ತಾವೇ ಮತ್ತೆ ಆಕೆಗೆ 'ಫೋನ್' ಮಾಡಿ ಹೊಸ ವಿಳಾಸವನ್ನು ತಿಳಿಸುತ್ತಾರೆ! ಈ ರೀತಿಯಾಗಿ ನಡೆದ ತಮ್ಮ ಗೋಳನ್ನು ಅವರು ನನ್ನೆದುರು ತೋಡಿಕೊಂಡರು. ಇದೆಲ್ಲ ಅಷ್ಟೊಂದು ಸ್ವಭಾವದ ಕೊರತೆಯಾಗದೆ ಪರಿಸ್ಥಿತಿಯ ದೋಷವಾಗಿದ್ದರಿಂದ ಅದನ್ನು ಸಹಜವಾಗಿ ಸಧಾರಿಸಬಹುದೆಂದು ನಾನು ಅವರಿಗೆ ಹೇಳಿದೆ.

---

೩೭

ಆಕ್ಸಫರ್ಡ್
೬—೧—೩೭

ಇಂದು 'Hippodrom' (ಹಿಪ್ಪೋಡ್ರೋಮ್) ಎಂಬ ನಾಟಕ ಗೃಹದಲ್ಲಿ 'Mother Goose' (ಮದರ ಗೂಜ) ಎಂಬ pantomime (ಪ್ಯಾಂಟೋಮಾಯಿಮ) ಅಥವಾ ವಿಚಿತ್ರರೂಪಕವನ್ನು ನೋಡಿದೆ. ಇದೊಂದು ಹೊಸ ತರಹದ ಪ್ರಯೋಗ. ಕ್ರಿಸ್ತಮಸ್ ಹಬ್ಬದ ಹೊತ್ತಿನಲ್ಲಿ ಇಂಥ ಪ್ರಯೋಗಗಳನ್ನು ಏರ್ಪಡಿಸುತ್ತಾರೆ. ಹುಡುಗರು ಪ್ರೀತಿಸಬಲ್ಲ ದಂತಕಥೆಗಳನ್ನು ಸ್ವೀಕರಿಸುವದು ಮೊದಲನೆಯ ಕೆಲಸ: ಬಂಗಾರದ ತತ್ತಿಯನ್ನಿಡುವ ಕೋಳಿ, 'ಅರೇಬಿಯನ್ ರಾತ್ರಿ' ಯ ಕಥೆ ಮುಂತಾಗಿ. ಇದರೊಡನೆ ನೃತ್ಯ, ಗಾನ, ಚಮತ್ಕಾರಿಕ ಹಾಗು ವೈಭವ ಯುಕ್ತ ದೃಶ್ಯಗಳು, ಸರ್ಕಸ್ಸು, ಕೋಡಂಗಿಯಾಟ ಎಲ್ಲವನ್ನೂ ಹೂಡುವದು ಎರಡನೆಯ ಲಕ್ಷಣ. 'Micky Mouse' (ಮಿಕೀ ಮೂಸ) ದೃಶ್ಯಗಳು ಸಹ ರೆಡಿಯೋ ಧ್ವನಿಯೊಡನೆ ರಂಗಭೂಮಿಯ ಮೇಲೆ ನಿರ್ಮಿತವಾದವು!

ಉತ್ತಮೋತ್ತಮ ದೃಶ್ಯಗಳನ್ನು ತೋರಿಸುವದರಲ್ಲಿಯೇ ಈ ಪ್ರಯೋಗದ ಹೆಚ್ಚಳವಿದೆ. ಒಮ್ಮೊಮ್ಮೆ ರಂಗಭೂಮಿಯ ಮೇಲೆ ೪೦–೫೦ ತರುಣ–ತರುಣಿಯರು, ಬಾಲ–ಬಾಲೆಯರು ಕುಂಡು ಬರುತ್ತಿದ್ದರು, ಅವರ ಯುನಿಫಾರ್ಮ, ಪೋಷಾಕು ಮುಂತಾದ್ದು ಎಲ್ಲವೂ ಆಶ್ಚರ್ಯ ಕರವಾಗಿದ್ದವು. ಅವರ ಕವಾಯತು ಇಲ್ಲವೆ ನೃತ್ಯವು ನೋಡುವಂತಹದು. ಅನೇಕ ಹುಡುಗರು ಕೋಳಿ, ಕರಡಿ, ಆನೆ ಮೊದಲಾದ ಪ್ರಾಣಿಗಳ ರೂಪವನ್ನು ಧರಿಸಿ ಅಭಿನಯಿಸಿದರು. ಬಾತಕೋಳಿಗಳ ರಾಜ್ಯದ ನೋಟವು ಅದ್ಭುತವಾಗಿತ್ತು. 'Mother Goose' (ಮದರ ಗೂಜ) ಎಂಬ ಅಕಸ್ಮಾತ್ತಾಗಿ ಶ್ರೀಮಂತಳಾದ ಮುದುಕಿಯು ಹೇಗೆ ಹುಚ್ಚು

ರೀತಿಯಿಂದ ನಡೆದಳೆಂಬುದೇ ಇಲ್ಲಿಯ ವಸ್ತು. ಪಾತ್ರಗಳ ರೀತಿ-ಪೋಷಾಕು ೧೦೦-೧೫೦ ವರ್ಷಗಳ ಹಿಂದಿನದು. ಆದರಿಂದ ಹೆಚ್ಚಾಗಿ ವಿನೋದವು ಹುಟ್ಟುತ್ತಿತ್ತು. 'Dandy' (ಡ್ಯಾಂಡಿ)ಯ ಪಾತ್ರವನ್ನು ವಹಿಸಿದ ಹುಡುಗನು ಬಹಳ ಚೆನ್ನಾಗಿ ಅಭಿನಯಿಸಿದನು. ಮಾತಿನಲ್ಲಿಯ ವಿನೋದವು ಸರಸವಾದದ್ದು. 'My love', 'My darling' (ನನ್ನ ಪ್ರಿಯತಮೆ! ನನ್ನ ಮುದ್ದೆ) ಎಂದು ಪ್ರಣಯಿಗಳು ಮಾತನಾಡುವಾಗ 'My goodness!' (ನನ್ನ ದೈವವೇ) ಎಂದು ಒಬ್ಬನು ಹಿಂದಿನಿಂದ ಉದ್ಗಾರ ತೆಗೆಯುವನು. 'My grandfather established a musical chair at Oxford. He was well connected' (ನನ್ನ ಅಜ್ಜನು ಆಕ್ಸಫರ್ಡದಲ್ಲಿ ಸಂಗೀತಕ್ಕೆ ಸ್ಥಾನ ನಿರ್ಮಿಸಿದನು. ಅವನು ಮಾನಸಂಬದ್ಧ ನಾಗಿದ್ದ) ಎಂದು ಒಬ್ಬನು ಹೇಳಿದಾಗ, "My grandfather was established over an electric chair at Islington. He was well connected." (ನನ್ನ ಅಜ್ಜನು ಇಸ್ಲಿಂಗ್ಟನ್‌ದ ಇಲೆಕ್ಟ್ರಿಕ್ ಕುರ್ಚಿಯಲ್ಲಿ ಕೂರಿಸಲ್ಪಟ್ಟಿದ್ದನು. ಅವನೂ ಚೆನ್ನಾಗಿಯೇ ಸಂಬದ್ಧನಾಗಿದ್ದ.) ಎಂದು 'Mother Goose' (ಮದರ ಗೂಜ) ಮುದುಕಿಯು ಹೇಳುವಳು! ಕಥೆಯನ್ನು ಮುಂದರಿಸಲಿಕ್ಕೆ ಸೈತಾನನ ಪಾತ್ರವನ್ನು ಉಪಯೋಗಿಸಿದ್ದಾರೆ. ಇಲ್ಲಿಯ ನೋಟಗಳನ್ನು ನಿರ್ಮಿಸಲು ಸಾವಿರಾರು ಪೌಂಡುಗಳು ಖರ್ಚಾಗಿರಬೇಕು. ಜೊತೆಗೆ ಬೇಕಾದ ಸಂಗೀತಕ್ಕಾಗಿ ೩೦-೪೦ ಮೇಳದವರು ಕೆಲಸ ಮಾಡುತ್ತಾರೆ. ಬೆಳಕಿನ ಉಪಯೋಗವು ಅತ್ಯದ್ಭುತವಾದುದು.

* * * *

೮-೧-೩೭

'ಸಾಯನ್ಸ್ ಮ್ಯೂಜಿಯಮ್' ನೋಡಿ ಬಂದೆ. ಎಷ್ಟು ಅದ್ಭುತವಾಗಿದೆ! ಗಣಿತ ಶಾಸ್ತ್ರ, ಭೂಗರ್ಭ ಶಾಸ್ತ್ರ, ವಿಮಾನ, ಹಡಗ, ಜ್ಯೋತಿಶ್ಶಾಸ್ತ್ರ, ಹೀಗೆ ಬೇರೆ ಬೇರೆ ಶಾಖೆಗಳಿವೆ. ಹಡಗದ ಶಾಖೆಯಲ್ಲಿ ಉದಯಪುರದ ಹಾಗು ಗಂಗಾನದಿಯ ಮೇಲಿನ ದೋಣಿಗಳ ಪ್ರತಿಮೆಗಳನ್ನು ಮಾಡಿದ್ದಾರೆ. 'ಕಂಪನಿ'ಯ ಗವ್ಹರ್ನರರು ಕಲಕತ್ತೆಯಲ್ಲಿದ್ದಾಗ

ಉಪಯೋಗಿಸುತ್ತಿದ್ದ ದೋಣಿಗಳ ಆಕೃತಿಯನ್ನೂ ಇಲ್ಲಿ ಕಾಣಬಹುದು. ಜ್ಯೋತಿಶ್ಶಾಸ್ತ್ರದ ಶಾಖೆಯಲ್ಲಿ ಜಯಸಿಂಹನ 'observatary' (ನಿರೀಕ್ಷಣ ಮಂದಿರ) ಯ ಪ್ರತಿಮೆಯಿದೆ. ಮಂಗಳಲೋಕಕ್ಕೆ ಹಾರಲು ಪ್ರಯತ್ನಿಸಿದ ಒಬ್ಬ ಪ್ರೊಫೆಸರನು ನಿರ್ಮಿಸಿದ. 'Gondola' (ಗೊಂಡೊಲಾ) ಎಂಬ ದೊಡ್ಡ ಗೋಲವು ಇಲ್ಲಿದೆ. ಇದರಲ್ಲಿ ಎರಡುಸಲ ವಾಯು ಲೋಕದಾಚೆಗೆ ಅವನು ಹಾರಿದನಂತೆ.

ಇದಕ್ಕಿಂತ ಮೋಜಿನದೆಂದರೆ 'Children's Gallery' (ಹುಡುಗರ ವಿಭಾಗ) ಅನೇಕ ಯಂತ್ರಗಳನ್ನು ಹುಡುಗರು ಉಪಯೋಗಿಸಿ ತಿಳಿಯಲೆಂದು ತೆರೆದಿಟ್ಟಿದ್ದಾರೆ. ಚಿತ್ರಮಯ ದೃಶ್ಯಗಳನ್ನು ನಿರ್ಮಿಸಿ ಇತಿಹಾಸ ಭೂಗೋಲ ವಿದ್ಯೆಯನ್ನು ತಿಳಿಸಿಕೊಡಲು ಪ್ರಯತ್ನ ಪಟ್ಟಿದ್ದಾರೆ. ನೂರಾರು ಬಾಲಕ–ಬಾಲಕಿಯರು ಹಿರಿಯರೊಡನೆ ಬಂದು ಇಲ್ಲಿ ಅನುಭವವನ್ನು ಪಡೆಯುತ್ತಿದ್ದರು. ಅದೆಂಥ ಸಂಸ್ಕಾರ! ಇಂಥ ಸಂಗ್ರಹಾಲಯಗಳು ನಮ್ಮಲ್ಲಿವೆಯೆ??

'Television' (ಟೆಲೆವ್ಹಿಜನ್) ಇಲ್ಲವೆ 'ಅಲೆರೂಹಿ'ಸ (ಈ ಶಬ್ದವು ಉಳಿಯಬಹುದೇ?) ಪ್ರಯೋಗವನ್ನೂ ಇಲ್ಲಿ ತೋರಿಸಿದರು. ನೋಡಿ ಬಂದೆ. ಕೆಲವು ವರ್ಷಗಳಲ್ಲಿ ಅದು ಎಲ್ಲೆಡೆಗೆ ಹಬ್ಬುವದರಲ್ಲಿ ಸಂಶಯವಿಲ್ಲ.

* * * *

೯—೧—೩೭

ಹ್ಯಾಂಲೆಟ್‌ದ ಪ್ರಯೋಗವನ್ನು ನೋಡಿದೆ. ಉತ್ತಮವಾಗಿ ಅಭಿನಯಿಸಿದರು. 'Polonius' (ಪೋಲೋನಿಯಸ್) ನ ಉಪದೇಶವು ನಡೆದಾಗ 'Laertes' (ಲೆಯರ್ಟಿಸ್) ಹಾಗು 'Ophelia' (ಆಫೀಲಿಯಾ) ಇವರು ನಗುವರು. ಇನ್ನೂ ಅನೇಕ ಮಾತುಗಳು ಪ್ರಯೋಗಾಂತ್ಯದಲ್ಲಿ ಸ್ಪಷ್ಟವಾದವು.

# ೩೮

ಆಕ್ಸಫರ್ಡ್

೧೧—೧—೩೭

ಈ ವಾರ ' ಕಾಶ್ಮೀರ ಹಾಟೆಲ್ ' ಎಂಬ ಹೋಟೆಲ್ಲಿಗೆ ಹೋಗಿದ್ದೆ. ಭಾರತೀಯರು ಮಾಲಕರಾಗಿ ನಡೆಯಿಸುವ ಅನೇಕ ಉಪಹಾರ-ಭೋಜನ-ಗೃಹಗಳು ಇಲ್ಲಿವೆ. ' ಕೊಹಿನೂರ್ ' ಎಂಬ ಒಳ್ಳೇ ಉಪಹಾರ ಗೃಹವಿದೆಯೆಂದು ಹೇಳುತ್ತಾರೆ. ಅಲ್ಲಿ ನಾನು ಹೋಗಿಲ್ಲ. ' ಕಾಶ್ಮೀರ ಹೋಟೆಲ್ಲು ' ಮಾತ್ರ ನಮ್ಮ ಇಂದಿನ ಸಂಸ್ಕೃತಿಯಂತೆ, ವೇಷದಂತೆ, ಭಾಷೆಯಂತೆ, ವ್ಯವಹಾರದಂತೆ ಅತಂತ್ರವಾಗಿದೆ. ಇಷ್ಟೇ ಅಲ್ಲ. ಕೀಳು ಭಾರತೀಯರ ದುರ್ಲಕ್ಷ್ಯವೆಲ್ಲ ಇಲ್ಲಿ ಕಂಡುಬರುತ್ತದೆ. ಆಂಗ್ಲ ವಾತಾವರಣದಲ್ಲಿ ಈ ದುರ್ಲಕ್ಷ್ಯವು ಎಷ್ಟು ವಿಲಕ್ಷಣ ರೂಪವನ್ನು ತಾಳಬಹುದೆಂಬುದನ್ನು ಇಲ್ಲಿ ಕಾಣಬಹುದು.

ನಾವು ಮೂವರು ಹೋಗಿ ಒಂದು ಟೇಬಲ್ಲಿನ ಸುತ್ತಲು ಕೂತೆವು. ಅಲ್ಲಿಯ ಮೇಲರಿವೆಯು ಹೊಲಸಾಗಿತ್ತು. ಎದ್ದು ಇನ್ನೊಂದು ಟೇಬಲ್ಲಿಗೆ ಹೋದೆವು. ಭಾರತೀಯ ಬೋರ್ಡಿಂಗ್ ಮನೆಗಳಲ್ಲಿ ಆಂಗ್ಲ ಸೇವಕರನ್ನು ನೋಡಿದಾಗ ನನಗೆ ನೊಣ ತಿಂದ ಹಾಗಾಗುತ್ತದೆ. ಅವರಲ್ಲಿ ನೈಜ ವಾಗಿದ್ದ ಉಲ್ಲಾಸ-ಆನಂದ-ಜಾಣ್ಮೆಯು ಹೋಗಿ ಅವರೂ ಮೂಢ ರಾಗುತ್ತಾರೆ. ಎರಡು ನಾಗರಿಕತೆಗಳ ತಾಕಲಾಟವೇ ಇದಕ್ಕೆ ಕಾರಣ. ಅವರಿಗೂ ಪೂರ್ವದ ಪೆಚ್ಚು ಬಡಿದುಕೊಳ್ಳುತ್ತದೆ. ಅವರ ಮೋರೆಯ ಮೇಲಿದ್ದ ಸ್ವಾತಂತ್ರ್ಯದ ಕಳೆಯು ಮಾಯವಾಗುತ್ತದೆ. ಇದನ್ನು ನಾನು ಅನೇಕ ಸಲ ನೋಡಿದ್ದೇನೆ. ಅವರು ಗುಲಾಮರ ಗುಲಾಮ ರಾಗುತ್ತಾರೆ. ಕೀಳು ಭಾರತೀಯರ ಕಾಮುಮಯ, ಮದ್ಯಮಯ ಪ್ರಭುತ್ವದಲ್ಲಿ ಅವರ ಕಳೆಯೆಲ್ಲ ಕೆಟ್ಟು ಕೆಚ್ಚು ಕಂದುತ್ತದೆ. ' ಕಾಶ್ಮೀರ್ ಹೋಟೆಲ್ಲಿ 'ನಲ್ಲಿ ಹೀಗೆ ಕಳೆಗೆಟ್ಟ ಬಚ್ಚ ಆಂಗ್ಲ ತರುಣನು ಒಂದೇ ಸವನೆ

ಬಾಗಿಲವನ್ನು ತಿಕ್ಕುತ್ತಿದ್ದನು. ಗಿರಾಕಿಗಳಿಲ್ಲದ ಅಂಗಡಿಯಲ್ಲಿ ಸಣ್ಣ ಮೋರೆ ಮಾಡಿಕೊಂಡು ಒಬ್ಬ ಆಂಗ್ಲ (ಅಯರ್ಲಂಡದವಳಿರಬಹುದು ?) ಸೇವಕಿಯು ತನ್ನ ತಂಗಿಯೊಡನೆ ನಿಂತುಕೊಂಡಿದ್ದಳು.

ಭೋಜನದ ವಿವರಪತ್ರಿಕೆಯನ್ನು ಉಳಿದ ಹೋಟೆಲ್ಲುಗಳಲ್ಲಿ ನೋಡಿದರೆ ಆನಂದವಾಗುತ್ತದೆ! ಎಂಥ ವೈವಿಧ್ಯ, ಎಂಥ ಅಚ್ಚುಕಟ್ಟಾದ ಮುದ್ರಣ ಎಂದು. ಇಲ್ಲಿಯ ಹೊಲಸಾದ ವಿವರಪತ್ರಿಕೆಯಲ್ಲಿ ಎರಡು-ಮೂರು ಜಿನಸುಗಳ ಹೆಸರಿದ್ದವು. ಇನ್ನೊಂದು ಪತ್ರಿಕೆಯಲ್ಲಿ ಮಾತ್ರ ಅನೇಕ ಭಾರತೀಯ ಪಕ್ವಾನ್ನಗಳನ್ನು ನಮೂದಿಸಿದ್ದರು.

ಅಂಜುತ್ತ ನಮ್ಮ ಕಡೆಗೆ ಆ ಆಂಗ್ಲ ಸೇವಕಿಯು ಬಂದಳು. ಚಪಾತಿ, ಸಾರು, ಡಾಳ, ರಸಗುಲ್ಲ, ಗುಲಾಬಜಾಮ್ ಇವೇ ಮೊದಲಾದ ತಿನಸುಗಳು ಬೇಕೆಂದು ನಾವು ವಿವರಪತ್ರಿಕೆಯಲ್ಲಿ ತೋರಿಸಿದೆವು. ಆಕೆಗೆ ಈ ಹೆಸರುಗಳು ಒಮ್ಮೆಲೆ ಹಿಡಿಯಲಿಲ್ಲ. "Excuse me. I have never worked in an Indian restaurant before" (ಕ್ಷಮಿಸಿರಿ. ಹಿಂದೂ ಉಪಹಾರಗೃಹದಲ್ಲಿ ನಾನೆಂದೂ ಕೆಲಸ ಮಾಡಿಲ್ಲ.) ಎಂದು ಪುನಃ ಆ ಹೆಸರುಗಳನ್ನು ಕೇಳಿಕೊಂಡಳು. ಪರಕೀಯರ ಮನೆಯಲ್ಲಿ ದಿಙ್ಮೂಢರಾದವರಂತೆ ಅವಳ ನಡತೆಯಿತ್ತು. (ಇಲ್ಲಿ ವಾರಕ್ಕೊಮ್ಮೆ ಸೇವಕಿಯರು ಬದಲಾಗುತ್ತಿರುವರೆಂದು ನಾನೆಂದುಕೊಂಡೆ. ನನ್ನನ್ನು ಕೇಳಿದರೆ ಅವರು ನರಕಕ್ಕೆ ಹೋದರೂ ಅಡ್ಡಿಯಿಲ್ಲ; 'ಕಾಶ್ಮೀರಿ ಹೋಟೆಲು'ಗಳಿಗೆ ಬರಬಾರದು. ಆದರೆ ಇಲ್ಲಿಯೂ ಬಡತನದ ಬಳಲಿಕೆ; ಇಂಥ ಯಾತನೆಗೆ ಇಲ್ಲಿಯ ಹುಡಿಗೆಯರು ಗುರಿಯಾಗುತ್ತಾರೆ.)

ಅಷ್ಟರಲ್ಲಿ ಒಳಗಿನಿಂದ ಕರಿಯ ಟೊಣಪನಾದ ಮಾಲಿಕನು ಬಂದನು. ಅವನ ನಗೆಯೊಂದೇ ಬೆಳ್ಳಗೆ! ಹಿಂದುಗಡೆ ಕಂಡುಬಂದಂತೆ, ಆ ಆಂಗ್ಲ ಸೇವಕಿಯಲ್ಲಿದ್ದ ಸಂಸ್ಕೃತಿಯು ಸಹ ಇವನಲ್ಲಿರಲಿಲ್ಲ. ನಮ್ಮ ದೇಶಕ್ಕೆ ಇನ್ನೂ ಒಂದು ರಾಷ್ಟ್ರೀಯ ಭಾಷೆಯಿಲ್ಲ; ರಾಷ್ಟ್ರೀಯ ಭೋಜನವೆಲ್ಲಿಂದ ಬಂದೀತು? 'Mixed vegetables' (ಮಿಶ್ರಪಲ್ಯ), ಮೂರು ಚಪಾತಿ, ಮೆಣಸಿನಕಾಯಿ, ರೋಟ್ಲಿ-ಹೊರಲಾರದಂಥ ರೋಟ್ಲಿ,

ಗುಲಾಬಜಾವನ್, ರಸಗುಲ್ಲೆ–ಇದು ಇಲ್ಲಿಯ ಊಟ! ಅದೂ ಟೇಬಲ್ಲಿನ ಮೇಲೆ! ಚಾಕು–ಫೋರ್ಕುಗಳಿಂದ ಇದನ್ನು ತಿನ್ನಬೇಕು!! ಬಡಿಸ ಲಿಕ್ಕೆ–ಗೊತ್ತಿಲ್ಲದ ಒಬ್ಬ ಆಂಗ್ಲ ತರುಣಿ! ಇದು ಆಂಗ್ಲರ ರೀತಿಯಲ್ಲ! ಭಾರತೀಯರದಲ್ಲ! ಯಾವ ರೀತಿಯಿದು? ಹಿಂದುಸ್ಥಾನದ ಹೆಸರಿನಲ್ಲಿ ಇಲ್ಲಿ ದುಡ್ಡು ಮಾಡಲು ಬಂದ ಮೂರ್ಖರದು! 'ದೇವರೆ! ಇಷ್ಟೆಲ್ಲ ಅಪಕೀರ್ತಿಗೆ ಇದೊಂದು ಕೂಡಿಕೊಂಡಿತೇ' ಎಂದು ನಿಟ್ಟುಸಿರು ಬಿಟ್ಟೆ.

ಯಾವ ಪ್ಲೇಟನ್ನು ನಮ್ಮೆದುರಿಗಿಡಬೇಕು, ಯಾವುದನ್ನು ತೆಗೆಯ ಬೇಕು? ಹೌಹಾರಿದ ಆಂಗ್ಲ ಸೇವಕಿಗೆ ಯಾವುದೂ ತಿಳಿಯಲಿಲ್ಲ. ಅವಳನ್ನು ನೋಡಿ ನನಗೆ ಕರುಣೆ ಬಂದಿತು. "Excuse me, sir. She is new to the work" (ಕ್ಷಮಿಸಿರಿ ಸ್ವಾಮಿ. ಅವಳು ಈ ಕೆಲಸಕ್ಕೆ ಹೊಸಬಳಿರುವಳು) ಎಂದು ಮಾಲಕನು ಅನೇಕ ಸಲ ನಮ್ಮನ್ನು ಮರ್ಯಾದಿಸಿದನು. 'ಸರ್,' 'ಸರ್' ಎಂದು ನಮ್ಮನ್ನು ಸಂಬೋಧಿಸಿ ತನ್ನ ಕುಂದುಗಳನ್ನೆಲ್ಲ ಮುಚ್ಚಿಕೊಳ್ಳುವದು ಅವನಿಗೆ ಬೇಕಾಗಿತ್ತು. 'ಬಿಲ್' ಮಾಡಿದಾಗ ಜಡಿದು ಒಂದೆರಡು ದುಡ್ಡು ಹೆಚ್ಚು ಹಾಕಿದನು. 'Come here' (ಇಲ್ಲಿ ಬಾ), 'Go!' (ಹೋಗು) ಎಂದು ಸರ್ಕಸ್ಸಿ ನಲ್ಲಿಯ ಪ್ರಾಣಿಯನ್ನು ಓಡಾಡಿಸಿದಂತೆ ಆ ಆಂಗ್ಲ ಸೇವಕಿಯ ಮೇಲೆ ಹುಚ್ಚುತನದ ದರ್ಪವನ್ನು ತೋರಿಸುತ್ತಿದ್ದನು. ಕೊನೆಗೊಮ್ಮೆ 'ಊಟ'ವು ಮುಗಿದು ನಾವು ಎದ್ದಾಗ ಅಳುಮೋರೆ ಮಾಡಿಕೊಂಡು ಆ ಆಂಗ್ಲ ಸೇವಕಿಯು ನಮ್ಮ ಕಡೆಗೆ ಬಂದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. "Excuse me, sir. I am new to the work, you see" (ಕ್ಷಮಿಸಿರಿ ಸ್ವಾಮಿ, ನಾನು ಕೆಲಸಕ್ಕೆ ಹೊಸಬಳು ಕಂಡಿರಾ?) ಎಂದು ಬಿಕ್ಕುತ್ತ ನನ್ನಲ್ಲಿ ಹೇಳಿಕೊಂಡಳು. 'ಇಲ್ಲಿ ಏನು ಕೆಲಸವಿದೆ? ತಿನ್ನಲು ಏನಿದೆ? ನಿನ್ನದೇನು ತಪ್ಪು?' ಎಂದು ಹೇಳ ಬೇಕೆಂದು ನನಗೆನಿಸಿತು. ಆದರೆ ಅವಳ ದುಃಖವನ್ನು ನೋಡಿ ನನಗಾದ ತಳಮಳದಲ್ಲಿ ಎಲ್ಲವೂ ಮುಳುಗಿ ಹೋಯಿತು. ಅದೆಂಥ ಯೋಗ್ಯ ವರ್ತನೆ! ದುಡ್ಡು ಸೆಳೆಯಲು ಮಾತ್ರ ಹೊಂಚು ಹಾಕಿ ಕುಳಿತ ಆ ಭಾರ ತೀಯನೆಂತಹ ಮೂರ್ಖ! ಇಡಿಯ ದಿವಸ ಇದೇ ನನ್ನ ಕಣ್ಣ ಮುಂದೆ

ಕಟ್ಟುತ್ತಿತ್ತು. ' Old vic ' (ಓಲ್ಡ ವಿಕ್) ಥಿಯೇಟರಿನಲ್ಲಿ ' ಹ್ಯಾಮ್ಲೆಟ್ ' ನಾಟಕವನ್ನು ನೋಡಲು ನಾವು ಹೊರಟಿದ್ದೆವು. ಹಾದಿಯಲ್ಲಿ ಇದೊಂದು ಪ್ರಸಂಗವಾಯಿತು. ಆ ಸೇವಕಿಯ ಕರುಣಕಥೆಯು ಮರೆಯಲಾರದು.

ನಾವು ಹೊರಟು ನಿಂತಾಗ ಇಬ್ಬರು ಭಾರತೀಯ ಯುವಕರು ಒಬ್ಬ ಆಂಗ್ಲ ತರುಣಿಯನ್ನು ಕರೆದುಕೊಂಡು ಅಲ್ಲಿಗೆ ಬಂದರು. ಉಳಿದ ಉಪಾಹಾರಗೃಹಗಳಲ್ಲಿ ಅವರ ನಡತೆಯು ಮಂದಿಯ ಕಣ್ಣಲ್ಲಿ ಒತ್ತುತ್ತದೆ. ಈಗ ತಿಳಿಯಿತು! ಮೂರ್ಖರ ದೋಷಗಳನ್ನು ಮುಚ್ಚುವ ಮನೆಯಿದು, ಭಾರತೀಯರ ಉಪಾಹಾರಗೃಹವಲ್ಲವೆಂದು ಅಲ್ಲಿಂದ ಹೊರಟು ಬಂದೆ!

---

## ೩೯

ಲಂಡನ್

೧೧—೧—೩೭

ಈ ವಾರ 'ಕೀಟ್ಸ್' ಕವಿಯ ಮನೆಯನ್ನು ಹಾಗು ಸಂಗ್ರಹಾಲಯವನ್ನು ನೋಡಲು ಹೋಗಿದ್ದೆ. ತನ್ನ ಬಂಧುವು ತೀರಿಕೊಂಡ ಮೇಲೆ ಹ್ಯಾಂಪ್‌ಸ್ಟೆಡ್ ಭಾಗದಲ್ಲಿ ' Wentworth Place ' (ವೆಂಟವರ್ಥ ಪ್ಲೇಸ) ಎಂಬ ತನ್ನ ಸ್ನೇಹಿತನಾದ ಬ್ರೌನನ (Brown) ಮನೆಯಲ್ಲಿ ಕೀಟ್ಸನು ವಾಸವಾಗಿದ್ದನು. ಡಿಸೆಂಬರ್ ೧೮೧೮ ರಿಂದ ೧೮೨೦ ರ ವರೆಗೆ ಅವನು ಇಲ್ಲಿ ಇದ್ದನೆನ್ನಬಹುದು. ಈ ಮನೆಯ ತೋಟದಲ್ಲಿ ಒಂದು ಗಿಡದ ಬುಡಕ್ಕೆ ಕುರ್ಚಿಯ ಮೇಲೆ ಕುಳಿತು ಅವನು ' Ode to a Nightingale ' (ನಾಯಿಟಿಂಗೇಲ ಹಕ್ಕಿಯನ್ನು ಕುರಿತು) ಎಂಬ ಜಗತ್ಪ್ರಸಿದ್ಧ ಕವಿತೆಯನ್ನು ಬರೆದನು. ಇದೇ ಮನೆಯಲ್ಲಿ ' Hyperion ' (ಹಾಯಪೀರಿಯನ್) ಹಾಗು ಉಳಿದ ' ಓಡು ' ಗಳನ್ನು ಬರೆದನು. ಈ ಮನೆಯ ಇನ್ನೊಂದು ಮಗ್ಗುಲಲ್ಲಿ ' ಡಿಲ್ಕ್ ' ಎಂಬ ಸ್ನೇಹಿತನು ವಾಸವಾಗಿದ್ದನು

ಅವನು ‘ಮಿಸೆಸ್ ಬ್ರ್ಯಾವುನ್’ ಎಂಬಾಕೆಗೆ ತನ್ನ ಭಾಗವನ್ನು ಬಾಡಿಗೆ ಕೊಟ್ಟಾಗ ಅವಳ ಮಗಳಾದ ‘ಫ್ಯಾನಿ’ ಎಂಬವಳೊಡನೆ ಕೀಟ್ಸನ ಪ್ರಣಯವು ಬೆಳೆಯಿತು. ಅವರಿಬ್ಬರ ನಡುವೆ ವಾಙ್ನಿಶ್ಚಯವೂ ಆಗಿತ್ತು. ಎರಡೂ ಭಾಗಗಳಿಗಿದ್ದ ಒಂದೇ ತೋಟದಲ್ಲಿ ಅವರು ಅನೇಕ ಸಲ ಭೆಟ್ಟಿಯಾಗುತ್ತಿದ್ದರು. ಕಿಟಿಕಿಯೊಳಗಿಂದ ಇಲ್ಲವೆ ಒಂದು ಬಾಗಿಲಿಂದ ಇನ್ನೊಂದು ಬಾಗಿಲಕ್ಕೆ ಪ್ರಣಯಪತ್ರಗಳ ಟಪಾಲು ಹೋಗುತ್ತಿತ್ತು. ತನಗೆ ಮೊದಲು ಕ್ಷಯರೋಗ ಬಡಿದುಕೊಂಡಿದ್ದು ಕವಿಗೆ ಇಲ್ಲಿಯೇ ತಿಳಿಯಿತು. ಈ ಮನೆಯನ್ನು ಬಿಟ್ಟು ಇಟಲಿಗೆ ತೆರಳಿದ ಮೇಲೆ ಕವಿಯು ಪುನಃ ಇಂಗ್ಲಂಡಕ್ಕೆ ಮರಳಲಿಲ್ಲ; ತೀರಿಕೊಂಡನು.

ಮೊದಲು ನಾನು ಸಂಗ್ರಹಾಲಯದಲ್ಲಿ ತಿರುಗಾಡಿದೆ. ‘ಕೀಟ್ಸ’ ಕವಿಯ ಕುರುಳೊಂದನ್ನು ಇಟ್ಟಿದ್ದಾರೆ, ಫ್ಯಾನಿಯದೂ ಸಹ. ಅವನು ವೈದ್ಯಶಾಸ್ತ್ರದ ವಿದ್ಯಾರ್ಥಿಯಾದಾಗಿನ ಕಾಗದ–ಪತ್ರ–ಚಿತ್ರಗಳು, ಸಾಹಿತಿ–ಸ್ನೇಹಿತರ ಚಿತ್ರಗಳು ಎಲ್ಲವನ್ನೂ ಇಲ್ಲಿ ಕಾಣಬಹುದು. ‘My dear girl’ (ನನ್ನ ಪ್ರಿಯತಮೆ) ‘My dear Fanny’ (ನನ್ನ ಪ್ರಿಯ ಫ್ಯಾನಿ) ಎಂಬ ಅವನ ಪತ್ರಗಳನ್ನು ಓದಿ ಕಣ್ಣಲ್ಲಿ ನೀರು ಬರುತ್ತವೆ. ಕವಿತೆಗಳನ್ನು ಎಲ್ಲೆಲ್ಲಿ ಬರೆದು ಹೋದ! ಶೇಕ್ಸಪಿಯರನ ಕವಿತಾ ಸಂಗ್ರಹದ ಸಂದಿಯಲ್ಲಿ ‘Bright star’ (ಬ್ರಾಯಿಟ ಸ್ಟಾರ) ಎಂಬ ಸುನೀತೆಯಿದೆ. ಇನ್ನೊಂದು ನಾಟಕ ಸಂಗ್ರಹದಲ್ಲಿ ‘Bards of passion’ (ಬಾರ್ಡ್ಸ ಆಫ್ ಪ್ಯಾಶನ್) ಎಂಬ ಕವಿತೆಯದೆ. ಉಳಿದ ಸಾಹಿತಿಗಳ ಪುಸ್ತಕಗಳ ಮೂಲೆಯಲ್ಲಿ ತನ್ನ ಅಮರ ಕವನಗಳನ್ನು ಬರೆದಿಟ್ಟಿದ್ದಾನೆ! ವಾಙ್ನಿಶ್ಚಯವಾದಾಗ ಕೀಟ್ಸನು ಫ್ಯಾನಿಗೆ ಕೊಟ್ಟ ಕೆಂಪು ಹರಳಿನ ಉಂಗುರವನ್ನು ಇಲ್ಲಿ ನೋಡಬಹುದು. ಅವನು ತೀರಿಕೊಂಡ ಮೇಲೆ ‘ಗೀಟಾರ್’ ಎಂಬ ವಾದ್ಯದ ಆಕೃತಿಯನ್ನು ಬಂಗಾರದಲ್ಲಿ ಮಾಡಿ ಅದರ ತಂತಿಗಳ ಜಾಗದಲ್ಲಿ ಕೀಟ್ಸನ ಹೊಂಗೂದಲುಗಳನ್ನು ಹೊಂದಿಸಿ ‘ಸೆವ್ಹೆರ್ನ್’ ಎಂಬ ಕೀಟ್ಸನ ಗೆಳೆಯನು ತಯಾರಿಸಿದ ಕುರುಹು ಇಲ್ಲಿದೆ.

ಇಲ್ಲಿಂದ ದಂಗುಬಡಿದು ಕವಿಯ ಮನೆಗೆ ನಡೆದೆ. ಮುಂದೋಟದಲ್ಲಿ ಕವಿಯು ಪ್ರೀತಿಸಿದ 'Mulberry' (ಮಲ್‌ಬೆರಿ) ವೃಕ್ಷವು ಇನ್ನೂ ಜೀವ ಹಿಡಿದುಕೊಂಡಿದೆ. ನೆಲಕ್ಕೆ ಬಾಗಿದ್ದರೂ ಆದಕ್ಕೊಂದು ಆಸರವನ್ನು ಕೊಟ್ಟಿದ್ದಾರೆ. ನಾನು ಹೋದಾಗ ಅದರ ಟೊಂಗೆಗಳು ಬರಿದಾಗಿದ್ದವು. ಅರಸನನ್ನು ಕಳೆದುಕೊಂಡ ಸಿಂಹಾಸನದಂತೆ ಅದು ಭಣಗುಟ್ಟುತ್ತಿತ್ತು. ಒಳಗೆ ಹೋದೆ. ಕೀಟ್ಸ ಕವಿಯು ಅಭ್ಯಾಸ ಮಾಡುವ ಕೋಣೆಯಲ್ಲಿ ನಿಂತು ಧೇನಿಸಿದೆ. ಮುಂಬಯಿಯ 'ವಕೀಲ್' ಎಂಬ ಮನೆತನದವರು ಕೊಟ್ಟ ಕವಿಯ ಚಿತ್ರವನ್ನು ಇಲ್ಲಿ ತೂಗು ಹಾಕಿದ್ದಾರೆ. ಕೀಟ್ಸನು ತಾನಿದ್ದಾಗ ತೂಗು ಹಾಕಿದ ಜಾಗದಲ್ಲಿಯೇ ಶೇಕ್ಸಪಿಯರನ ಚಿತ್ರವಿದೆ. ಇಲ್ಲಿ ಕುಳಿತು ಕವಿಯು ತನ್ನ ಅಮರ ಕಾವ್ಯಗಳನ್ನು ಬರೆದನು. ಸಣ್ಣದೊಂದು ಕೋಣೆ. ಆದರೆ ಜಗತ್ತೇ ಇಲ್ಲಿ ತುಂಬಿರಬೇಕು. ಇಲ್ಲಿ ಕಿಟಿಕೆಯೊಳಗಿಂದ ತನ್ನ ಮನೆಯ ಹಿಂದೋಟವನ್ನು ನೋಡುತ್ತ ಕವಿಯು ಅನೇಕ ಸಲ ಕುಳಿತಿರಬೇಕು. ಕವಿಯ ಮಲಗುವ ಕೋಣೆಯನ್ನು ನೋಡಿದೆ. ಅವನ ಮನೆಯೆದುರಿನ ಗಿಡಗಳ ತೋಪಿನಲ್ಲಿ ತಿರುಗಾಡಿದೆ. 'Hampstead Heath' (ಹ್ಯಾಂಪಸ್ಟೆಡ್ ಹೀಥ) ದ ಹತ್ತಿರ 'Spaniards' 'ಸ್ಪ್ಯಾನಿಯರ್ಡ್ಸ' ಎಂಬ ಉಪಾಹಾರಗೃಹವಿತ್ತು. ಇಲ್ಲಿ ಗೆಳೆಯರೊಡನೆ ಕವಿಯು ಕುಳಿತಿದ್ದ. ಹೊರಗೆ ಮರಗಳ ಗುಂಪಿನೊಳಗಿಂದ ಬುಲ್ ಬುಲ್ ಪಕ್ಷಿಯ ಸ್ವರವು ಕೇಳಿಬಂತು. ಕೂಡಲೆ ಕವಿಯು ಎದ್ದುಹೋಗಿ ಮರದ ಬುಡಕ್ಕೆ ಆದನ್ನು ಕೇಳುತ್ತ ಕುಳಿತ. ಇಲ್ಲಿಂದ ಹೋಗಿ ಮನೆಯ ತೋಟದಲ್ಲಿ ಅವನು 'ನಾಯಿಟಿಂಗೇಲ್' ಕವಿತೆಯನ್ನು ಬರೆದ. ಅಲ್ಲಿಯೂ ತಿರುಗಾಡಿ ಬಂದೆ. ಮತ್ತೆ ಕೀಟ್ಸ್ ಕವಿಯ ಮನೆಗೆ ಪ್ರದಕ್ಷಿಣೆ ಹಾಕಿದೆ. ಏನು ಮಾಡಿದರೂ ನನ್ನ ಮನಸ್ಸಿನ ತೃಪ್ತಿಯಾಗಲಿಲ್ಲ. ಹಾರ್ಡಿಯು ಕೀಟ್ಸ ಕವಿಯ ಮನೆಯನ್ನು ನೋಡಿ ಹೋದ ಮೇಲೆ ಬರೆದ ಕವಿತೆಯನ್ನು ಅವನ ಕೈಬರಹದಲ್ಲಿಯೇ ಇಲ್ಲಿ ತಂದಿರಿಸಿದ್ದಾರೆ. ಕೀಟ್ಸನ ಯೋಗ್ಯತೆಯು ಘನವಾದುದು; ಹಾರ್ಡಿಯ ಪ್ರತಿಭೆಯೂ ಅಸಮವಾದುದು. ಒಬ್ಬ ಕವಿಚಕ್ರವರ್ತಿಯು ಇನ್ನೊಬ್ಬ ಕವಿಚಕ್ರವರ್ತಿಗೆ ಮಾನವನ್ನು ಸಲ್ಲಿಸಿದ. ಆದೊಂದು ಭೂಷಣವಾಯಿತು ಆದರೆ–

ಅಧಿಕಾರಿಗಳು ಮನೆಯನ್ನು ತೋರಿಸಲು ನಿಯಮಿಸಿದ ಗೃಹಸ್ಥನು ನನ್ನೆದುರು ನಿಂತಿದ್ದ. ನನ್ನ ಭಾವನೆಗಳ ಆವೇಶವನ್ನು ಯಾರೆದುರು ಹೇಳಿಕೊಳ್ಳಲಿ? "ನಾನೂ ಕವಿಯಿದ್ದೇನೆ. ಈ ಪವಿತ್ರ ಸ್ಥಾನವನ್ನು ನೋಡಿ ನನ್ನಲ್ಲಿ ಒಂದು ವಿಲಕ್ಷಣ ಸಂಕಟವಾಗಿದೆ; ಭಕ್ತಿ ಇಲ್ಲವೆ ಆನಂದದಂಥ ಭಾವನೆಯದು; ಆದರೆ ಭಕ್ತಿಯೂ ಅಲ್ಲ, ಆನಂದವೂ ಅಲ್ಲ; ಒಂದು ಕವಿಜೀವನದ ಕಥೆಯನ್ನು ಕಣ್ಣಾರೆ ಕಂಡು ಇನ್ನೊಂದು ಕವಿಹೃದಯದಲ್ಲಿ ಉತ್ಪನ್ನವಾದ ಭಾವನಾತರಂಗವದು". ಎಂದು ಆ ಗೃಹಸ್ಥನೆದುರು ಹೇಳಲೆ? ಇವನೊಬ್ಬ ಹುಚ್ಚನೆಂದು ಅವನು ನಕ್ಕು ಬಿಡಬಹುದಾಗಿತ್ತು! ಹಿಂದುಸ್ಥಾನವು ಗುಲಾಮರ ದೇಶ; ಅಲ್ಲಿ ಕವಿಗಳಿರುವದುಂಟೆ? ಆ ಗೃಹಸ್ಥನಿಗೆ ನಾನೇನೂ ಹೇಳಲಿಲ್ಲ; ಅವನೂ ನಗಲಿಲ್ಲ. ಆದರೆ ನನ್ನ ಭಾವನಾಪರವಶತೆಯನ್ನು ಅವನು ನನ್ನ ಮೋರೆಯ ಮೇಲಿಂದ ಕಂಡು ಹಿಡಿದಿರಬೇಕು. "ಇಲ್ಲಿಯೊಂದು ಸಂಗ್ರಹಾಲಯವೂ ಇದೆ; ಅದನ್ನು ನೀವು ನೋಡಿರುವಿರಷ್ಟೆ?" ಎಂದು ಕೇಳಿದ. ಹೌದೆಂದು ನಾನು ಉತ್ತರ ಕೊಟ್ಟೆ. ಅಲ್ಲಿ ಪ್ರೇಕ್ಷಕರು ಸಹಿ ಮಾಡಬೇಕಾದ ಒಂದು ಪುಸ್ತಕವಿದೆ. ಸಾವಿರಾರು ಹೆಸರುಗಳಲ್ಲಿ ನನ್ನ ದೊಂದನ್ನು ನಮೂದಿಸಿದೆ. ಮತ್ತೊಮ್ಮೆ ಮನೆಯ ಮುಂದೋಟದಲ್ಲಿ ಸುತ್ತಾಡುವಾಗ: "ಕವಿಯೇ! ನಿನ್ನ ಪ್ರತಿಭೆಯು ನನ್ನ ಅಂತರಂಗ ವನ್ನೇ ಕಲುಕಿದೆ; ಅದು ಅಲ್ಲಿ ಮನೆ ಮಾಡಿಕೊಳ್ಳಲಿ. ಸ್ವತಂತ್ರ ರಾಷ್ಟ್ರದ ನಿರಂಕುಶ ಕವಿಯು ನೀನು; ನನ್ನ ದೇಶವೂ ಸ್ವತಂತ್ರವಾಗಲಿ, ನೀನು ಕವಿಯಾದರೆ ಸಾಕಿತ್ತು. ನಾನು ಕಾರ್ಯಕರ್ತನೂ ಆಗಬೇಕು, ರಾಷ್ಟ್ರ ನಿರ್ಮಾಣದ ಕಾರ್ಯವನ್ನು ಹೊರಬೇಕು, ನನ್ನ ಸಮಾಜದ ಅಸ್ತಿವಾರ ವನ್ನು ನಿಲ್ಲಿಸಬೇಕು, ಇದಕ್ಕೆಲ್ಲ ನಿನ್ನ ದೈವವು ಸಾಕಾಗಲಾರದು. ನಿನ್ನ ಪ್ರತಿಭೆಗೆ ನನ್ನ ದೈವವನ್ನು ಜೋಡಿಸುವಂತೆ ದೇವರು ಕರುಣಿಸಲಿ!" ಎಂದು ನಾನು ಮನಸ್ಸಿನಲ್ಲಿಯೇ ಅಂದುಕೊಂಡಿರಬೇಕು! ನಾನು ವಿಚಾರಮಾಲೆಯಿಂದ ಎಚ್ಚರಗೊಂಡಾಗ ಆ ಮನೆಯನ್ನು ಬಿಟ್ಟು ಮುಂದೆ ನಡೆದಿರುವದು ತಿಳಿಯಿತು.

---

೪೦

ಆಕ್ಸಫರ್ಡ

೧೪—೧—೩೭

ಇಂದು ತಿರುಗಿ ಆಕ್ಸಫರ್ಡಿಗೆ ಬಂದೆ. ಹಾದಿಯಲ್ಲಿ ಸಾವಿರಾರು ಮರಗಳು ಎಲೆಯೊಂದಿಲ್ಲದೆ ನಿಂತಿದ್ದವು! ಮಂಜು ಎಲ್ಲೆಡೆಗೆ ಮುಸುಕಿತ್ತು. ನಿನ್ನೆ 'Embassy' (ಎಂಬ್ಯಾಸಿ) ಥಿಯೇಟರಿನಲ್ಲಿ 'The melody that got lost' (ಕಳೆದು ಹೋದ ಇಂಪು) ಎಂಬ 'Fantasy' (ಫ್ಯಾಂಟಸಿ ವಿಚಿತ್ರರಮ್ಯ ದೃಶ್ಯ) ಯನ್ನು ನೋಡಿದೆ. ಒಬ್ಬ ನಾರ್ವೇಜಿಯನ್ ನಾಟಕಕಾರನು ಬರೆದದ್ದು. ಇದು ಸುಖರೂಪವಾಗಿ ಮುಕ್ತಾಯವಾಗುವದೇನೋ ನಿಜ. ಆದರೆ ದೈನಿಕ ಕೌಟುಂಬಿಕ ಜೀವನದ ನೀರಸತೆಯನ್ನು ಸಂಪೂರ್ಣವಾಗಿ ಬಿಚ್ಚಿಡುವದರಲ್ಲಿ ಇದರ ಕಲೆಯಿದೆ. 'Fantasy' (ಫ್ಯಾಂಟಸಿ)ಯ ಲಕ್ಷಣಗಳು ಹೀಗೆ: (೧) ಅನೇಕ (ಇಲ್ಲಿ ೨೨) ಪ್ರವೇಶಗಳಲ್ಲಿ ಒಂದು ಕಥಾವಸ್ತುವಿನ ಆಳತೆಯಲ್ಲಿ ಬರುವಂತಹ ವಿವಿಧ ಪ್ರಸಂಗಗಳನ್ನು ತೋರಿಸುತ್ತ ಹೋಗುವದು. ವಸ್ತುವಿನಲ್ಲಿ ಅಸಂಬದ್ಧತೆ, ಹಾಸ್ಯ ಅದ್ಭುತರಮ್ಯತೆ ಎಲ್ಲವೂ ಬೆರೆಯಬಹುದು. ಆದು

'Typical' (ಟಿಪಿಕಲ್-ವಿಶಿಷ್ಟ) ಆಗಿರಬೇಕು. (೨) ಗದ್ಯ-ಪದ್ಯಗಳನ್ನು ಕೂಡಿಸಿದ ಶೈಲಿ-ಒಂದರ ಹಿಂದೊಂದು ಬರಬೇಕು, ವಾಡಿಕೆಯಾಗಿ. ಒಂದೇ ಪ್ರವೇಶದಲ್ಲಿ ಸಹ ಬರಬಹುದು. (೩) ಪ್ರತಿಯೊಂದು ಪ್ರವೇಶವು Symbolic (ಸಾಂಕೇತಿಕ) ಆಗಿರಬೇಕು-ಇದರ ಸಲುವಾಗಿ 'ವೋಜಿ'ನ ಪ್ರಸಂಗಗಳನ್ನು ಉಪಯೋಗಿಸುತ್ತಾರೆ. (೪) ಕೆಲವು ಪ್ರವೇಶಗಳಲ್ಲಿ ಛಾಯೆ, ನೃತ್ಯ, ಮೂಕ ಅಭಿನಯ ಇದರಲ್ಲಿಯೇ ಕಥೆಯ ಗರ್ಭವು ಅಡಗಿರುತ್ತದೆ. (೫) ಇಲ್ಲಿಯ ಪದ್ಯವನ್ನು ಹಾಡಲಿಕ್ಕೆ ಬರುತ್ತದೆ; ಆದರೆ ಅದರ ಸರಣಿಯು ಗದ್ಯಮಯವಾದುದು: 'Satire' (ವಿಡಂಬನ) ಇಲ್ಲವೆ 'Parody' (ಅಣಕ)ಯಲ್ಲಿ ಇದ್ದಂತೆ. (೬) 'Lost property office' (ಕಳೆದ ವಸ್ತುಗಳ ಕಚೇರಿ)ನಲ್ಲಿ ಕಳೆದ ಸ್ವರವನ್ನು ಹುಡುಕು ವದು, ಚಿತ್ರಕಾರನೆದುರು 'ಪ್ರಕೃತಿ'ಯಾಗಿ ನಿಂತ ಹೆಣ್ಣುಮಗಳು 'Nature' (ಸೃಷ್ಟಿ)ದಂತೆ ಮಾತನಾಡುವದು ಇವೇ ಇಲ್ಲಿಯ ಸನ್ನಿವೇಶ ಗಳ ಉದಾಹರಣೆಗಳು.

* * * *

೧೫-೧-೩೬

ಶ್ರೀಮತಿ ಟರ್ನರಳು ತನ್ನ ಪುರಾಣವನ್ನು ಮತ್ತೆ ಬಿಚ್ಚಿದಳು. ಈಕೆಯ ಮಗನು ಬರ್ಮಿಂಗ್‌ಹ್ಯಾಮ್‌ದಲ್ಲಿ. ಈಕೆಗೂ ಸೊಸೆಗೂ ಆಗುವದಿಲ್ಲ. ಸೊಸೆಯು ತಾಯಿಯನ್ನು ಕಂಡರೂ ಆಗುವದಿಲ್ಲ. ಮಗನು ಇವರ ನಡುವಿನ ಜಗಳದಲ್ಲಿ ಸಿಕ್ಕು ಚಾತುರ್ಯದಿಂದ ಪಾರಾಗುತ್ತಾ ನೆಂದು ತೋರುತ್ತದೆ. 'ಕ್ರಿಸ್ತಮಸ್'ದ ಹೊತ್ತಿನಲ್ಲಿ ಮಗನ ಮನೆಗೆ ಹೋದಾಗ ಆತನ ಅತ್ತೆಯೂ ಅಲ್ಲಿ ಕುಳಿತಿದ್ದಳಂತೆ. ಇಬ್ಬರು ಮುದುಕಿ ಯರೂ ಕನ್ನಡಕಗಳನ್ನು ಹಾಕಿದ್ದರು. 'Do you wear glasses, mum?' ('ನೀನೂ ಕನ್ನಡಕ ಹಾಕುತ್ತೀಯೇನು ಅಮ್ಮ?') ಎಂದು ಮಗನು ಈಕೆಗೆ ಕೇಳಿದನಂತೆ. ಗೊತ್ತಿದ್ದೂ ಕೇಳುವದೇಕೆಂದು ವಿಚಾರ ಮಾಡುತ್ತ 'ಹೂಂ' ಎಂದು ಈಕೆ ಉತ್ತರಕೊಟ್ಟಳು. "Did you buy them at woolworth's?" (ವೂಲವರ್ಥದಲ್ಲಿ ನೀನು ಅವನ್ನು

ಕೊಂಡೆಯಾ ?) ಎಂದು ಕೇಳಿದ. (ವೂಲವರ್ತ್ ಎಂದರೆ ಸೋಯಿ ಸಾಮಾನಿನ ಅಂಗಡಿ.) ಈಕೆ ಸುಮ್ಮನಿದ್ದಳು. 'What did you pay for them?' (ಅವಕ್ಕೇನು ಕೊಟ್ಟೆ ?) ಎಂದು ಮತ್ತೆ ಕೇಳಿದ. "Eighteen and six. why do you ask?" (೧೮ ಶಿಲಿಂಗು ೬ ಪೇನ್ಸು ನಿನಗೇಕೆ ಬೇಕು ?) ಎಂದು ಈಕೆ ಪ್ರಶ್ನೆ ಮಾಡಿದಳು. "Mrs. Blacksmith (ತನ್ನ ಅತ್ತೆ) has paid four guineas for hers" (ಮಿಸೆಸ್ ಬ್ಲಾಕ್‌ಸ್ಮಿತಳು ತನ್ನದಕ್ಕೆ ೪ ಗಿನಿ ಕೊಟ್ಟಿದ್ದಾಳೆ) ಎಂದು ಮಗನು ನಗುತ್ತ ಹೇಳಿದ. "Oh! but I got them reinforced with platinum" (ಓ! ನಾನು ಪ್ಲ್ಯಾಟಿನಂ ಕೂಡಿಸಿಕೊಂಡೆ ಅವಕ್ಕೆ) ಎಂದು ಅತ್ತೆಯು ತನ್ನ ಪಕ್ಷವನ್ನು ಸಮರ್ಥಿಸಿಕೊಂಡಳು. ಆಕೆಯು ತನ್ನ ಮಗನ ದುಡ್ಡನ್ನೆಲ್ಲ ತನ್ನ ಸ್ವಂತದ ವೇಷಭೂಷಣಗಳ ಮೇಲೆ ಹಾಳು ಮಾಡುವಳೆಂದು ಶ್ರೀಮತಿ ಟರ್ನರಳ ಮತ! ಅವರು ಬರ್ಮಿಂಗ್‌ಹಾಮ್‌ದವರು. ಕಾರಣ ಆ ಊರಿನ ಮೇಲೆ ಸಹ ಶ್ರೀಮತಿ ಟರ್ನರಳು ಕೋಪಿಸಿದ್ದಾಳೆ. "Nothing good has ever come of Birmingham as yet" (ಬರ್ಮಿಂಗ್‌ಹ್ಯಾಮದಿಂದ ಎಂದೂ ಒಳ್ಳೇದು ನಿರ್ಮಾಣವಾಗಿಲ್ಲ) ಎಂದು ಇವಳೂ ಹಾಗು ಇವಳ ತಂಗಿಯೂ ನಿರ್ಧರಿಸಿದ್ದಾರೆ.

* * * *

೧೬—೧—೩೭

ತಾಸಿಗೆ ಎರಡೂವರೆ ಶಿಲಿಂಗ್ ಕೊಟ್ಟು ಒಬ್ಬ ಹಿಂದು ಯುವಕನು ಇಂಗ್ಲಿ ಸ್ತ್ರೀಯೊಬ್ಬಳ ಕಡೆಯಿಂದ 'General etiquette' (ಸಾಮಾನ್ಯ ರೀತಿನಡತೆ) ಕಲಿಯುತ್ತಿದ್ದಾನೆ. ಮನೆಯಿಂದ ಶ್ರೀಮಂತ. ಮ್ಯಾಟ್ರಿಕ್ ಸಹ ಆಗಿಲ್ಲ. ಇಲ್ಲಿ ಪಾಸಾಗಿ ಮುಂದೆ 'ಬಾರ್' ಮಾಡಬೇಕೆನ್ನು ತ್ತಾನೆ. ತನ್ನ ಸ್ಥಿತಿಯನ್ನು ಜವಾಹರಲಾಲ ನೆಹರೂ ಅವರಿಗೆ ಹೇಳಿ "ನಾನು ಇಂಗ್ಲಂಡಕ್ಕೆ ಹೋಗಬೇಕೆನ್ನುತ್ತೇನೆ. ಏನು ಮಾಡಲಿ ?"

ಎಂದು ಕೇಳಿದನಂತೆ. "ಬಂದ ಮೇಲಾದರೂ ಹಿಂದುಸ್ಥಾನದ ಸೇವೆ ಮಾಡು" ಎಂದು ಅವರು ಹೇಳಿದರು !

* * * *

೧೭—೧—೩೭

ಶ್ರೀಮತಿ ಟರ್ನರಳು ಇಂದು ತನ್ನ ಮಗನ ಶೈಶವವನ್ನು ನೆನಪಿಗೆ ತಂದಳು. ಆಕೆಯ ಗಂಡನು ಮಹಾಯುದ್ಧಕ್ಕೆ ಹೋಗಿದ್ದಿಲ್ಲ. ಇಲ್ಲಿಯೇ ಕೆಲಸ ಮಾಡುತ್ತಿದ್ದನು. ಅವನ ಉಳಿದ ಅಣ್ಣತಮ್ಮಂದಿರು ಹೋಗಿದ್ದರು. ಆಕೆಯ ಮಗನು ಆಕ್ಸಫರ್ಡಿನಲ್ಲಿಯ ಪ್ರಖ್ಯಾತ ಶಾಲೆಗೆ ಹೋಗುತ್ತಿದ್ದನು. ಅದೇ ಓಣಿಯ ಕೆಲವು ಹುಡುಗರು ಇನ್ನೊಂದು ಸಾದಾ ಶಾಲೆಗೆ ಹೋಗುತ್ತಿದ್ದರು. ಕಾರಣ ಅವರು "Turner is swanking" (ಟರ್ನರನು ಡೌಲುಮಾಡುತ್ತಿರುವನು) ಎಂದು ಕೋಪಿಸುತ್ತಿದ್ದರು. ಒಂದು ದಿನ ಶಾಲೆ ಬಿಟ್ಟಮೇಲೆ ಟರ್ನರನು ಸಾಯಕಲ್ಲಿನ ಮೇಲೆ ಮನೆಗೆ ಬರುತ್ತಿದ್ದ. ಈ ಹುಡುಗರ ಗುಂಪು ಬಂದು ಅವನನ್ನು ನಿಲ್ಲಿಸಿತು. ನಿಲ್ಲಿಸಿ "Come on Turner! fight us" (ಟರ್ನರ! ಬಾ ನಮ್ಮ ಕೂಡ ಗುದ್ದಾಡು) ಎಂದು ಆಹ್ವಾನ ಮಾಡಿದರು. ಆಗ ಟರ್ನರನು ಸಾಯಕಲ್ಲನ್ನು ಕೆಳಗಿರಿಸಿ ನಿಂತು, "fight you? why should I!" (ನಿಮ್ಮ ಕೂಡ ಗುದ್ದಾಟ? ನಾಯಾಕೆ ಗುದ್ದಾಡಬೇಕು?) ಎಂದು ಕೇಳಿದನು. "Your father is a cad. He has not joined the war And you are another" (ನಿಮ್ಮ ತಂದೆಯು ಕೀಳನಿದ್ದಾನೆ. ಯುದ್ಧಕ್ಕೆ ಅವನು ಹೋಗಿಲ್ಲ, ನೀನೂ ಒಬ್ಬ ಹಾಗೆಯೇ ಇರುವಿ) ಎಂದು ಅವನನ್ನು ಕೆಣಕಿದರು ಹುಡುಗರು. ಆಗ ಟರ್ನರನು ಯುದ್ಧಮಾಡಲು ಸಿದ್ಧನಾದ. "You are many. I can fight one at a time, who is going to be first?" (ನೀವು ಬಹಳ ಮಂದಿ. ನಾನು ಒಬ್ಬೊಬ್ಬನ ಕೂಡ ಕಾದಾಡುವೆ. ಯಾರು ಮೊದಲು?) ಎಂದು ಕೇಳಿದ. ಆ ಹಿಂಡಿನೊಳಗಿಂದ ಒಬ್ಬ ಹುಡುಗನು ಮುಂದೆ ಬಂದ. ಅವನ ಹಲ್ಲು ಮುರಿದ ಟರ್ನರನು! ಉಳಿದ ಹುಡುಗರು ಸುಮ್ಮನೆ ಮನೆಗೆ ಹೋದರು.

* * * *

೧೮—೧—೩೭

ಇಲ್ಲಿಯ ಹವೆಯ ಬಗ್ಗೆ ಗ್ರೀಸವೇ ಎಂಬ ಹುಡುಗನೊಡನೆ ಮಾತನಾಡುತ್ತಿದ್ದೆ. "I feel that there is a permanent icicle at my back." (ನನ್ನ ಬೆನ್ನಿಗೆ ಒಂದು ಕಾಯಂ ಮಂಜುಗಡ್ಡಿಯನ್ನು ಕಟ್ಟಿದಂತೆ ಅನಿಸುತ್ತದೆ) ಎಂದು ಅವನು ಹೇಳುತ್ತಿದ್ದ!

‡ ‡ ‡ ‡

೧೯—೧—೩೭

ನನ್ನ ಕೋಣೆಯ ಬದಿಯ ಕೋಣೆಯಲ್ಲಿದ್ದ ಸ್ನೇಹಿತನು ೪೪ ದಿವಸ ಮನೆಯಲ್ಲಿದ್ದನೆಂದು ಶ್ರೀಮತಿ ಟರ್ನರಳು ಬರೆದುಕೊಡಬೇಕಾಗಿತ್ತು. ಅವನು ನಿಜವಾಗಿ ೪೨ ದಿವಸ ಮಾತ್ರ ಇದ್ದ. ಆದರೆ ವಿಶ್ವವಿದ್ಯಾಲಯದ ನಿಯಮಗಳನ್ನು ಅನುಸರಿಸಿ ಅವನು ೪೪ ದಿವಸಗಳವರೆಗೆ ಇರಬೇಕಾಗಿತ್ತು. ಹಾಗೆ ಬರೆದುಕೊಡಬೇಕೆಂದು ಮುದುಕಿಯಲ್ಲಿ ನನ್ನ ಸ್ನೇಹಿತನು ಬಿನ್ನವಿಸಿಕೊಂಡ. ಸುಳ್ಳು ಹೇಳುವದು ಆಕೆಯ ಮನಸ್ಸಿಗೆ ಬರುವದಿಲ್ಲ. ಅಪ್ಪಿತಪ್ಪಿ ಒಮ್ಮೆ ಹೇಳಿದರೆ ಹಿಂದಿನಿಂದ ಹೇಳಬಾರದಾಗಿತ್ತೆಂದು ಗೋಳಾಡುತ್ತಾಳೆ. ಮೇಲೆ ಹೇಳಿದ ಬರವಣಿಗೆಗೆ ಆಕೆಯು ತಾನೇ ಸಹಿ ಮಾಡಲಿಲ್ಲ. "I can never tell a lie. I did not sign it myself. I got Mr. Turner to sign it. He perhaps thinks that Mr....was in for 44 days." (ನಾನೆಂದೂ ಸುಳ್ಳಾಡಲಾರೆ. ನಾನಾಗಿ ಸಹಿ ಮಾಡಲಿಲ್ಲ. ಮಿ. ಟರ್ನರನಿಗೆ ಮಾಡಲಿಕ್ಕೆ ಹೇಳಿದೆ. ಮಿ..ಇವನು ೪೪ ದಿನ ಇದ್ದನೆಂದು ಅವನು ತಿಳಿದಿರಬಹುದು) ಎಂದು ಹೇಳಿದಳು! ಹೇಗಿದೆ ಗಂಡನ ಜವಾಬ್ದಾರಿ!

* * * *

೨೦—೧—೩೭

ಇಂದು ಮುಂಜಾನೆ ಇಬ್ಬನ್ನಿಯು (Frost) ಹುಲ್ಲುಗಾವಲದ (Lawn) ಮೇಲೆ–ಅಲ್ಲಲ್ಲಿ ರಸ್ತೆಯ ಮೇಲೆ ಸಹ–ಬೆಳ್ಳಿಯಂತೆ ಬಿದ್ದಿತ್ತು. ಕಿಡಕಿಯ ಕನ್ನಡಿಯ ಮೇಲೆ ಮಂಜು ಬರ್ಫವಾಗಿತ್ತು.

ನಿನ್ನೆ ನನಗೊಂದು ಕನಸು ಬಿದ್ದಿತ್ತು. ಒಬ್ಬ ನಾಯಕರ ಮನೆಯ ಸಾಮಾನುಗಳೆಲ್ಲ ದೊರೆತಂತಾಗಿದ್ದವು. ಅವು ಸುಮಾರು ೫೦೦ ವರ್ಷಗಳ ಹಿಂದಿನವು. ಆಗಿನ ಹಾಸಿಗೆ, ಚಿತ್ರ, ನಾಯಕರು ತಿನ್ನುವ ವೀಳ್ಯವು ಸಹ ಅಚ್ಚಳಿಯದೆ ಇದ್ದ ಹಾಗಿತ್ತು! ಇವನ್ನೆಲ್ಲ ಒಂದು ವಸ್ತುಸಂಗ್ರಹಾಲಯ ದಲ್ಲಿ ಇಟ್ಟಿತ್ತು. ಇದರಿಂದ ಕರ್ನಾಟಕದ ಹೆಸರು ಮುಂದೆ ಬರುವ ದೆಂದುಕೊಂಡೆ. ಲಂಡನ್ನಿನಲ್ಲಿಯ ವಸ್ತುಸಂಗ್ರಹಾಲಯಗಳನ್ನು ನೋಡಿ ನನ್ನಲ್ಲಿ ಹುಟ್ಟಿದ ಕಲ್ಪನೆಯ ಮೇಲೆ ಈ ಕನಸು ನಿಂತಿರಬೇಕು. ಇಂಥ ವಿಚಿತ್ರಗಳೆಲ್ಲ ಬರಿ ಕನಸಾಗಿಬಿಟ್ಟರೆ!

* * * *

೨೧—೧—೩೭

ಬ್ರಿಸ್ಟಲ್‌ದಲ್ಲಿಯ T. D. (ಟಿ. ಡಿ.) ಪರೀಕ್ಷೆಗಾಗಿ ಒಬ್ಬ ಹಿಂದೀ ವಿದ್ಯಾರ್ಥಿಯು ಅಭ್ಯಾಸಮಾಡುತ್ತಿದ್ದಾನೆ. ಅವನು ಷಾಣ್ಮಾಸಿಕ ಪರೀಕ್ಷೆಯಲ್ಲಿ ಒಂದನೆಯ ನಂಬರು ಬಂದ. ಆದರೆ ಅಲ್ಲಿಯ ಪ್ರಿನ್ಸಿಪಾಲ ರಿಗೆ ಇದು ಸಹಸವಾಗಲಿಲ್ಲ. "We do not allow an Indian to stand first. I will ask the examiners to re-examin your papers" (ಒಬ್ಬ ಭಾರತೀಯನನ್ನು ನಾವು ಒಂದನೆಯ ನಂಬರು ಬರಗೊಡಲಾರೆವು. ಇನ್ನೊಮ್ಮೆ ನಿನ್ನ ಪೇಪರು ತಪಾಸು ಮಾಡಿಸುವೆ.) ಎಂದು ಹೇಳಿದರಂತೆ!

ಯೂನಿಯನ್ನದ ಸಭೆಯು ಈ ಟರ್ಮಿನಲ್ಲಿ ಮೊದಲನೆಯ ಸಲ ಕೂಡಿತು. "That the British Government is disastrously mishandling the international situation" (ಅಂತರ ರಾಷ್ಟ್ರೀಯ ಪರಿಸ್ಥಿತಿಯನ್ನು ಬ್ರಿಟಿಶ್ ಸರಕಾರವು ವಿಘಾತಕವಾಗಿ ಕೆಡಿಸುತ್ತದೆ)

ಎಂಬುದೇ ಚರ್ಚೆಯ ವಿಷಯವಾಗಿತ್ತು. 'Baramal' (ಬಾರಾಮಲ್) ಎಂಬ ಹುಡುಗನು ಚೆನ್ನಾಗಿ ಮಾತನಾಡಿದ. ಒಬ್ಬ ಮಹಾಳನು ಮಾತನಾಡಿದ. ಒಬ್ಬ ಮಹಾಳನು ಮಾತನಾಡುತ್ತ ರಸಿಯನ್ನರನ್ನು ಬಯ್ಯುವಾಗ ಸಮತಾವಾದಿಯಾದ 'Mayhew' (ಮೇಹ್ಯು) ಎಂಬ ಅಧ್ಯಕ್ಷನು ಬುದ್ಧಿಪೂರ್ವಕವಾಗಿ ಗಂಟೆ ಬಾರಿಸಿ ಹಿಂದುಗಡೆ 'Sorry' (ಖೇದವಾಯ್ತು) ಎಂದನು! ಯಥಾಪ್ರಕಾರ ಮಹಾಳರು 'Our glorions empire' (ನಮ್ಮ ಭೌವ್ಯಸಾಮ್ರಾಜ್ಯ) ದ ಬಗ್ಗೆ ಮಾತನಾಡಿದರು.

*     *     *     *

೨೨—೧—೩೭

ನಿನ್ನೆ ಆಕ್ಸಫರ್ಡಿನಲ್ಲಿ 'Ladies, hair-dressing display' (ಹೆಂಗಸರ ಕೇಶಾಲಂಕಾರದ ಪ್ರದರ್ಶನ) ಆಯಿತು. ಶ್ರೀಮತಿ ಟರ್ನರಳ ಮಗಳೂ ಒಬ್ಬ 'hairdresser' (ಕೂದಲ ಶೃಂಗರಿಸುವಾಕೆ) ಇದ್ದಾಳೆ. ಇಬ್ಬರು ಹೆಣ್ಣುಮಕ್ಕಳ ಕೂದಲವನ್ನು ಕುರುಳು-ಕುರುಳಾಗಿ ಕತ್ತರಿಸಿ ಇವಳು ತನ್ನ 'models' (ಮಾದರಿಗಳು) ಎಂದು ಸಭೆಗೆ ಕರೆದುಕೊಂಡು ಹೋಗಿದ್ದಳು. ಅಲ್ಲಿ ನಡೆದ ಸ್ಪರ್ಧೆಯಲ್ಲಿ "The hairdresser who made the hair of this lady is an artist hairdresser" (ಈ ಸ್ತ್ರೀಯರ ಕೂದಲು ರಚಿಸಿದಾಕೆ ಕಲಾವಿದೆಯಿರುವಳು) ಎಂದು ಅಲ್ಲಿಯ ಸಭೆಯ ವ್ಯವಸ್ಥಾಪಕನು ಹೇಳಿದನಂತೆ. ಇಂದಿನ 'Oxford Mail' (ಆಕ್ಸಫರ್ಡ ಮೇಲ) ನಲ್ಲಿ ಆ 'model' (ಮಾದರಿ) ಹೆಣ್ಣುಮಗಳ ಚಿತ್ರವೂ ಬಂದಿದೆ. ತನ್ನ ಮಗಳ ಕೀರ್ತಿಯನ್ನು ಕಂಡು ಶ್ರೀಮತಿ ಟರ್ನರಳಿಗೆ ಹಿಡಿಸಲಾರದಷ್ಟು ಆನಂದವಾಗಿದೆ. "She is famous" (ಅವಳು ಪ್ರಸಿದ್ಧಳಿರುತ್ತಾಳೆ) ಎಂದು ನಗುತ್ತಾಳೆ. ನಿನ್ನೆ ರಾತ್ರಿ ಅದೇ ನಾನು ಮಲಗುವ ವಿಚಾರದಲ್ಲಿದ್ದೆ. ನನ್ನನ್ನು ಬಡಿದೆಬ್ಬಿಸಿ ಈ ಸುದ್ದಿಯನ್ನು ಹೇಳಿದಳು. ಇಂದು 'Mail' (ಮೇಲ) ನಲ್ಲಿ ಬಂದ ಚಿತ್ರವನ್ನು ನಾನೇ

ನೋಡಿ ಆಕೆಗೆ ಹೇಳಬೇಕೆಂದು ಶ್ರೀಮತಿ ಟರ್ನರಳ ಅಪೇಕ್ಷೆ. ಉದ್ದೇಶ ಪೂರ್ವಕವಾಗಿ ‘ Mail ’ (ಮೇಲ) ನ ಒಂದು ಪ್ರತಿಯನ್ನು ನನ್ನ ಕೋಣೆ ಯಲ್ಲಿ ಇಟ್ಟು ಹೋಗಿದ್ದಳು. ನನ್ನ ಲಕ್ಷವು ಅತ್ತ ಕಡೆಗೆ ಹೋಗಿರಲಿಲ್ಲ. ತಿರುಗಿ ಬಂದು “ Have you read the newspaper? ” (ವೃತ್ತ ಪತ್ರವನ್ನು ನೀನು ನೋಡಿದಿಯಾ?) ಎಂದು ಚಿತ್ರವು ಬಂದ ಸುದ್ದಿಯನ್ನು ತೆಗೆದಳು. “ Oh! did you leave it here? ” (ಓ! ನೀನದನ್ನು ಇಲ್ಲಿ ಬಿಟ್ಟಿಯಾ?) ಎಂದು ನಾನು ಲಕ್ಷ್ಯತಪ್ಪಿ ಕೇಳಿದೆ. ಅವಳಿಗೆ ಕೆಡಕೆನಿಸಿತು. ಆಮೇಲೆ ನಾನು ಎಲ್ಲವನ್ನೂ ಸರಿಪಡಿಸಲು ತನ್ನ ಮಗಳ ಪ್ರಾವೀಣ್ಯದ ಇತಿಹಾಸವನ್ನು ಶ್ರೀಮತಿ ಟರ್ನರಳು ಹೇಳಿದಳು. ಒಬ್ಬ ‘ hairdresser ’ (ಹೇರ್‌ಡ್ರೆಸರ್) ಹೆಣ್ಣುಮಗಳ ಕೈಕೆಳಗೆ ‘ apprentice ’ (ಅಪ್ರೆಂಟಿಸ್–ಉಮೇದವಾರ) ಆಗಿ ಈ ವಿದ್ಯೆಯನ್ನು ಆಕೆಯು ಕಲಿತಳಂತೆ. ಮಿ. ಹೋಪ್ ಎಂಬವನ ಸಲೂನಿನಲ್ಲಿ ‘manageress’ (ಮ್ಯಾನೇಜರೆಸ್) ಆಗಿ ಕೆಲಸ ಮಾಡಿದಳು. ಅಲ್ಲಿ ಹೋಪನ ತಂಗಿಗೂ ಈಕೆಗೂ ನ್ಯಾಯ ಬಂತು. ಅದನ್ನು ಬಿಟ್ಟು ಈಗ ತನ್ನ ಸ್ವಂತದ ‘ ಸಲೂನ್ ’ ತೆಗೆದಿದ್ದಾಳೆ.

*　　　*　　　*　　　*

೨೩—೧—೩೭

“ ಇಂದು ಸ್ನಾನಗೃಹದಲ್ಲಿ ಬರಿಯ ಬಿಸಿನೀರಿನ ನಳವನ್ನು ಬಿಡ ಬಾರದು; ತಣ್ಣೀರನ್ನು ಅದರ ಜೊತೆಗೆ ಬೆರಸಬೇಕು. ಇಲ್ಲದಿದ್ದರೆ– “ The ceiling will fall ” (ಮೇಲ್ಮಾಳಿಗೆ ಬೀಳುವದು) ಎಂದು ಶ್ರೀಮತಿ ಟರ್ನರಳು ಹೇಳಿದಳು, “ It may crack ” (ಅದು ಸೀಳ ಬಹುದು) ಎಂದು ನಾನು ತಿದ್ದುಪಡಿಯನ್ನು ಸೂಚಿಸಿದೆ. “ No! It is made of plaster and it will fall right down. ” (ಇಲ್ಲ. ಅದು ಪ್ಲ್ಯಾಸ್ಟರದಿಂದ ಮಾಡಿರುವದರಿಂದ ನೆಟ್ಟಗೆ ಕೆಳಗೆ ಬೀಳುವದು) ಎಂದು ಹೇಳಿದಳು.

Gay's **Beggar's opera** (ಗ್ರೇಯ್ ಭಿಕ್ಷುಕರ ಸಂಗೀತ ದೃಶ್ಯ) ನೋಡಲು ಹೋಗಿದ್ದೆ. ಇದರ ಮೇಲಿಂದ ಇಂದಿನ ‘ Opera ’

(ಸಂಗೀತ ದೃಶ್ಯ)ದ ಕಲ್ಪನೆಯು ಅಷ್ಟು ಚೆನ್ನಾಗಿ ಬರುವಂತಿಲ್ಲ. ೧೭ನೆಯ ಶತಮಾನದ ಸುಕುಮಾರ ಪ್ರಯೋಗಗಳ ಅನೈತಿಕ ರೀತಿಗಳ ಪ್ರದರ್ಶನವೇ ಇಲ್ಲಿಯ ವಸ್ತುವಿನಲ್ಲಿ ಮುಂದುವರಿದಿದೆ;–ಆದರೆ ಆ ನೀತಿಬಾಹಿರತೆಯನ್ನು ಇಲ್ಲಿ ಕವಿಯು ವಿನೋದಮಯವಾಗಿ ಟೀಕಿಸಿದ್ದಾನೆ. ಪುಂಡರ ತಂಡದ ನಾಯಕನೊಬ್ಬನು ಸೆರೆಮನೆಯಲ್ಲಿರುತ್ತಾನೆ. ಜೇಲರರ ಹೆಣ್ಣುಮಕ್ಕಳ ಪ್ರೀತಿಯನ್ನು ಸಂಪಾದಿಸಿ ಅವನು ಬಿಡುಗಡೆ ಹೊಂದುತ್ತಾನೆ; ಮತ್ತೆ ಸಿಗುತ್ತಾನೆ. ಕೊನೆಗೆ ಅವನನ್ನು ವಧಸ್ಥಾನಕ್ಕೊಯ್ಯುತ್ತಾರೆ; ಅಲ್ಲಿ ಅವನ ಸ್ನೇಹಿತರು – ಅಂತಃಪುರದವರೂ–ಎಲ್ಲರೂ ಅಳುತ್ತ ಬರುತ್ತಾರೆ. ನಟನೂ ಭಿಕ್ಷುಕನೂ ಮಾತನಾಡಿಕೊಂಡು ಇದು 'Tragedy' (ಟ್ರ್ಯಾಜಿಡಿ–ದುಃಖಾಂತ) ಅಲ್ಲ, 'Opera' (ಆಪೆರಾ) ಆದ ಕಾರಣ ಸುಖಮಯವಾಗಿ ಕೊನೆಗಾಣಬೇಕೆಂದು ನಿಶ್ಚಯಿಸುತ್ತಾರೆ. ಒಮ್ಮೆಲೆ '**Reprieve**' (ರಿಪ್ರೀವ್) ಅಂದರೆ ಕ್ಷಮಾಪತ್ರವು ಬಂದು ನಾಯಕನು ಬಿಡುಗಡೆ ಹೊಂದುತ್ತಾನೆ. ಇಲ್ಲಿಯ ವಾಸ್ತವಿಕತೆಯ ಮೂಲಕ–ಮೊದಲಿನಿಂದ ಕೊನೆಯವರೆಗೆ ಭಿಕ್ಷುಕನೊಬ್ಬನು ರಂಗಭೂಮಿಯ ಮೇಲೆ ಪ್ರೇಕ್ಷಕನಾಗಿ ಕೂತ ಮೂಲಕ–ಇದನ್ನು '**Beggar's Opera**' (ಭಿಕ್ಷುಕರ ದೃಶ್ಯ) ಎಂದು ಕರೆದಿದೆ.

ಆದರೆ ಸಂಗೀತವು '**Opera**' (ಆಪೆರಾ)ದ ಜೀವಾಳ; ಅದರಂತೆ ನೃತ್ಯವೂ ಸಹ. ಇಲ್ಲಿ ನನಗೆ ಯಕ್ಷಗಾನಗಳ ನೆನಪಾಗುತ್ತದೆ. ಒಂದು ಸಂಭಾಷಣೆಯಾದ ಮೇಲೆ ಅದರ ಭಾವವನ್ನು ಸಂಗೀತ ಹಾಗು ನೃತ್ಯಗಳ ದ್ವಾರವಾಗಿ ವ್ಯಕ್ತಗೊಳಿಸುತ್ತಾರೆ. ಭರತಋಷಿಯು ಹೇಳಿದಂಥ ಮುದ್ರೆಗಳನ್ನೇ ( Statelsque ) ಇಲ್ಲಿಯ ನಟ-ನಟಿಯರು ಉಪಯೋಗಿಸುತ್ತಾರೆ. ಇದಕ್ಕೆಲ್ಲ ಅನುಕೂಲವಾಗುವ ಹಾಗೆ ಪಾತ್ರಗಳ ನಿರ್ಮಾಣವಿರುತ್ತದೆ. ಜೇಲರ ಹಾಗು ಅವನ ಗಂಡುರಾಮಿ ಹೆಂಡತಿ, ಇವರಿಬ್ಬರ ಕೈಯ್ಯಲ್ಲಿ ಸಿಕ್ಕು ಸುಟ್ಟು-ಸುಣ್ಣವಾಗುವ ಮಗಳು, ಇನ್ನೊಬ್ಬ ಜೇಲರನು ಹಾಗು ಅವನ ಮಗಳು, ಪುಂಡರ ನಾಯಕ ಹಾಗು ಅವನ ತಂಡದ ನೃತ್ಯ ಮತ್ತು ಹಾಡುಗಳು, ನಾಯಕನ ನಾರಿಯರ ತಂಡ ಈ ಪಾತ್ರಗಳ

ಮೂಲಕ ಸಂಗೀತ ಹಾಗು ನೃತ್ಯಕ್ಕೆ ಕಳೆ ಬರುತ್ತದೆ. ಕೈಬೇಡಿಯನ್ನು ಹಾಕಿ ನಿಂತಾಗ ನಾಯಕನ ಎಡಬಲಕ್ಕೆ ಜೋಲರರ ಇಬ್ಬರು ಹೆಣ್ಣು ಮಕ್ಕಳ ನೃತ್ಯವು ನೋಡುವಂತಹದು. ಹೆಜ್ಜೆ ಹಾಕುತ್ತ ಯಕ್ಷಗಾನ ಗಳಲ್ಲಿಯ ಪಾತ್ರಗಳು ಬರುವಂತೆ, ಇಲ್ಲಿಯ ಪ್ರವೇಶ ಹಾಗು ನಿಷ್ಕ್ರಮ ಣವು 'ಲಾಲಿ'ಯ ಮೇಲಾಗುತ್ತದೆ. ಸಂಗೀತದ ಮೇಳವು ಸಹ ಪ್ರಯೋಗದ ಆನಂದವನ್ನು ಹೆಚ್ಚಿಸಲು ಹೆಚ್ಚಾಗಿ ಕಾರಣವಾಗುತ್ತದೆ.

---

೪೧

ಆಕ್ಸಫರ್ಡ
೧—೨—೩೭

ಭಾರತೀಯ ವಿದ್ಯಾರ್ಥಿಗಳನ್ನು ವಿಲಾಯತಿಗೆ ಕರೆಯಿಸಿ ಅವರಿಗೆ ವಿದ್ಯೆಯನ್ನು ಕಲಿಸಿ ತಿರುಗಿ ತಮ್ಮ ದೇಶವನ್ನು ತಾವೇ ಆಳಲಿಕ್ಕೆ ಸರಕಾರವು ಕಲಿಸುತ್ತಿರುವದೆಂದು ಶ್ರೀಮತಿ ಟರ್ನರಳ ದೃಢವಿಶ್ವಾಸವಾಗಿದೆ. ಹೀಗೆ ಸಾವಿರಾರು ಜನ ಆಂಗ್ಲರು ನಂಬಿದ್ದಾರೆ! ಜಾಲಿಯನ್ ವಾಲಾಬಾಗದ ಕೊಲೆಯ ಚಿತ್ರವನ್ನು ತೋರಿಸಿ, ಹೆಣ್ಣುಮಕ್ಕಳ- ಹಾಗು ಹುಡುಗರ ಕೊಲೆಯಾಯಿತೆಂದು ಹೇಳಿದಾಗ: "I admit that about the children. But as for the women,–they must have done something to deserve the punishment. Women are cunning all over the world, everywhere as here, and it is no use concealing it." (ಸಣ್ಣಹುಡಗರ ಮಟ್ಟಿಗೆ ನಾನದನ್ನು ಒಪ್ಪುತ್ತೇನೆ; ಆದರೆ ಹೆಣ್ಣುಮಕ್ಕಳ ವಿಷಯವಾಗಿ ಒಪ್ಪಲಾರೆ. ಅವರು ಅಂತಹ ಶಿಕ್ಷೆಗೆ ಪಾತ್ರರಾಗುವಂತಹದನ್ನೇನಾದರೂ ಮಾಡಿರಲೇಬೇಕು! ಜಗತ್ತಿನಲ್ಲೆಲ್ಲ ಹೆಂಗಸರೆಂದರೆ ಮಹಾ ಠಕ್ಕರು. ಇಲ್ಲಿಯೂ ಕೂಡ ಅದರಂತೆಯೆ; ಇದನ್ನು ಮುಚ್ಚಿಡುವದರಲ್ಲಿ ಏನೂ ಪ್ರಯೋಜನವಿಲ್ಲ.) ಎಂದು ಹೇಳಿದಳು!

*  *  *  *

Charles Madge (ಚಾರ್ಲ್ಸ್ ಮ್ಯಾಜ್) ಎಂಬ ಕವಿಯ ಭಾಷಣವನ್ನು ಕೇಳಿದೆ. Sex, scandal and crime are to the present age, what Beauty, Truth and Goodness were to the Victorians Our poets are interested, not in general principles, but in immediate sensations" (ವಿಕ್ಟೋರಿಯಾ ಕಾಲದ ಜನರಿಗೆ ಸತ್ಯ-ಸೌಂದರ್ಯ-ಸತ್ತ್ವಗಳು ಇದ್ದಂತೆ ಇಂದಿನವರಿಗೆ ಕಾಮ, ವ್ಯಭಿಚಾರ ಪಾತಕಗಳು ಇರುತ್ತವೆ. ನಮ್ಮ ಕವಿಗಳಿಗೆ ಸಾಮಾನ್ಯ ತತ್ತ್ವಗಳಲ್ಲಿ ಅಲ್ಲ, ತತ್‌ಕ್ಷಣಸ್ಫುರಣಗಳಲ್ಲಿ ಆಸಕ್ತಿಯುಂಟಾಗಿದೆ.) ಎಂದು ವಿನೋದಪೂರ್ವಕವಾಗಿ ಆತನು ಹೇಳಿದನು. Congreve (ಕಾಂಗ್ರೀವ್)ನ 'The way of the world' (ಜಗತ್ತಿನ ರೀತಿ) ಎಂಬ ನಾಟಕವನ್ನು ನೋಡಿದೆ. ಇಲ್ಲಿಯ ವಿದ್ಯಾರ್ಥಿನಿಗಳ ಕಾಲೇಜಿನ ಹುಡುಗಿಯರು ಪಾತ್ರವನ್ನು ವಹಿಸಿದ್ದರು. ಗಂಡುಪಾತ್ರಗಳನ್ನು ಸಹ ಅವರೇ ಅಭಿನಯಿಸಿದರು; ಅಲ್ಲಲ್ಲಿ 'ಗಂಡಿನ' ಅಭಿನಯವು ಸಹ ಚೆನ್ನಾಗಿತ್ತು. ವೇಷದಲ್ಲಿ ಐತಿಹಾಸಿಕ ಔಚಿತ್ಯವು ಎದ್ದು ಕಾಣುತ್ತಿತ್ತು. ಆದರೆ 'Amateurs' (ಅಮೆಚ್ಯುರ್ಸ್) ರೀತಿಯು ಎಲ್ಲಿ ಹೋದರೂ ಬಿಟ್ಟದ್ದಲ್ಲ! Mrs Marwood (ಮಿಸೆಸ್ ಮಾರವುಡ್) ಎಂಬ ಪಾತ್ರವನ್ನು ವಹಿಸಿದ ವಿದ್ಯಾರ್ಥಿನಿಯು ಒಂದು ಪ್ರವೇಶದಲ್ಲಿ ಅಳಬೇಕಾಗಿತ್ತು. ಮೊದಲು ಆಕೆಯು ಅಳಲು ಪ್ರಯತ್ನಿಸಿದಳು. ಸಾಧಿಸಲಿಲ್ಲ. ಆಗ ನಕ್ಕುಬಿಟ್ಟಳು.

———

ಆಕ್ಸಫರ್ಡ
೨—೨—೩೭

ಗ್ರೀನ್ ಎಂಬ ಕವಿಯು ಕೇಂಬ್ರಿಜ್ ವಿದ್ಯಾಲಯದ ಪದವೀಧರ; ಶೇಕ್ಸಪಿಯರನ ಕಾಲದವ. Friar Bacon (ಫ್ರಾಯರ ಬೇಕನ್) ಎಂಬ ಅವನ ನಾಟಕದಲ್ಲಿ ಆಕ್ಸಫರ್ಡಿನ ವರ್ಣನೆಯಿದೆ: "Set in with gorgeous palaces and surrounded by high mountains" (ಭವ್ಯ ಅರಮನೆಗಳಿಂದಲೂ ಎತ್ತರವಾದ ಪರ್ವತಗಳಿಂದಲೂ ಸುತ್ತರಿಯಲಾದ) ಮುಂತಾಗಿ; ಆಕ್ಸಫರ್ಡಿನ ಸುತ್ತಲು ದಿನ್ನೆಗಳಿರುವದು ನಿಜ. ಆದರೆ ಪರ್ವತಗಳೆಲ್ಲಿ? ಕೇಂಬ್ರಿಜ್ ಆಕ್ಸಫರ್ಡಗಳ ನಡುವಿನ ಸ್ಪರ್ಧೆಯು ಜಗತ್ತಿಗೇ ಗೊತ್ತಿದೆ. ನನ್ನ ಟ್ಯೂಟರರು ಹೇಳಿದರು: ಕೇಂಬ್ರಿಜ್ಜಿನ ಸುತ್ತಲು ತೀರ ಸಪಾಟಾದ ಪ್ರದೇಶವಿದೆ. ಅಲ್ಲಿ ಕಲಿತ ಗ್ರೀನನಿಗೆ ಆಕ್ಸಫರ್ಡಿನ ದಿನ್ನೆಗಳು ಸಹ ಪರ್ವತಗಳಾಗಿ ಕಂಡಿರಬೇಕು!

*　　　*　　　*　　　*

೩—೨—೩೭

ಇಲ್ಲಿಯ English Club (ಇಂಗ್ಲಿಶ್ ಕ್ಲಬ್)ದ ಸದಸ್ಯರು 'Pure Poetry group' (ಶುದ್ಧಕಾವ್ಯ ಸಂಘ) ಎಂಬ ಶಾಖೆಯನ್ನು ಸ್ಥಾಪಿಸಿದ್ದಾರೆ. ಆದರ ಮೊದಲನೆಯ ಸಭೆಗೆ ನಾನೂ ಹೋಗಿದ್ದೆ. ಡನೆಟ್ (Dunnet) ಎಂಬ ವಿದ್ಯಾರ್ಥಿಯು 'Allegary and symbolism' (ವ್ಯಹಾರೂಪಕ ಹಾಗೂ ಸಾಂಕೇತಿಕತೆ) ಎಂಬ ವಿಷಯದ ಮೇಲೆ ನಿಂಬಂಧವನ್ನು ಓದಿದನು. ೧೫—೨೦ ಸದಸ್ಯರು ಬಂದಿದ್ದರು. ಕೆಲವು ವಿದ್ಯಾರ್ಥಿನಿಯರೂ ಇದ್ದರು. ನಿಬಂಧವು ತಕ್ಕಮಟ್ಟಿಗಿತ್ತು. ಆದರೆ ಮುಂದೆ ನಡೆದ ಚರ್ಚೆಗೂ ವಿಷಯಕ್ಕೂ ಏನೂ ಸಂಬಂಧವಿದ್ದಿಲ್ಲ! ನಾನೇ ಕೆಲವು ಪ್ರಶ್ನೆಗಳನ್ನು ಎತ್ತಿದೆ-ಪ್ರತೀಕದ ಮಹತ್ವವನ್ನು

ಕುರಿತು ಹೇಳಿದೆ : ಆದರೆ ಉಳಿದವರೆಲ್ಲರೂ,–ಭಾಷೆಯು ಹೇಗೆ ಹುಟ್ಟಿತು? ಮಾತಾಡುವುದನ್ನು ಹುಡುಗರು ಹೇಗೆ ಕಲಿಯುತ್ತಾರೆ? ಒಂದು ಕಿತ್ತಳೆಯ ಹಣ್ಣಿನ ಹಾಗೆ ಇನ್ನೊಂದು ಕಿತ್ತಳೆಯ ಹಣ್ಣಿದೆಯೆಂಬುದನ್ನು ತಿಳಿಯಲು ಶಿಲಾಯುಗದ ಮನುಷ್ಯನಿಗೆ ಎಷ್ಟು ಹೊತ್ತು ಹತ್ತಿತು?–ಮುಂತಾದ ಪ್ರಶ್ನೆಗಳನ್ನು ಚರ್ಚಿಸಿದರು! ಕೊನೆಗೆ ಹೋಗುವಾಗ ಒಬ್ಬನು: "I had come to discuss pure poetry but I am going back, with my mind full of anthropology" (ನಾನು ಶುದ್ಧ ಕಾವ್ಯ ಚರ್ಚೆಗೆ ಬಂದಿದ್ದೆ. ಆದರೆ ಮನುಷ್ಯಶಾಸ್ತ್ರವನ್ನು ನನ್ನ ತಲೆಯಲ್ಲಿ ತುಂಬಿಕೊಂಡು ಹೊರಟಿದ್ದೇನೆ) ಎಂದು ಹೇಳಿದನು. ಇನ್ನೊಬ್ಬರು "This is not the Pure Poetry Group, but only the Group" (ಇದು ಶುದ್ಧಕಾವ್ಯದ ಸಂಘವಲ್ಲ, ಬರೀ ಒಂದು ಸಂಘ) ಎಂದು ಸೂಚಿಸಿದನು! ಕೊನೆಗೆ ಕಾರ್ಯದರ್ಶಿಯು: "It is excellent if we can meet and talk together,–no metter what." (ನಾವು ಕೂಡಿ ಮಾತಾಡಬಲ್ಲೆವಾದರೆ ಅದೇ ಉತ್ತಮ ವಿಷಯವು–ಯಾವ ವಿಷಯವೇನು?) ಎಂದು ಹೇಳಿ ಮುಗಿಸಿದನು!

———

## ೪೩

೩—೩—೩೭

'Sankey Society' (ಸ್ಯಾಂಕಿ ಸೊಸಾಯಿಟಿ) ಎಂಬ ಚರ್ಚಾಸಂಘವು ನಮ್ಮ ಕಾಲೇಜಿನಲ್ಲಿದೆ. 'Lord Sankey' (ಲಾರ್ಡ ಸ್ಯಾಂಕಿ) ಯವರು ಜೀಸಸ್ ಕಾಲೇಜಿನ ವಿದ್ಯಾರ್ಥಿಗಳು. ಅವರ ಹೆಸರನ್ನಿಟ್ಟು ಈ ಸಂಘವನ್ನು ಸ್ಥಾಪಿಸಿದ್ದಾರೆ. ನಾನು ಕಾಲೇಜಿನಲ್ಲಿ ಊಟಕ್ಕೆ ಕುಳಿತಾಗ Grffiths (ಗ್ರಿಫಿಥ್ಸ) ಎಂಬ ವಿದ್ಯಾರ್ಥಿಯು ನನ್ನ ಪಕ್ಕದಲ್ಲಿದ್ದನು. ಆ ಸಂಘದ ಸದಸ್ಯನೀತ. "Excuse me, from what part of India do you come? I am in the I. C. S. I am going over to Madras.'

(ಕ್ಷಮಿಸಿರಿ. ಹಿಂದುಸ್ಥಾನದ ಯಾವ ಭಾಗದಿಂದ ನೀವು ಬಂದಿರುವಿರಿ ? ನಾನು ಆಯ್. ಸಿ. ಎಸ್ ದಲ್ಲಿದ್ದು ಮದ್ರಾಸಕ್ಕೆ ಹೋಗುವವನಿದ್ದೇನೆ) ಎಂದು ಕೇಳಿದ. ಮುಂಬಯಿಪ್ರಾಂತದಿಂದ ಬಂದಿರುವದಾಗಿ ನಾನು ಹೇಳಿದೆ. ಆಕ್ಸಫರ್ಡದ ವಾತಾವರಣವು ನನಗೆ ಒಟ್ಟಿನ ಮೇಲೆ ಹೇಗೆ ಕಂಡಿತೆಂದು ಕೇಳಿದ. ಇಲ್ಲಿ 'Warmth' (ಕಾವು-ಸ್ನೇಹ) ಇಲ್ಲವೆಂದು ನಾನೆಂದೆ. "You mean, in the people or in the climate ?" (ಅಂದರೆ ಜನರಲ್ಲಿಯೋ ಹವೆಯಲ್ಲಿಯೋ ?) ಎಂದ ಗ್ರಿಫಿಥ್ಸ್. 'Both.' (ಎರಡೂ) ಎಂದು ನಾನು ಉತ್ತರ ಕೊಟ್ಟೆ. "Is the climate worse, or the people ?" (ಹವೆಯು ಹೆಚ್ಚು ಕೆಟ್ಟದ್ದೊ ? ಏನು ಜನರೋ ?) ಎಂದು ಕೇಳಿದ. "Climate" (ಹವೆ) ಎಂದು ನಾನು ಹೇಳಿದೆ. "That gives me some hope" (ಅದು ಸ್ವಲ್ಪ ಆಶಾದಾಯಕವಾಗಿದೆ) ಎಂದು ಗ್ರಿಫಿಥ್ಸನು ನಕ್ಕ. ಆ ಮೇಲೆ **'A Passage to India'** (ಪ್ಯಾಸೇಜ ಟು ಇಂಡಿಯಾ) ಎಂಬ ಕಾದಂಬರಿಯ ಬಗ್ಗೆ ಮಾತ ನಾಡಿದೆವು.

ಸ್ಯಾಂಕಿ ಸಂಘದಲ್ಲಿ ಒಂದು ಚರ್ಚೆಯಾಗುವದಿತ್ತು. "That the welfare of the world will not be served by the cession of the colonies to Germany" (ಜರ್ಮನಿಗೆ ವಸಾಹತುಗಳನ್ನು ಕೊಡುವದ ರಿಂದ ಜಗತ್ತಿಗೆ ಹಿತವಿಲ್ಲ.) ಎಂಬುದೇ ವಿಷಯ. ಗ್ರಿಫಿಥ್ಸನು ಈ ವಿಷಯ ವನ್ನು ಪ್ರತಿಪಾದಿಸುವವನಿದ್ದ. ಮತ್ತೊಂದು ಸಲ ಭೆಟ್ಟಿಯಾದಾಗ ಈ ಸಭೆಗೆ ನನ್ನನ್ನು ಕರೆದೊಯ್ಯುವದಾಗಿ ಹೇಳಿದ. ನಾನು ಒಡಂಬಟ್ಟೆ. ರಾತ್ರಿಯ ಊಟವಾದ ಮೇಲೆ ಇಬ್ಬರೂ ಕೂಡಿ ನಡೆದೆವು.

ಕಾಲೇಜು ಹಾಸ್ಟೆಲ್ಲಿನಲ್ಲಿ ನಮ್ಮ ದೇಶದಲ್ಲಿಯಾದರೂ ವಿದ್ಯಾರ್ಥಿ ಗಳ ಕೋಣೆಗಳಲ್ಲಿ ಚರ್ಚಾಸಂಘಗಳಿರುವದಿಲ್ಲವೆ ? ಡಾವಸನ್ (Dawson) ಎಂಬ ಕಾರ್ಯದರ್ಶಿಯ ಕೋಣೆಯಲ್ಲಿ ಈ ಸಭೆಯು ನೆರೆದಿತ್ತು. ನಾನು ಹೋದಾಗ ೧೨-೧೫ ವಿದ್ಯಾರ್ಥಿಗಳು ಕೂಡಿದ್ದರು. ಒಂದು ಮೋಜು ನಡೆದಿತ್ತು. ಒಂದು ದೊಡ್ಡ ವಿರಾಮುಕುರ್ಚಿಯ ಕೆಳಗೆ ಒಬ್ಬ ಹುಡುಗನು

ಪೊಟ್ಟೆಯನ್ನು ನೆಲಕ್ಕೆ ಹಚ್ಚಿ ಮಲಗಿಕೊಂಡಿದ್ದ. ಮೆಲ್ಲನೆ ಸಾವರಿಸಿಕೊಂಡು ಮೇಲಕ್ಕೇಳುವಾಗ ಆ ಕುರ್ಚಿಯನ್ನು ಅವನು ಮೇಲಕ್ಕೆತ್ತಬೇಕು! ಇದನ್ನು ನೋಡಲು ಅವನ ಸುತ್ತಲು ಉಳಿದವರೆಲ್ಲ ನೆರೆದಿದ್ದರು. ಇದನ್ನು ನೋಡಿ ನನ್ನನ್ನು ಕರೆದುಕೊಂಡು ಹೋಗಿದ್ದ ಗ್ರಿಫಿಥ್ಸನ ಮೋರೆಯು ಸಣ್ಣಗಾಯಿತು. ನೆರೆದವರಿಗೆ ಸಿಟ್ಟು ಮಾಡಿದ. ಅವರೂ ನನ್ನನ್ನು ನೋಡಿ ಸಾವರಿಸಿಕೊಂಡು ಬಿಗುವಿನಿಂದ ನಿಂತರು. ಕುರ್ಚಿಯು ಬುಡಕ್ಕಿದ್ದ ವಿದ್ಯಾರ್ಥಿಯು ಅಪರಾಧಿಯಂತೆ ನುಸುಳಿಕೊಂಡು ಹೋದ. ಭಾರತೀಯನ ಕಣ್ಣಿಗೆ ಈ ದೃಶ್ಯವು ಬೀಳಬಾರದಾಗಿತ್ತೆಂದು ಅವರೆಲ್ಲರ ಭಾವನೆಯಾಗಿರಬೇಕು!

ಎಲ್ಲರೂ ಕಾಫಿ ಕುಡಿಯುವದಾದ ಮೇಲೆ ಕಾದಾಟಕ್ಕೆ—ಅಂದರೆ ಚರ್ಚೆಗೆ—ಸುರುವಾಯಿತು. ಗ್ರಿಫಿಥ್ಸನ ಭಾಷಣದ ಸಾರಾಂಶವು ಹೀಗೆ: ೧೯ನೆಯ ಶತಮಾನದ ಸಾಮ್ರಾಜ್ಯಲಾಲಸೆಯು ತೀರ ಬೇರೆಯಾಗಿತ್ತು; ಸೋತವರ ಧನವನ್ನು ಸೆಳೆಯುವದೊಂದು ಮಾತ್ರ ಆಗಿನ ಜನರಿಗೆ ಗೊತ್ತಿತ್ತು. ಆದರೆ ಈಗ ಕಾಲವು ಬದಲಾಯಿಸಿದೆ. ವಸಾಹತುಗಳು ಈಗ ಭೋಗ್ಯವಸ್ತುಗಳಲ್ಲ, ಜವಾಬ್ದಾರಿಯ ಹೊರೆಯಾಗಿವೆ. ಪ್ರಜಾಸತ್ತಾತ್ಮಕ ಸ್ವಾತಂತ್ರ್ಯವನ್ನು ಈ ವಸಾಹತುಗಳಿಗೆ ನಾವು ಕೊಡುತ್ತಿದ್ದೇವೆ. ಕೆಲವೊಂದು ವರ್ಷಗಳಲ್ಲಿ ಹಿಂದುಸ್ಥಾನವು ಸ್ವತಂತ್ರ ರಾಷ್ಟ್ರವಾಗುವದು. (ಗ್ರಿಫಿಥ್ಸನು ಹಿಂದುಸ್ಥಾನವನ್ನು ಬಹಳವಾಗಿ ಪ್ರಶಂಸಿಸಿದ. ಅಮೇರಿಕಾ, ರಸಿಯಾ ಮೊದಲಾದ ದೇಶಗಳ ಮಾಲಿಕೆಯಲ್ಲಿ ಹಿಂದುಸ್ಥಾನವು ಈಗ ಸೇರಲಿದೆಯೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ. ನನ್ನ ಸಾನ್ನಿಧ್ಯವು ಈ ಪ್ರಶಂಸೆಗೆ ಅರ್ಧ ಕಾರಣವಾಗಿರಬೇಕು.) ಆದರೆ ಹಿಟ್ಲರ್ ಮತ್ತು ಮುಸೊಲಿನಿ ಮೊದಲಾದ ಪ್ರಭೃತಿಗಳು ನಾವು ೧೯ನೆಯ ಶತಮಾನದಲ್ಲಿ ಹಾಕಿದ ಕಿತ್ತೆಯನ್ನು ತೀಡುತ್ತಿದ್ದಾರೆ. ಕಾರಣ ಈ ವಸಾಹತುಗಳನ್ನು ಜರ್ಮನಿಗೆ ಕೊಡಬಾರದು.

ವಿರೋಧಕನು ಈ ರೀತಿಯಾಗಿ ಭಾಷಣ ಮಾಡಿದ: "The concession of partial freedom to India is based on policy and



ಕೀಟ್ಸ್ ಮಹಾಕವಿ

( ಪುಟ ೧೭೫ )



ಕೀಟ್ಸ್ ಕವಿಯ ಮನೆ

(ಪುಟ ೧೭೫)

not principle. The Indian students who imbibed our ideas were responsible for an artificial nationalism. Hence the Indian constitution today is the outcome of the British genius for compromise. The colonies must be ceded to Germany in order to prevent a world-war. (ಹಿಂದುಸ್ಥಾನಕ್ಕೆ ಕೊಟ್ಟ ತುಸು ಸ್ವಾತಂತ್ರ್ಯವು ಧೋರಣೆಯನ್ನವಲಂಬಿಸಿದೆ, ತತ್ತ್ವವನ್ನಲ್ಲ. ನಮ್ಮ ಕಲ್ಪನೆಗಳನ್ನು ಅಂಗೀಕರಿಸಿದ ಭಾರತೀಯ ವಿದ್ಯಾರ್ಥಿಗಳು ಒಂದು ಕೃತ್ರಿಮವಾದ ರಾಷ್ಟ್ರೀಯತ್ವಕ್ಕೆ ಕಾರಣರಾದರು. ಅಂತೇ ಇಂದಿನ ಹಿಂದುಸ್ಥಾನದ ರಾಜ್ಯಪದ್ಧತಿಯು ಒಪ್ಪಂದದ ವಿಷಯದಲ್ಲಿ ಇರುವ ಬ್ರಿಟಿಶರ ಬುದ್ಧಿಶಕ್ತಿಯ ಪ್ರತಿಫಲವಾಗಿದೆ. . . . ಜಗತ್ತಿನ ಯುದ್ಧವನ್ನು ತಪ್ಪಿಸಬೇಕಾದರೆ ವಸಾಹತುಗಳನ್ನು ಜರ್ಮನಿಗೆ ಬಿಟ್ಟುಕೊಡಲೇಬೇಕು)

ಆ ಮೇಲೆ ಇನ್ನಿಬ್ಬರು ಮಾತನಾಡಿದರು. ಇನ್ನು ಯಾರಿಗಾದರೂ ಮಾತನಾಡುವದಿದೆಯೇನೆಂದು ಅಧ್ಯಕ್ಷರು ಕೇಳಿದಾಗ ನಾನು ಎದ್ದು ನಿಂತೆ! ಎಲ್ಲರೂ ಆಶ್ಚರ್ಯಚಕಿತರಾಗಿ ನನ್ನ ಕಡೆಗೆ ನೋಡಿದರು. "It was the kindness of some friends that enabled me to be here. I did not come here with the idea of making a speech. But the genial cup of coffee and the warmth that I absorbed along with it, have created in me an irresistable desire to speak. The problem is simply this: The West is not in any way more civilised than the East. But it happens to be more powerful, owing to several reasons. It is a struggle between strength and weakness. Long training is not required to create a demand for freedom. It is instinctive. And how long is might to dominate over a section of humanity and degrade? This is not in keeping with the evolution of humanity as a whole towards perfection. Leave these colonies to themselves. You will then see them growing to be your equals in no time"

(ಕೆಲವು ಸ್ನೇಹಿತರ ಒಳ್ಳೆಯತನವು ನನ್ನನ್ನು ಇಲ್ಲಿಗೆ ಬರಮಾಡಿತು. ಒಂದು ಭಾಷಣ ಮಾಡಬೇಕೆಂದು ನಾನೇನು ಬಂದಿರಲಿಲ್ಲ. ಆದರೆ ಉಲ್ಲಾಸದಿಂದ ಕೊಟ್ಟ ಕಪ್ಪು ಕಾಫಿಯೂ ಅದರೊಡನೆ ನಾನು ಸೇವಿಸಿದ ಕಾವೂ (ಸ್ನೇಹವೂ) ಮಾತಾಡಬೇಕೆಂಬ ಪ್ರಬಲವಾದ ಇಚ್ಛೆಯನ್ನು ನನ್ನಲ್ಲಿ ಉಂಟುಮಾಡಿವೆ. ಸಮಸ್ಯೆಯು ಸರಳವೆಂದರೆ ಹೀಗಿದೆ: ಪೌರ್ವಾತ್ಯ ದೇಶಗಳಗಿಂತ ಪಾಶ್ಚಿಮಾತ್ಯದೇಶಗಳು ಯಾವದರಲ್ಲಿಯೂ ಹೆಚ್ಚು ನಾಗರಿಕವಾಗಿಲ್ಲ. ಆದರೆ ಅನೇಕ ಕಾರಣಗಳಿಂದ ಅದು ಹೆಚ್ಚು ಬಲಿಷ್ಠ ವಾಗಿಬಿಟ್ಟಿದೆ. ಇದು ಶಕ್ತಿ-ಅಶಕ್ತಿಗಳ ನಡುವಿನ ತಂಟೆ. ಸ್ವಾತಂತ್ರ್ಯದ ಬೇಡಿಕೆಯನ್ನು ಹುಟ್ಟಿಸಲಿಕ್ಕೆ ಬಹಳ ಕಾಲದ ಶಿಕ್ಷಣವು ಬೇಕಾಗಿಲ್ಲ. ಅದು ಸ್ವಭಾವಸಿದ್ಧವಾದದ್ದು. ಬಲವು ಎಲ್ಲಿಯವರೆಗೆ ಮಾನವಜಾತಿಯು ಒಂದು ಭಾಗವನ್ನು ಆಳಿ ಅದನ್ನು ಕೀಳುಗೊಳಿಸುವದು? ಇಡೀ ಮಾನವತೆಯು ಪೂರ್ಣತೆಯನ್ನು ಹೊಂದುವ ವಿಕಾಸಕ್ಕೆ ಇದು ವಿಸಂಗತವಾಗಿದೆ. ವಸಾಹತುಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಡಿರಿ. ತಡವಿಲ್ಲದೆ ಅವು ನಿಮಗೆ ಸಮಾನವಾಗಿ ಬೆಳೆಯುವದನ್ನು ಕಾಣುವಿರಿ.) ಈ ತೆರನಾಗಿ ಮಾತನಾಡಿ ನಾನು ನನ್ನ ಜಾಗೆಯಲ್ಲಿ ಕುಳಿತೆ. ನನ್ನ ಹತ್ತಿರ ಕುಳಿತ ವಿದ್ಯಾರ್ಥಿಯು ಬೆನ್ನು ಚಪ್ಪರಿಸಿ 'It was the best speech of the evening' (ಈ ಸಂಜೆಯ ಉತ್ಕೃಷ್ಟ ಭಾಷಣವಿದು) ಎಂದು ನನ್ನ ಕಿವಿಯಲ್ಲುಸುರಿದನು. ಉಳಿದವರಿಂದ ಸಹ ಸಹಾನು ಭೂತಿಯು ದೊರೆಯಿತು. ಅಲ್ಲಿದ್ದ ಒಬ್ಬ ಅಮೇರಿಕನ್ ವಿದ್ಯಾರ್ಥಿಯು ಆನಂದಿತನಾಗಿ ಬಂದು ನನ್ನನ್ನು ಮಾತನಾಡಿಸಿದ. ಗ್ರಿಫಿಥ್ಸನಲ್ಲಿ ನನ್ನ ಬಗ್ಗೆ ಒಂದು ಕುತೂಹಲವು ಉಂಟಾಯಿತು.

---

## ೪೪

೩—೨—೩೭

ಈ ಸಲ ಇಲ್ಲಿಯ ಬರ್ಫದ ಬಗ್ಗೆ ನಿನಗೆ ಬರೆಯುತ್ತೇನೆ. ಈಗ ೩–೪ ದಿನಗಳ ಹಿಂದೆ ಮಿತಿಮೀರಿ ಚಳಿಯಾಗಿ ಬಿರುಸು ಗಾಳಿ ಬಿಟ್ಟಿತು. ನಾನು ಕಾಲೇಜಿಗೆ ಹೋಗುವಾಗ ಹಕ್ಕಿಗಳ ರೆಕ್ಕೆಗಳಲ್ಲಿಯ ಕಣಗಳಂತೆ ಉದುರುಮಂಜು ಉದುರಹತ್ತಿತು. ಸದ್ದಿಲ್ಲದೆ ಬಂದು ನೆಲದಮೇಲೆ ಬೀಳುತ್ತಿತ್ತು. ಮನೆಗೆ ಬಂದು ನೋಡಿದೆ. ಇಲ್ಲಿಯ ನಮ್ಮ ಮನೆಯೆದುರಿಗೆ ಎರಡು ಗೊಂಬೆಗಳು ನಿಂತ ಒಂದು ಸಣ್ಣ ಆಟದ ಹೊಂಡವಿದೆಯೆಂದು ಹೇಳಿದ್ದೆನಷ್ಟೆ? ಆ ಗೊಂಬೆಗಳು ಮೈ ತೊಳೆದು ಕೊಳ್ಳುವ ಕನ್ಯೆಯರಂತೆ ನಾಚಿ ಮುದುಡಿಕೊಂಡು ಮೈಮೇಲೆ ಅರಿವೆಯ ಪರಿವೆಯಿಲ್ಲದೆ ನಿಂತಿವೆ. ಆ ಗೊಂಬೆಗಳಡಿಯಲ್ಲಿಯ ನೀರೆಲ್ಲ ಬರ್ಫವಾಗಿ, ಬಾರಿಸಿದರೆ "ಖಟ್" ಎಂದು ಸಪ್ಪಳವಾಗುತ್ತಿತ್ತು. ಇದರ ಬಗ್ಗೆ ವಿಚಾರಮಾಡುತ್ತ ಅಂದು ರಾತ್ರಿ ಮಲಗಿದೆ. ಮರುದಿವಸ ಮುಂಜಾನೆ ಎದ್ದು ನೋಡುವಷ್ಟರಲ್ಲಿ ಮನೆಗಳ ಮಾಳಿಗೆಗಳ ಮೇಲೆ, ಮರಗಳ ಮೇಲೆ-ದಾರಿಯುದ್ದಕ್ಕೂ—ಮೇಲೆ—ಕೆಳಗೆ—ಹಿಮವು ಬಿದ್ದಿತ್ತು! ಮೆಲ್ಲನೆ—ಆದರೆ ಬಿಟ್ಟೂಬಿಡದೆ—ಬೀಳುತ್ತಲಿತ್ತು! ಊರೆಲ್ಲ ಬೆಳ್ಳಿಯ ತಗಡಿನಿಂದ ಮುಚ್ಚಿದಂತಾಗಿತ್ತು! ಕರಿಯ ಡಾಂಬರಿನ ರಸ್ತೆಯಮೇಲೆಲ್ಲ ಶುಭ್ರವಾದ ಹಿಮ! ಇದರಿಂದ ಹುಡುಗರಿಗೆ ಎಂಥ ಆಟ! ಹಿಮವನ್ನು ಕೈಯಿಂದ ಕೂಡಿಸಿ ಚಂಡುಮಾಡಿ ಒಬ್ಬರಿಗೊಬ್ಬರು ಹೊಡೆದಾಡುತ್ತಿದ್ದರು. ಅದನ್ನು ನೋಡಿ ನನಗೂ ಕೈತಿಂಡಿಯಾಯಿತು!

ನಮ್ಮ ಮನೆಯಮುಂದಿದ್ದ ಗೊಂಬೆಗಳ ಸ್ಥಿತಿಯನ್ನು ನೋಡಿ ನನಗೆ ಕರುಣೆ ಬಂತು. ಹೊಂಡದ ನೀರೆಲ್ಲ ಬರ್ಫವಾಗಿದೆ; ಮೇಲಿನಿಂದ ಹಿಮವು ಬೀಳುತ್ತಲಿದೆ; ಗಾಳಿಯು ಬೀಸುತ್ತಲಿದೆ. ಇದಕ್ಕೆಲ್ಲ

ಮೈಯೊಡ್ಡಿ ನನ್ನ ಕೋಣೆಯ ಮುಂದೆ ಆ ಗೊಂಬೆಗಳು ನಿಂತಿವೆ! ಒಳಕ್ಕಾದರೂ ಕರೆಯಲಾ? ಎಂದೆನಿಸಿತು. ಆದರೆ ಆ ಗೊಂಬೆಗಳ ಮಾತೆಲ್ಲಿ ನನಗೆ ಒಲುವದು? ನಾನು ಕರೆದರೆ ಅವು ಬರಬಹುದೆ? ಹೋಗಿ ಆ ಗೊಂಬೆಗಳ ಮೇಲೆ ಕೈಯಾಡಿಸಿದೆ. ಆದರೆ ಮುದುಡಿಕೊಂಡು ನಾಚಿ ನಿಂತ ಗೊಂಬೆಗಳು ಕಣ್ತೆರೆಯಲಿಲ್ಲ. ಆಗ ನನಗೆ ತೋರಿದ ಭಾವವು ಈ ಕವಿತೆಯಲ್ಲಿದೆ.

## ಶಿಲಾಕನ್ಯೆ

ಮಂಜು ಬೀಳುವದೆಂದು
ಬೆದರಿ ನಿಂತಿಹ ಕನ್ಯೆ!
ಅಂಜದಿರು ಮೈಚಳಿಯ ಬಿಟ್ಟು ನಿಲ್ಲು.
ಸುರಿದು ಮುಗಿಲೊಳಗಿಂದ
ಹಿಮವು ಬಿದ್ದಿರಲೇನು!
ನಿಂತ ನೀರಾದರೇನಾಣೆಕಲ್ಲು?

ನಿನ್ನ ಕೊಳದಲ್ಲಿರುವ
ಕೆಂಪು ಮೀನಗಳೆಲ್ಲ
ಮಿಸುಗದಲೆ ಮುಗಿದಿಹವು ಮಂಜಿನಲ್ಲಿ.
ದಿನದಿನಕು ಕಣ್ತೆರೆವ
ನೀರ್ವೂಗಳೆಲ್ಲಿಹವು?
ಮುಚ್ಚಿಹವು ಹಿಮಕುಂಡದಂಚಿನಲ್ಲಿ.

ದುಂಡುಮಲ್ಲಿಗೆಯಂಥ
ಮೈಯುಳ್ಳ ಕೋಮಲೆಯೆ!
ನಿಂತೆ ತುದಿದಂಡೆಗತಿ ಖಿನ್ನಳಾಗಿ!
ಮಾಗಿಯಲಿ ತುಂಬಿದ್ದ
ಮೊಗಸಿರಿಯು ಕಳೆದಿರಲು
ಯೋಚಿಸುವೆ ನೀನಿಂದು ಭಿನ್ನಳಾಗಿ!

ಬೆದರದಿರು. ಬಂದೀತು
ಒಂದುದಿನ ಮಧುಮಾಸ.
ಮತ್ತೆ ನೀರಾದೀತು ಆಣೆಕಲ್ಲು.
ಹಿಮವಲ್ಲ, ಹಿಮಕರಸ
ಹುಣ್ಣಿಮೆಯು ಬೆಳಗೀತು.
ಮೂಡೀತು ಬಣ್ಣಬಣ್ಣಗಳ ಬಿಲ್ಲು.

ನಿಂತು ತುದಿದಂಡೆಯಲಿ
ಕೊಳದೆದೆಯ ನಳೆಯುತಿರೆ,
ಅರಳುವವು ನೀರ್ಪೂಗಳೆಲ್ಲ ಮರಳಿ.
ಧರೆಗೆ ಬೆಳಕಾಗುವದು,
ಕೊಳಕೆ ಹಗಲಾಗುವದು.
ಸುಳಿಯುವವು ಕೆಂಪು ಮೀನಗಳು ಹೊರಳಿ!

ಮಂಜು ಬೀಳಬೇಕಾದರೆ ನೋಡಬೇಕಿತ್ತು! ಎಲ್ಲಿಯೋ ಒಂದು ಮೂಲೆಯಲ್ಲಿ ಒಬ್ಬ ಮಾಂತ್ರಿಕನು ನಿಂತುಕೊಂಡು ಬೆರಳೆತ್ತಿರಬೇಕು! ಎತ್ತಿದೊಡನೆ,—ನಿಂತಹಾಗೆಯೇ ಕೊಳಗಳೆಲ್ಲ ಮಂಜುಗಡ್ಡೆಗಳಾದವು. ಥೇಮ್ಸ ನದಿಯು ಹರಿಯಲಾರದೆ ಹರಿಯುತ್ತಿತ್ತು. ಎಲ್ಲೆಡೆಗೆ ನುಸುಳಿ ಬಂದು ಹಿಮವು ಬೀಳುತ್ತಿತ್ತು. ಈಗ ಮಾಂತ್ರಿಕನು ಬೆರಳನ್ನು ಮಡಿ ಚಿರಬೇಕು! ಮತ್ತೆ ಬಿಸಿಲು ಬಿದ್ದಿದೆ. ಚಳಿಗಾಲವು ಕಳೆಯುವವರೆಗೆ ಇದೇ ರೀತಿಯಾಗಿ ಸಾಗುವದು!



# ೪೫

ಆಕ್ಸಫರ್ಡ
೪—೨—೩೭

'ಆಸ್ಕರ ವಾಯಿಲ್ಡ್' ಎಂಬ ಕವಿಯು ಯೂನಿಯನ್ ಸೊಸಾಯಿಟಿಗೆ ಒಂದು ಗ್ರಂಥದ ಪ್ರತಿಯನ್ನು ಕಾಣಿಕೆಯಾಗಿ ಕೊಟ್ಟನು. ಆದರೆ ಆಗಿನ ಸದಸ್ಯರು ತೀರ ಸನಾತನಿ ಮಾರ್ಗದವರು. ಅದನ್ನು ಸ್ವೀಕರಿಸಲಿಲ್ಲ! ಕಾಣಿಕೆಯು ಕೈಬರಹದೊಂದಿಗೆ ಆ ಪ್ರತಿಯು ಎಲ್ಲಿಯೋ ಉಳಿಯಿತು. ಈಗ ಅದು ಮಾರಾಟಕ್ಕೆ ಬಂದಿದೆ. ಅದರ ಕಿಮ್ಮತ್ತು ೧೦ ಪೌಂಡಂತೆ. ಈಗಿನ ಸದಸ್ಯರಲ್ಲಿ ಕೆಲವರು ಸೊಸಾಯಿಟಿಯು ಆ ಪ್ರತಿಯನ್ನು ಕೊಂಡುಕೊಳ್ಳಬೇಕೆಂದು ಗೊತ್ತುವಳಿಯನ್ನು ತಂದರು. ಆದರೆ ಬೆಲೆಯು ತೀರ ಹೆಚ್ಚಾಗಿದ್ದ ಕಾರಣ ಅವರೇ ಸುಮ್ಮನಿರಬೇಕಾಯಿತು.

* * * *

೫—೨—೩೭

ವೆಲ್ಸ ಪ್ರಾಂತದಲ್ಲಿಯ (ಅದೂ ಒಂದು ದೇಶವೆಂದು ವೆಲ್ಸ ಜನರ ಮತ! ನಮ್ಮಲ್ಲಿ ದೇಶಗಳು ಪ್ರಾಂತಗಳಾಗಿವೆ. ಇಲ್ಲಿ ಪ್ರಾಂತಗಳು ದೇಶಗಳಾಗುತ್ತಲಿವೆ!) ಕೂಲಿಕಾರರ ಬಡತನವನ್ನು ಹೋಗಲಾಡಿಸಲು ಕಾಲೇಜಿನ ಯುವಕರು ಸಹ ಇಲ್ಲಿ ಪ್ರಯತ್ನಿಸುತ್ತಿದ್ದಾರೆ. ವಸತಿಗೃಹಗಳಲ್ಲಿ ದಿನಾಲು ಸಮೀಚೀನ ಊಟವಿರುವದಷ್ಟೆ. ವಾರದಲ್ಲಿ ಒಂದು ದಿವಸ ಕಡಿಮೆ ಬೆಲೆಯ ಊಟವನ್ನು ಮಾಡಬೇಕು; ಆದರೆ ಎಂದಿನಂತೆ ರೂಢಿಯ ಪ್ರಕಾರ ಆದರ ಲೆಕ್ಕವನ್ನು ಹಿಡಿಯಬೇಕು. ಹೀಗೆ ಮಾಡಿ ಉಳಿಸಿದ ಹಣವನ್ನು ಕೂಲಿಕಾರರಿಗೆ ಕಳಿಸುವ ಎತ್ತುಗಡೆಯನ್ನು ಮಾಡಿದ್ದಾರೆ!

* * * *

೬–೨–೩೭

'Printer's devil' (ಮುದ್ರಾರಾಕ್ಷಸ) ಎಂದು ಹೇಳುತ್ತಾರಲ್ಲ! ಒಮ್ಮೊಮ್ಮೆ 'Printer's genius' (ಮುದ್ರಾಪ್ರತಿಭೆ) ಯ ಬಗ್ಗೆ ಮಾತ ನಾಡುವ ಪ್ರಸಂಗ ಬರುತ್ತದೆ. ವ್ಹರ್ಜಿಲ್ ಕವಿಯ ಮೇಲೆ ಟೆನಿಸನ್ನನು ಬರೆದ ಕವಿತೆಯನ್ನು ಅಚ್ಚಿಗೆ ಕೊಟ್ಟಾಗ— "All the charm of all the poets flowering in a lovely word" (ಎಲ್ಲ ಕವಿಗಳ ಎಲ್ಲ ಮೋಹಕತೆ ಒಂದು **ಚೆಲುವಾದ** ನುಡಿಯಲ್ಲಿ ಹೂತುದು) ಎಂಬ ಒಂದು ಸಾಲಿತ್ತು. ಅಚ್ಚಾಗಿ ಬಂದಾಗ 'Lovely' (ಚೆಲುವಾದ) ಎಂಬ ಶಬ್ದವು 'Lonely' (ಏಕಾಕಿ) ಎಂದಾಯಿತು! ಕಿರಿದರಲ್ಲಿ ಹಿರಿದನ್ನು ಹೇಳುವ ಶಬ್ದಗಳು ವ್ಹರ್ಜಿಲ್ ಕವಿಯ ಕೃತಿಯಲ್ಲಿ ತುಂಬಿವೆ! ಟೆನಿಸನ್ನನ ಶಬ್ದಕ್ಕಿಂತ ಇದರಲ್ಲಿಯೇ ಹೆಚ್ಚು ಔಚಿತ್ಯವಿದೆ!

*  *  *  *

ಶರ್ವುಡ್ಡನು ಇಂದು ಮುಂಜಾನೆ ಕಾಲೇಜಿನಲ್ಲಿ ಭೆಟ್ಟಿಯಾದ. ತನ್ನ ಕಾದಲಳಿಂದ ಒಂದು ಪತ್ರವು ಬಂದಿದೆಯೆಂದು ಹೇಳಿದ. ಅವಳು ಅಮೇರಿಕೆಯಲ್ಲಿ ಅಭ್ಯಾಸ ಮಾಡುತ್ತಿರುವಳಂತೆ. 'We function as one unit' (ನಾವು ಒಂದುಕಟ್ಟಾಗಿ ನಡೆಯುತ್ತೇವೆ) ಎಂದು ಅವಳ ಬಗ್ಗೆ ತನ್ನಲ್ಲಿರುವ ಪ್ರೀತಿಯನ್ನು ವ್ಯಕ್ತಗೊಳಿಸಿದ. ಆದರೆ ಶರ್ವುಡ್ಡನು ಸ್ವಭಾವತಃ ವಿಲಾಸಿ. ಇಲ್ಲಿ ಕೆಲವರು ತರುಣಿಯರ ಸೆಳೆತದಲ್ಲಿ ತಾನು ಸಿಕ್ಕು ಬೀಳಬಹುದೆಂದು ತನ್ನ ಪ್ರೀತಿಯವಳು ಚಿಂತಾಪರಳಾಗಿರುವ ಳೆಂದು ಹೇಳಿದ. ಆ ಪತ್ರವನ್ನು ಅವನಿಗೆ ಮೊದಲು ಓದಬೇಕಾಗಿತ್ತು. ಇಬ್ಬರೂ ಕೂಡಿ ಉಪಹಾರಗೃಹಕ್ಕೆ ನಡೆದೆವು. ಹೋಗುವಾಗ ಶರ್ವುಡ್ಡ ನೆಂದ: "I want the company of women. It is a physiological process. I can't help it. Only, I have to be careful not to get into emotional situations." (ನನಗೆ ಸ್ತ್ರೀಯರ ಸಹವಾಸಬೇಕು. ಅದು ಶರೀರಧರ್ಮ, ಅದಕ್ಕೆ ಉಪಾಯವಿಲ್ಲ. ಆದರೆ ಅದು ಭಾವನೆಯ ವಿಷಯವಾಗದಂತೆ ನಾನು ಎಚ್ಚರಿರಬೇಕಾಗಿದೆ ಮಾತ್ರ.)

"But it is impossible to separate the physical from emotional or the intllectual." (ಆದರೆ ಭಾವನೆ ಇಲ್ಲವೆ ಬುದ್ಧಿಯ ವಿಷಯವನ್ನು ಶರೀರ ವಿಷಯದಿಂದ ಬೇರ್ಪಡಿಸುವುದು ಅಸಾಧ್ಯ) ಎಂದೆ ನಾನು. "I know that is the trouble." (ನನಗೆ ಗೊತ್ತಿದೆ. ಅದೇ ತೊಂದರೆ) ಶರ್ವುಡ್ಡನು ಹೇಳಿದ. ತನ್ನ ದೇಶಕ್ಕೆ ಹೋದ ಮೇಲೆ ತನ್ನ ಕಾದಂಬರಿಯನ್ನು ಮದುವೆಯಾಗುವನಂತೆ. "Our tastes are similar. Our habits are similar. Only, she is slightly older than myself." (ನಮ್ಮ ಅಭಿರುಚಿ ಒಂದೇ. ನಮ್ಮ ಚಟ ಒಂದೇ. ಆದರೆ ಅವಳು ನನಗಿಂತ ತುಸು ಹೆಚ್ಚು ವಯಸ್ಸಾದವಳು ಮಾತ್ರ.)

"That does not matter. One of the two has got to be older than the other." (ಅದೇನು ತಪ್ಪಿಲ್ಲ. ಯಾರೊಬ್ಬರು ಹೆಚ್ಚು ವಯಸ್ಸಿನವರಿರಬೇಕಾಗುತ್ತದೆ) ಎಂದು ನಾನು ಹೇಳಿದೆ!

* * * *

ಇಂದು 'ಶಾ'ನ **Caesar and Cleopatra** (ಸೀಝರ ಮತ್ತು ಕ್ಲಿಯೋಪ್ಯಾಟ್ರಾ) ಎಂಬ ನಾಟಕವನ್ನು ನೋಡಿದೆ. ಸೀಜರನ ಪಾತ್ರವೊಂದನ್ನು ಬಿಟ್ಟರೆ ಅಭಿನಯವು ಅಷ್ಟು ಚೆನ್ನಾಗಿದ್ದಿಲ್ಲ. ಕ್ಲಿಯೋಪಾತ್ರನ ಪಾತ್ರವನ್ನು ವಹಿಸಿದ ನಟಿಯು ಬಹುತೇಕ ನಗ್ನಳಾಗಿಯೇ ರಂಗಭೂಮಿಯ ಮೇಲೆ ಬಂದಿದ್ದಳು. ನಾಟಕದ 'ಮಾಯೆಯು' ಈ ವಾಸ್ತವಿಕತೆಯಿಂದ ಕೆಡಬಹುದೇನೆಂಬ ಸಂಶಯವು ಒಮ್ಮೊಮ್ಮೆ ಬರುತ್ತಿತ್ತು. ಸ್ವತಃ ನಾಟಕವು ರಮ್ಯವಾಗಿದೆ. ಅದರಲ್ಲಿ ವ್ಯಕ್ತವಾದ ಆಂಗ್ಲರ ಟೀಕೆಯು ಅದ್ಭುತವಾದದ್ದು. 'ಸೀಜರನ' ಪಾತ್ರವನ್ನು 'ಶಾ'ನು ಚೆನ್ನಾಗಿ ಕಲ್ಪಿಸಿದ್ದಾನೆ. ಐತಿಹಾಸಿಕ ಮಹತ್ವದ ಹಾಗು ಅದ್ಭುತರಮ್ಯತೆಯ ಕೀರ್ತಿಯನ್ನು ಪಡೆದ ಪಾತ್ರ-ಸನ್ನಿವೇಶಗಳ ಮೇಲೆ 'ಸುಕುಮಾರ' ಪ್ರಯೋಗವನ್ನು ಆರೋಪಿಸಿದಾಗ (ಇದು ಕೇವಲ ಅಣಕವಾಡಿಸ ರೀತಿಯಲ್ಲ. ಸೀಜರನು ಅಲ್ಲಲ್ಲಿ ತತ್ವಜ್ಞಾನಿಯ ಅನುಭವ–ಅಂತಃಕರಣದಿಂದ ಮಾತನಾಡುತ್ತಾನೆ.) ಒಂದು ಹೊಸತಾದ ಮನೋರಂಜನೆಯೂ

ಸಾಹಿತ್ಯಪ್ರಕಾರವೂ ಉತ್ಪನ್ನವಾಗುವವು. ಇದನ್ನು ಈ ನಾಟಕದಲ್ಲಿ ಕಾಣಬಹುದು.

*   *   *   *

೭—೨—೩೭

ರಿಡ್ಲೆ ಎಂಬ ಗೃಹಸ್ಥನು ಸ್ಪೇನದ ಬಗ್ಗೆ ಮಾತನಾಡುವದನ್ನು ಕೇಳಿದೆ. "The twentieth century is creating a new epoch. And Spain has shown that the wars to be fought in the future will be ideological wars." (೨೦ನೆಯ ಶತಮಾನವು ಹೊಸ ಯುಗವೊಂದನ್ನು ಉಂಟುಮಾಡುತ್ತಿದೆ. ಇನ್ನು ಮುಂದೆ ಆಡುವ ಯುದ್ಧಗಳು ವಿಚಾರ ಯುದ್ಧಗಳೆಂದು ಸ್ಪೇನವು ತೋರಿಸಿದೆ) ಎಂದು ಹೇಳಿದನು.

*   *   *   *

ಮೊದಲು ಟರ್ನರನಿಗೆ ಕೆಮ್ಮು ಬಂದಿತು. "He was messing about in the rain. I told him not to. And now he has got it. He is silly. He does not understand." (ಅವನು ಮಳೆಯೊಳಗೆ ಮಿಸುಕಾಡುತ್ತಿದ್ದ. ನಾನು ಬೇಡವೆಂದೆ. ಈಗ ಅದು ಬಂದಿದೆ. ಅವ ಹುಚ್ಚ. ಅವನಿಗೆ ತಿಳಿಯುವದಿಲ್ಲ) ಎಂದು ಶ್ರೀಮತಿ ಟರ್ನರಳು ಹೇಳಿದಳು. ಮರುದಿನ ಆಕೆಗೂ ಕೆಮ್ಮು ಬಂದಿತು. ಇನ್ನಿಷ್ಟು ಸಿಟ್ಟಿಗೆದ್ದು ಗಂಡನ ಮೇಲೆ ಒದರಾಡಿದಳು: "Whenever he is slightly unwell, he is very fidgety. He thinks he is going to die. Let him. It will serve him well." (ಸ್ವಲ್ಪಾದರೂ ಜಡ್ಡಾದರೆ ಅವನು ಬಹಳ ಚಡಪಡಿಸುತ್ತಾನೆ. ತಾನು ಸಾಯುವೆನೆಂದು ತಿಳಿಯುತ್ತಾನೆ. ಸಾಯಲಿ. ಅದು ಅವನಿಗೆ ನೆಟ್ಟಗೆ.) ಇಷ್ಟು ವಯಸ್ಸಾದರೂ ಇವರ ದಾಂಪತ್ಯವು ಇನ್ನೂ ಹಣ್ಣಿಗೆ ಬಂದಿಲ್ಲ!

*   *   *   *

೮—೨—೩೭

ಇಲ್ಲಿ ಬರೆಯುವ ಮಾತುಗಳಿಗೆ ಬಹಳ ದೊಡ್ಡ ಸಾಕ್ಷಿಯಿದೆ. ಅಂತೇ ಅವನ್ನು ಇಲ್ಲಿ ಬರೆಯುತ್ತಿದ್ದೇನೆ. ಸಿ. ಎಫ್. ರಾಮಸ್ವರಿಗೆ

ನೋಬೆಲ್ ಪಾರಿತೋಷಕವು ದೊರೆತಾಗ ರಾಯುಟರ್ ಏಜನ್ಸಿಯ ಮನುಷ್ಯನು ಹೋಗಿ ಅವರ ಸಂದೇಶವನ್ನು ಕೇಳಿದನಂತೆ: "Nothing succeeds like propaganda" (ಪ್ರಚಾರದಷ್ಟು ಯಾವುದೂ ಯಶಸ್ವಿಯಲ್ಲ) ಎಂದು ಅವರು ಹೇಳಿದರು! ಚೇಷ್ಟೆಗಾಗಿ ಅರ್ಧ ಹಾಗೆ ಅವರು ಹೇಳಿದರು. ಆದರೆ ಅದರಲ್ಲಿ ಒಂದು ಅರ್ಥವಿತ್ತು; ಅವರ ಕೈಯಲ್ಲಿ ಕಲಿತ ವಿದ್ಯಾರ್ಥಿಗಳು ರಾಮನ್ನರು ಬರೆದ ಲೇಖಗಳನ್ನು ಒಟ್ಟುಗೂಡಿಸಿ ಮುದ್ರಿಸಿದರು; ಆ ಪುಸ್ತಕದ ಪ್ರತಿಗಳನ್ನು ಸುಪ್ರಸಿದ್ಧ ವೈಜ್ಞಾನಿಕರ ಕಡೆಗೆ ಕಳಿಸಿದರು,— ಇವರಿಗೇಕೆ ನೋಬೆಲ್ ಪಾರಿತೋಷಕವು ಸಿಗಬಾರದೆಂದು ಪತ್ರ ಬರೆದರು. ರಾಮನ್ನರ ಪ್ರತಿಭೆಗೆ ಶಿಷ್ಯರ ಸಹಾಯವು ದೊರೆತು ಬಂಗಾರಕ್ಕೆ ಕುಂದಣವಿಟ್ಟಂತಾಯಿತು.

ಆದರೆ ಬೇರೆ ಕೆಲವರು ಅಮೇರಿಕಾ ಇಲ್ಲವೆ ಇಂಗ್ಲಂಡಕ್ಕೆ ಹೋಗಿ ಅಲ್ಲಿಯ ಕೀರ್ತಿವಂತರನ್ನು ಕಂಡು, 'ನನ್ನ ಹೆಸರನ್ನು ನೋಬೆಲ್ ಪಾರಿತೋಷಕಕ್ಕಾಗಿ 'ಸಿಫಾರಸು' ಮಾಡಿ ಕಳಿಸಿರಿ, ಕಳಿಸಿರಿ' ಎಂದು ಹೇಳುತ್ತ ತಿರುಗಾಡುತ್ತಾರಂತೆ! ಇದೊಂದು ಬೇರೆ ಮಾದರಿ.

ತೆಲುಗುನಾಡಿನಲ್ಲಿ ಒಬ್ಬ ಮಹನೀಯರು ಒಂದು ಗ್ರಂಥವನ್ನು ಬರೆದು ಅದನ್ನು ಟಾಗೋರರವರಿಗೆ ಅರ್ಪಿಸಿದ್ದಾರಂತೆ. "To the first Nobel Laureate. By an aspirant for the Nobel Prize" (ಮೊದಲನೆಯ ನೋಬೆಲ್ ಪಾರಿತೋಷಕ ಕವಿಗೆ, ನೋಬೆಲ್ ಪಾರಿತೋಷಕದ ಆಕಾಂಕ್ಷಿಯೊಬ್ಬನಿಂದ) ಎಂದು ಅರ್ಪಣ ಪತ್ರಿಕೆಯಿದೆ!

ಅಲ್ಲದೆ ಸ್ವೀಡನ್ ಹಾಗು ಬ್ರಿಟನ್ನದ ಸರಕಾರದವರ ನಡುವಿನ ಸಂಬಂಧದ ಮೇಲೆ ಎಷ್ಟೋ ಅವಲಂಬಿಸಿದೆ! ರ್‍ಯಾಮ್ಸೆ ಮ್ಯಾಕ್ಡೋನಲ್ಡರ ಹೆಸರು 'ಶಾಂತತಾ ಪಾರಿತೋಷಕಕ್ಕಾಗಿ' ಹೇಗೆ ನಮೂದಿಸಿ ಹೋಯಿತು? (ಸಿಗಲಿ, ಬಿಡಲಿ,—ಆ ಮಾತು ಬೇರೆ.) ಮಹಾತ್ಮಾ ಗಾಂಧಿಯವರಿಗೆ ಅದು ಹೇಗೆ ದೊರೆಯಲಿಲ್ಲ? ಅಂತರರಾಷ್ಟ್ರೀಯ ಪಾರಿತೋಷಕವನ್ನು ಪಡೆಯಲು, ಅಂತರರಾಷ್ಟ್ರೀಯ ರಾಜಕಾರಣವನ್ನು ಅರಿತಿರಬೇಕಾಗುತ್ತದೆ.

ಕನ್ನಡ ನಾಡಿನ ಅಣ್ಣತಮ್ಮಂದಿರೆ! ನಿಮ್ಮಲ್ಲಿ ಅನೇಕರು ಸಾಹಿತ್ಯ ಭೂಮಿಯಲ್ಲಿ ಉಜ್ವಲವಾದ ಕೆಲಸವನ್ನು ಮಾಡುತ್ತಿರಬಹುದು. ಆದರೆ ಈ ಪಾರಿತೋಷಕದ ಆಸೆಯನ್ನು ಬಿಟ್ಟುಬಿಡಿರಿ! ನಮ್ಮ ನಾಡನ್ನು ಮೊದಲು ಕಟ್ಟೋಣ! ಕನ್ನಡಿಗರನ್ನು ಒಂದುಗೂಡಿಸಿ ನಮ್ಮ ಹಾಡಿನಿಂದ ಅವರೆದೆಯನ್ನು ತಣಿಸಿದರೆ, ಅಂಥ ಕೆಲಸದ ಮುಂದೆ 'ನೋಬೆಲ್' ಪಾರಿತೋಷಕವು ಕಳೆಯಿಲ್ಲದ ಪದಕವಾಗಬಹುದು.

---

## ೪೬

೯-೨-೩೭

ಇಂದು ಇಲ್ಲಿ ಸರ್ ರಾಧಾಕೃಷ್ಣನ್ನರನ್ನು ಅವರ ಮನೆಯಲ್ಲಿ ಕಂಡೆ. ಸುಮಾರು ಎರಡೂವರೆ ತಾಸು ಮಾತು—ಕಥೆಯಾಯಿತು. ನಾನು ಕರ್ನಾಟಕದವನೆಂದು ಹೇಳಿದಾಗ, 'ಕರ್ನಾಟಕವು ಬಹಳ ಹಿಂದುಳಿದ ಪ್ರಾಂತವೆಂದು ಕಾಣುತ್ತದೆ. ಹೌದೇನು?' ಎಂದು ಕೇಳಿದರು. 'ಅಲ್ಲ.' ಎಂದು ನಾನು ತಿಳಿಸಿದೆ. ಅವರ ಪರಿಚಯದ 'ಶ್ರೀ'ಯವರ, 'ವೀ. ಸೀ.' ಯವರ ಸಾಹಿತ್ಯದ ಬಗ್ಗೆ ಮಾತನಾಡಿದೆ.

* * * *

ಪಾಮ್ ದತ್ತ (Palm Dutt) ಎಂಬವರು ಇಲ್ಲಿಯ ಪ್ರಸಿದ್ಧ ಸಮತಾವಾದಿಗಳಲ್ಲಿ ಒಬ್ಬರು. ಇಲ್ಲಿಯೇ ನೆಲೆಸಿದ ಭಾರತೀಯರವರು. ಕಮ್ಯುನಿಸ್ಟ್ ಪಾರ್ಟಿಯ ಪತ್ರಿಕೆಯ ಸಂಪಾದಕರಾಗಿದ್ದಾರೆ. 'Capitalism and Imperialism' (ಬಂಡವಲುಗಾರಿಕೆ ಮತ್ತು ಸಾಮ್ರಾಜ್ಯವಾದ) ಎಂಬ ವಿಷಯದ ಮೇಲೆ ಇಂದು ಅವರ ಭಾಷಣವನ್ನು ಕೇಳಿದೆ. ಇವರ ತಂದೆಯವರು ಸ್ಕಾಟಲಂಡ್‌ದವರಂತೆ.

* * * *

೧೦—೨—೩೭

ತನ್ನ ಗಂಡನು ಔಷಧವನ್ನು ತೆಗೆದುಕೊಳ್ಳಲು ಒಲ್ಲನೆಂದು ಶ್ರೀಮತಿ ಟರ್ನರಳು ಇಂದು ಸಿಟ್ಟು ಬೆಂಕಿಯಾಗಿದ್ದಳು. ನಿಲುವಂಗಿ ಯನ್ನು ಹಾಕಿಕೊಂಡು ಅಗ್ಗಿಷ್ಟಿಗೆಯ ಮುಂದೆ ಕೂತು ಮತ್ತೆ "ಉರಿ ಯನ್ನು ನೀನು ಸೆಟ್ಟಗೆ ಹೊತ್ತಿಸಿಲ್ಲ. ಉಹು! ಉಹು!" ಎಂದು ಅವನು ನಡುಗುತ್ತ ಕೂತು ಕೋಣೆಯ ಬಾಗಿಲು-ಕಿಟಿಕೆಗಳನ್ನು ಮುಚ್ಚಿ ಸಿದನಂತೆ. ಮರುಕ್ಷಣವೆ ನಿಲುವಂಗಿಯನ್ನು ತೆಗೆದೊಗೆದು ಬಾಗಿಲು ತೆರೆದು ಸೆಕೆಯಾಗುತ್ತಿದೆಯೆಂದು ಹಿತ್ತಲದಲ್ಲಿ ಹೋಗಿ ನಿಂತನು. ಹೀಗೆ ಮಾಡಿದರೆ ಮನೆ ಬಿಟ್ಟು ತವರುಮನೆಗೆ ಹೋಗುವೆನೆಂದು ಶ್ರೀಮತಿ ಟರ್ನರಳು ಬೆದರಿಕೆ ಹಾಕಿದಳು. 'ಅವನು ಸ್ವಭಾವತಃ ಸಿಡುಕನಲ್ಲ. ಅಶಕ್ತತೆಯಿಂದ ಹೀಗಾಗಿದ್ದಾನೆಂದು' ನಾನು ಸಮಾಧಾನ ಹೇಳಿದೆ. ಆಗ ಮುದುಕಿಯು ತುಸು ನಕ್ಕಳು. ಆ ಮೇಲೆ ಮತ್ತೆ ವಿಚಾರ ಮಗ್ನಳಾಗಿ: "But do you know,–when I loved him and spoke very tenderly to him, he would never care for me. But he would do whatever I wanted him to do, promptly if I cursed him like a dog." (ಆದರೆ ನಿನಗೆ ಗೊತ್ತಿದೆಯೆ? ನಾನು ಅವನನ್ನು ಪ್ರೀತಿಸಿ ಅಂತಃಕರಣದಿಂದ ಮಾತಾಡಿಸಿದಾಗ ಅವನು ನನ್ನನ್ನು ಲೆಕ್ಕಿ ಸಲೇ ಇಲ್ಲ. ಆದರೆ ನಾನು ನಾಯಿಗೆ ಬಯ್ದಂತೆ ಬಯ್ದರೆ ಮಾಡೆಂದದ್ದನ್ನೆಲ್ಲ ಲಗುಬಗೆಯಿಂದ ಮಾಡುತ್ತಿದ್ದನು) ಎಂದಳು! ಒಂದು ದಿನ ಟರ್ನರನು ತನ್ನ ಹುಟ್ಟಿದ ವೇಳೆಯನ್ನು ಹಿಡಿದು ಜ್ಯೋತಿಷ್ಯ ಯಂತ್ರ ದಲ್ಲಿ, (Slot machine–ಸ್ಲಾಟ್ ಮಶೀನ) ಒಂದು ಪೆನಿಯನ್ನು ಒಗೆದ. ಆಗ ಅವನ ಸ್ವಭಾವವನ್ನು ವಿಂಗಡಿಸಿ ಬರೆದ ಒಂದು ಚೀಟಿಯು ಬಂದಿತು. ಅದನ್ನೋದಿಕೊಂಡು ಹತ್ತಿರ ನಿಂತ ತನ್ನ ಮಗನಿಗೆ ಮನೆಯಲ್ಲಿ ಹೇಳ ಬೇಡವೆಂದು ಆಜ್ಞಾಪಿಸಿದನು. ಆದರೆ ಶ್ರೀಮತಿ ಟರ್ನರಳೆದುರಿಗೆ ಯಾವ ರಹಸ್ಯಗಳು ಉಳಿಯಬಹುದು? ಆ ಚೀಟಿಯನ್ನು ದೊರಕಿಸಿ ಓದಿದಳು: "You will put your foot on love and squash it like a blade of

grass.'' (ನೀನು ಪ್ರೇಮದ ವೇಲೆ ನಿನ್ನ ಕಾಲಿಕ್ಕಿ ಹುಲ್ಲು-ತುಳಿದಂತೆ ತುಳಿದು ಅದನ್ನು ಜಜ್ಜುವಿ) ಎಂದು ಅದರಲ್ಲಿ ಬರೆದಿತ್ತು. ದೇಶದಲ್ಲಿಯ ಉತ್ತಮ ವಿದ್ವಾಂಸನೊಬ್ಬನು ಅನೇಕ ವರ್ಷಗಳ ವರೆಗೆ ತನ್ನ ಗಂಡನ ಸಹವಾಸದಲ್ಲಿದ್ದು ಆ ಮೇಲೆ ಅವನ ಸ್ವಭಾವಪರಿಚಯವನ್ನು ಬರೆದರೂ ಇಷ್ಟೊಂದು ಚೆನ್ನಾಗಿ ಅದು ವ್ಯಕ್ತವಾಗುತ್ತಿದ್ದಿಲ್ಲವೆಂದು ಶ್ರೀಮತಿ ಟರ್ನರಳು ಹೇಳಿದಳು!

* * * *

೧೧—೨—೩೭

ಇಂದು ಯೂನಿಯನ್ನದ ಸಭೆಯಲ್ಲಿ ಕಾರ್ಯದರ್ಶಿಯು ಬಿಳಿ ಕಾಲಚೀಲಗಳನ್ನು ಹಾಕಿಕೊಂಡು ಬಂದಿದ್ದನು. ಸಂಜೆಯ ಉಡಿಗೆ ಯೊಂದಿಗೆ ಬಿಳಿಯ ಕಾಲಚೀಲವಿರಬಾರದೆಂದು ಇಲ್ಲಿಯ ರೂಢಿ. ಸರಿ. ಒಬ್ಬ ಸದಸ್ಯನಿಂದ ಅಧ್ಯಕ್ಷನಿಗೆ ಪ್ರಶ್ನೆ ಬಂತು, ಈ ವಿಷಯದಲ್ಲಿ. ಸಭೆ ಯೆಲ್ಲ ಬಿದ್ದು ಬಿದ್ದು ನಕ್ಕಿತು. ಸಮತಾವಾದಿಗಳಾದ (ಸಂಪ್ರದಾಯಕ್ಕೆ ಇವರು ಶರಣುಹೋಗುವವರಲ್ಲ) ಅಧ್ಯಕ್ಷರು ಹೇಳಿದರು: "All that we want to know is whether he is wearing socks. It is the socks that matter.'' (ನಮಗೆ ಬೇಕಾದದ್ದಿಷ್ಟೆ. ಅವನು ಕಾಲ ಚೀಲ ಹಾಕಿಕೊಂಡಿರುವನೋ ಇಲ್ಲವೋ? ಕಾಲಚೀಲವಿರೋದು ಮುಖ್ಯ)

May-Hew(ಮೇಹ್ಯೂ) ಎಂದು ಅಧ್ಯಕ್ಷರ ಹೆಸರು. ಒಬ್ಬ ಮಾತು ಗಾರನು ಯೂನಿಯನ್ನದ ಸ್ಥಿತಿಯ ಬಗ್ಗೆ ಮಾತನಾಡುತ್ತ: "There is a divinity that shapes our ends May-Hew them how we will'' (ನಾವೆಷ್ಟು 'ಮೇಹ್ಯೂ' ಮಾಡಿದರೂ ನಮ್ಮ ಭವಿಷ್ಯಕಟ್ಟುವ ದೈವತವೊಂದಿದೆ.) ಎಂದು ಚೇಷ್ಟೆ ಮಾಡಿದನು!

ಇಂದಿನ ವಿಷಯ: "That this House refuses to believe travellers' tales" (ಈ ಸಭೆಯು ಪ್ರವಾಸಿಕರ ಕಥೆ ನಂಬಲು ಸಿದ್ಧವಿಲ್ಲ)

ಸನ್ಮಾನ್ಯ ಅತಿಥಿಗಳು— "Miss Mannin, Author of **'South to Samarkand'** ('ಮಿಸ್ ಮ್ಯಾನಿನ್–ಸಮರಕಂದದ ದಕ್ಷಿಣಕ್ಕೆ' ಎಂಬುದರ ಗ್ರಂಥಕರ್ತ್ರಿ)

Mr. Ivor Brown, Author of **"I commit to the flames"** (ಮಿ. ಆಯುವ್ಹರ ಬ್ರ್ಯಾವ್ನ–'ಅಗ್ನಿಗೆ ಅರ್ಪಣ' ಇದರ ಗ್ರಂಥ ಕರ್ತ)

ಮಿಸ್. ಮ್ಯಾನಿನ್ ಎಂಬ ಪಯಣಗಾತಿಯು ತನ್ನ ಪಂಥವನ್ನು ಸಮರ್ಥಿಸುತ್ತ ಯೂನಿಯನ್ನದ ಸರಣಿಯನ್ನು ಟೀಕಿಸಿದಳು: "They just come prepared and have an awful predilection for being funny,–whether they are relevant or not." (ಅವರು ಅಷ್ಟಕ್ಕಷ್ಟೆ ಸಜ್ಜಾಗಿ ಬಂದು ಚೇಷ್ಟೆಮಾಡಲೆಂದು ಹುಚ್ಚು ಹಾತೊರೆಯುವರು– ತಮ್ಮ ಮಾತು ಅಬದ್ಧವಿರಲಿ, ಸುಬದ್ಧವಿರಲಿ) ಕಾದಂಬರಿಗಳಿಗಿಂತ ಪ್ರಯಾಣಕಥೆಗಳ ಹಾಗು ಜೀವನಚರಿತ್ರೆಗಳ ಮಾರಾಟವೇ ಈಗ ಹೆಚ್ಚಾಗಿದೆಯೆಂದು ಹೇಳಿದಳು.

ಪ್ರವಾಸಕಥೆಗಳ ಸರಣಿಯನ್ನು ಟೀಕಿಸುತ್ತ ಬ್ರ್ಯಾನ್ ಎಂಬ ಸಾಹಿತಿಯು ಮಾತನಾಡಿದನು. ಇವನು Cynic (ಸಿನಿಕ್)- 'ಚಾರ್ವಾಕ' ನೆನ್ನಬಹುದು. "I do not believe in anything, much less in travellers' tales. It is said that travel broadens our mind and deepens our experience. But it really hardens the arteries and corrupts the kidneys" (ನಾನು ಯಾವದನ್ನೂ ನಂಬುವವನಲ್ಲ– ಪ್ರಯಾಣಿಕ ಕಥೆಗಳನ್ನಂತೂ ನಂಬುವದು ಇನ್ನಿಷ್ಟು ಕಡಿಮೆ. ಪ್ರವಾಸವು ಮನಸ್ಸನ್ನು ಹಿಗ್ಗಿಸುತ್ತದೆಂದೂ ಅನುಭವವನ್ನು ಹೆಚ್ಚಿಸುತ್ತದೆಂದೂ ಹೇಳುತ್ತಾರೆ. ಆದರೆ ನಿಜವಾಗಿ ಅದು ರಕ್ತವಾಹಿನಿಗಳನ್ನು ಬಿರುಸು ಮಾಡುವದಲ್ಲದೆ ಅಂಡಗಳನ್ನು ನಷ್ಟಗೊಳಿಸುತ್ತದೆ)ಮುಂತಾಗಿ ಪ್ರಯಾಣ ದಿಂದಾಗುವ ತೊಂದರೆಗಳನ್ನು ವರ್ಣಿಸಿ,–ವೆಚ್ಚಮಾಡಿದ ದುಡ್ಡನ್ನು ತಿರುಗಿ ಪಡೆಯಲು ಮಾತ್ರ ಪ್ರಯಾಣಕಥೆಗಳನ್ನು ಬರೆಯುತ್ತಾರೆಂದು ಸೂಚಿಸಿದನು. ಸಮತಾವಾದಿಗಳ ಚೇಷ್ಟೆ ಮಾಡುತ್ತ ಅವರು ಸತ್ಯದ ಬಗ್ಗೆ: "Truth is a bourgeoisie metaphysical conception for

which the workers have no use" ( ಸತ್ಯವೆಂದರೆ ಮಧ್ಯಮ ಮನೋವೃತ್ತಿಯ ತಾತ್ತ್ವಿಕ ಕಲ್ಪನೆಯೊಂದು. ಅದರಿಂದ ಕೆಲಸಗಾರರಿಗೆ ಏನೂ ಪ್ರಯೋಜನವಿಲ್ಲ ) ಎಂದು ಹೇಳುವರೆಂದು ನಗೆಯಾಡಿದನು.

---

## ೪೭

೧೩—೨—೩೭

ಪುಶ್‌ಕಿನ್ ಎಂಬಾತನು ರಸಿಯಾ ದೇಶದ ಪ್ರಖ್ಯಾತ ಕವಿ. ಆತನ ಶತಮಾನ–ಸ್ಮಾರಕೋತ್ಸವದ ನಿಮಿತ್ತವಾಗಿ ಪ್ರೊ. ಎಲ್ಟನ್ ಎಂಬ ಆಂಗ್ಲ ಭಾಷಾವಿಶಾರದರು ಭಾಷಣ ಮಾಡಿದರು, ಅಂದರೆ ಇಲ್ಲಿಯ ಪದ್ಧತಿಯಂತೆ, ಬರೆದ ಭಾಷಣವನ್ನು ಓದುತ್ತ ನಡುನಡುವೆ ಮಾತನಾಡಿದರು. ವಿವರಣಪತ್ರಿಕೆಯ ಹೊರತಾಗಿ ಇವರೇ ಪ್ರೊ. ಎಲ್ಟನ್ ಎಂದು ತಿಳಿಯಲು ಮಾರ್ಗವೇ ಇರಲಿಲ್ಲ. ಗೊತ್ತಾದ ಹೊತ್ತಿಗೆ ನಿಯಮಿತ ಸ್ಥಳಕ್ಕೆ ಬಂದು ಮಾತನಾಡಲು ಪ್ರಾರಂಭಿಸಿದ್ದರಿಂದ ಇವರೇ ಪ್ರೊ. ಎಲ್ಟನ್ ಎಂದು ತಿಳಿಯಬೇಕಾಯಿತು. ಯಾರೂ ಅವರ ಪರಿಚಯ ಮಾಡಿಕೊಡಲಿಲ್ಲ, ಅವರ ಉಪಕಾರ ಸ್ಮರಿಸಲಿಲ್ಲ. ಭಾಷಣವು ಮುಗಿದಾಗ ಸಭಿಕರು ಮಾತ್ರ ಚಪ್ಪಾಳೆಯಿಕ್ಕಿದರು. ಇಲ್ಲಿಯ ಸಭೆಯ ಮಾದರಿಯ ವೃತ್ತಾಂತವೆಂದು ಇದನ್ನೆಲ್ಲ ಬರೆಯುತ್ತಿದ್ದೇನೆ.

ಪ್ರೊ. ರರು ತಮ್ಮ ಜೊತೆಗೆ ರಸಿಯನ್ ಭಾಷೆಯನ್ನು ಬಲ್ಲ ಒಬ್ಬ ಯುವಕನನ್ನು ಕರೆದುಕೊಂಡು ಬಂದಿದ್ದರು. ಪುಶ್‌ಕಿನ್ ಕವಿಯ ಗೀತೆಗಳ ಭಾಷಾಂತರಗಳನ್ನು ಓದಿ ಹೇಳಿದ ಮೇಲೆ ಆ ಯುವಕನು ಆ ಕೃತಿಗಳನ್ನೇ ಮೂಲದಲ್ಲಿ ಅಂದು ತೋರಿಸುತ್ತಿದ್ದನು. ಸಭಿಕರಿಗೆ ಆ ಭಾಷೆ ತಿಳಿಯುತ್ತಿರಲಿಲ್ಲ. ಆದರೆ ಹಾವಾಡಿಗನ ಮಂತ್ರಕ್ಕೆ ಮುಗ್ಧರಾದ ವಾಯುಜೀವಿಗಳಂತೆ ಸುಮ್ಮನೆ ಕೂತು ಕೇಳಿದರು. ಯುವಕನೂ ಚೆನ್ನಾಗಿ ಓದಿದ.

*    *    *    *

೧೪—೨—೩೭

ಇಂದು Mrs. Amabel Ellis (ಮಿಸೆಸ್ ಅಮಾಬೆಲ್ ಎಲಿಸ್) ಎಂಬ ಮಹಿಳೆಯು "An Interpretation of English History" (ಇಂಗ್ಲಿಶ್ ಇತಿಹಾಸದ ಅರ್ಥವಿವರಣೆ) ಎಂಬ ವಿಷಯದ ಮೇಲೆ ಮಾತನಾಡಿದಳು. 'ಆಭಾರ ಮನ್ನಿಸುವ' ಕೆಲಸವನ್ನು ಅಧ್ಯಕ್ಷರು ನನಗೊಪ್ಪಿಸಿದ್ದರು. ಅದನ್ನು ಚೆನ್ನಾಗಿಯೇ ನಾನು ಕೊನೆಗಾಣಿಸಿದೆ. ಭಾಷಣದಲ್ಲಿ ಅಷ್ಟೊಂದು ಹುರುಳಿರಲಿಲ್ಲ. ಆಭಾರಮನ್ನಿಸುವಾಗ ನಾನೂ ಆ ವಿಷಯದ ಬಗ್ಗೆ ಕೆಲವು ಮಾತುಗಳನ್ನು ಸಮಯೋಚಿತವಾಗಿ ಹೇಳಿದೆ.

*　　　*　　　*　　　*

ಎರಡು ಸಣ್ಣ ಕಥೆಗಳನ್ನು ಬರೆಯಬೇಕು: (೧) ಜ್ಯೋತಿಷಿಯು ಹೇಳುತ್ತಾನೆ, ಒಬ್ಬರಿಗೆ: ಇಂಥ ದಿವಸ ನಿಮ್ಮ ಹುಡುಗನು ಸಾಯುವನೆಂದು. ಅಂದು ಮನೆಯವರೆಲ್ಲರೂ ಆ ಹುಡುಗನ ಮೇಲೆ ಕಣ್ಣಿಡುತ್ತಾರೆ: ರಾತ್ರಿಯೆಲ್ಲ ಇಸ್ಪೇಟು ಆಡಲಿಕ್ಕೆ ಆ ಹುಡುಗನನ್ನು ಎಬ್ಬಿಸಿ ಕೂಡಿಸುತ್ತಾರೆ. ಏನೂ ಆಗುವದಿಲ್ಲ! ಪ್ರಳಯಕಾಲವನ್ನು ನಿರೀಕ್ಷಿಸುತ್ತ ಕುಳಿತ ಹಾಗೆ! (೨) Bain (ಬೇನ್) ಎಂಬ ಒಬ್ಬ ಪ್ರಿನ್ಸಿಪಾಲರು: "I ca'nt work if you give me the Turn bulls" (ನೀವು ಈ 'ಹೋರಿ'ಗಳನ್ನು ಕೊಟ್ಟರೆ ನಾನು ಕೆಲಸ ಮಾಡಲಾರೆ) ಎಂದು ನಿರುದ್ಯೋಗಿಗಳಾದ ಪ್ರೊಫೆಸರರನ್ನು ಅವರೆದುರಿಗೇ ಬಯ್ಯುವದು; ಗವ್ಹರ್ನರರು ಕಾಲೇಜಿಗೆ ಬಂದಾಗ ಸಭೆಯಲ್ಲಿ ಅವರ ಪತ್ನಿಯನ್ನುದ್ದೇಶಿಸಿ: "But for this streak of lightning, the cloud had not been here" (ಈ ಮಿಂಚಿನ ಗೆರೆಯಿರದಿದ್ದರೆ ಈ ಮೇಘವು ಇಲ್ಲಿರುತ್ತಿದ್ದಿಲ್ಲ) ಎಂದು ಹೇಳುವದು ಲಾರ್ಡ್ ಕರ್ಝನ್ನರ ವಿಷಯವಾಗಿ: "Both of us belonged to the same college in Oxford. I always stood, first. And he came second. I am supreme in my own sphere, here *too*,– in the college; the Vice-Roy dares not step in withoutmy consent. Being born an aristocrat, he comes as

the Vice-Roy of India. But I must tell you, I had the honour of kicking Lord Curzon once,–as his contemporary in Oxford." (ಆಕ್ಸಫರ್ಡದಲ್ಲಿ ಇಬ್ಬರೂ ಒಂದೇ ಕಾಲೇಜಿನವರಾಗಿದ್ದೆವು. ನಾನು ಯಾವಾಗಲೂ ಒಂದನೆಯ ನಂಬರು ಬರುತ್ತಿದ್ದೆ. ಅವರು ಎರಡನೆಯ ನಂಬರು. ನಾನು ನನ್ನ ಕ್ಷೇತ್ರದಲ್ಲಿ ಹೆಚ್ಚಿನವನು–ಇಲ್ಲಿ ಈ ಕಾಲೇಜಿನಲ್ಲಿ ಸಹ. ನನ್ನ ಅನುಮತಿಯಿಲ್ಲದೆ ವಾಯಿಸರಾಯರು ಒಳಗೆ ಹೆಜ್ಜೆ ಇಡಲಾರರು. ಲಾರ್ಡ ಕುಲದಲ್ಲಿ ಹುಟ್ಟಿದ್ದರಿಂದ ಅವರು ಹಿಂದುಸ್ಥಾನದ ವಾಯಿಸರಾಯರಾಗಿ ಬಂದಿರುವರು. ಆದರೆ ಒಮ್ಮೆ ಆಕ್ಸಫರ್ಡದಲ್ಲಿ ಲಾರ್ಡ ಕರ್ಝನ್ ಅವರನ್ನು ಒದೆಯುವ ಮಾನವು ನನಗೆ ದೊರಕಿತ್ತು.) ಮನಸ್ಸಿಗೆ ಬರದ ಪುಸ್ತಕಗಳನ್ನು–ಅರ್ಥಶಾಸ್ತ್ರದ ಮೇಲಿನವು–ಕ್ಲಾಸಿನ ಕಿಟಿಕಿಯೊಳಗಿಂದ ಬೀಸಿ ಹೊರಗೊಗೆಯುವದು; ಅಪರಾತ್ರಿಯಾಗುವ ತನಕ ಹಾಸ್ಟೆಲಿನಲ್ಲಿ ಹುಡುಗರೊಡನೆ ಹರಟೆಹೊಡೆಯುತ್ತ ಕುಳಿತಿರುವದು: ಬೋಟ್‌ಕ್ಲಬ್ ಕಾರ್ಯದರ್ಶಿಯು ತನಗಾಗದ ಇಬ್ಬರು ವಿದ್ಯಾರ್ಥಿಗಳನ್ನು ಅಣಕಿಸಲೆಂದು ಎರಡು ದೋಣಿಗಳಿಗೆ 'ಕಮಲಾ' 'ವಿಮಲಾ' ಎಂದು ಹೆಸರಿಟ್ಟನು: ಅವರು ಪ್ರಿನ್ಸಿಪಾಲರೆದುರಿಗೆ ದೂರು ಹೇಳಲು, ಕಾರ್ಯದರ್ಶಿಯೊಡನೆ ಅವರಿಗೆ ಕಾದಾಡಲು ಹೇಳಿ ಗೆದ್ದವರದೇ ಸತ್ಯವೆಂದು ಹೇಳಿ ಕಾದಾಟವನ್ನು ನೋಡುತ್ತ ನಿಂತರು ಪ್ರಿನ್ಸಿಪಾಲರು!

*  *  *  *

೧೬–೨–೩೭

ಗಾಳಿಯಲ್ಲಿ ಹಾರಿ ಹೋಗುವ ವಿಮಾನದ ಸಪ್ಪಳವನ್ನು ಕೇಳಿ ಓಣಿಯಲ್ಲಿಯ ಒಂದು ನಾಯಿಯು ಬೊಗಳುತ್ತಿತ್ತು. ಈಗ ಯುದ್ಧ ಸನ್ನಾಹವು ಜೋರಿನಿಂದ ನಡೆದಿದೆಯಷ್ಟೆ? ಅದನ್ನು ನೆನೆಸಿ ಮನಸ್ಸಿನಲ್ಲಿ:–

"I had rather be a dog and bay the aeroplane,
Than such a briton."

(ಇಂಥ ಬ್ರಿಟನ್ನನಾಗುವದಕ್ಕಿಂತ ನಾನೊಂದು ನಾಯಿಯಾಗಿ ವಿಮಾನವನ್ನು ತೆಗಳಿ ಬೊಗಳುವುದು ಲೇಸು.) ಎಂದು ಅಂದುಕೊಂಡೆ!

*  *  *  *

'ಹ್ಯೂ ಸಾಯಕ್ಸ ಡೇವ್ಹೀಜ' ಎಂಬ ಕವಿಯ ಭಾಷಣವನ್ನು ಕೇಳಲು ಹೋಗಿದ್ದೆ. ಈತನು Surrealist 'ಸರರಿಯಾಲಿಸ್ಟ' ಪಂಥದವನು. ಆಂಗ್ಲ ಸಾಹಿತ್ಯಪ್ರಪಂಚದಲ್ಲಿ ಈಗ ಗುಂಪು-ಗುಂಪಾಗಿ ನಿಲ್ಲದ ಹೊರತು ಮಾರ್ಗವಿಲ್ಲ. ಈಟ್ಸ ಕವಿಯು ಕನಿಷ್ಟಪಕ್ಷಕ್ಕೆ ಮೂರು ಗುಂಪುಗಳೊಳಗಿಂದ ಹಾಯ್ದು ನಿಂತಿದ್ದಾನೆ: 'ರ್ಹಾಯಿಮರ್ಸ ಕ್ಲಬ್'; 'ಆಯರಿಶ್ ರಿನೇಸನ್ಸ ಗ್ರುಪ್'; 'ಟಿ. ಎಸ್. ಇಲಿಯಟ್ ಕಂಪು'. 'ಮ್ಯಾಸಫೀಲ್ಡ', 'ವಿಲಿಯಂ ಡೇವೀಜ', 'ವಾಲ್ಟರ್ ಡಿ ಲಾ ಮೇರ' ಇವರೆಲ್ಲ ಹಳೆಯ ಮಾರ್ಗದವರು; ಈಗ ಬಿಡಿಗಾಳುಗಳು. ಇಂದು ನಿಶಾನೆಯನ್ನು ನಿಲ್ಲಿಸಿರುವ ಗುಂಪು 'ಟಿ. ಎಸ್. ಈಲಿಯಟ್' ಎಂಬ ಕವಿಯದು. ಪ್ರತಿಯೊಂದು ಗುಂಪಿಗೆ ಒಂದು ವಿಶೇಷ ದರ್ಶನದ ಬೆಂಬಲವು ಇಲ್ಲಿ ಅಗತ್ಯವೆನಿಸಿದೆ. 'ಈಲಿಯಟ್'ನಿಗೆ 'ಮಾರ್ಗ' (Classicism)ದ ಸಾಹಿತ್ಯ ಹಾಗು ಅವರ ಸಿದ್ಧಾಂತಗಳು; (ಧರ್ಮದಿಂದ ಸಹ ಅವನು 'ಕ್ಯಾಥೊಲಿಕ್' ಆಹುದು) 'ಸ್ಪೆಂಡರ' ಹಾಗು 'ಆಡೆನ್' ಎಂಬ ಕವಿಗಳಿಗೆ ಕಮ್ಯುನಿಸ್ಟ ಪಂಥವು; (ಈಗ ಅವರು ಸ್ಪೇನಕ್ಕೆ ಅಲ್ಲಿಯ ಸರಕಾರದ ಪಕ್ಷವನ್ನು ಹಿಡಿದು ಸಹಾಯಮಾಡಲು ಹೋಗಿದ್ದಾರೆ!) ಸಾಯಿಕ್ಸ ಡೇವ್ಹೀಜ್ ಹಾಗು ಉಳಿದ Surrealist 'ಸರರಿಯಾಲಿಸ್ಟ' ಕವಿಗಳಿಗೆ 'ಫ್ರಾಯಿಡ್' ಎಂಬ ಶಾಸ್ತ್ರಜ್ಞನ Psycho-analysis 'ಸಾಯುಕೊ-ಎನೆಲಿಸಿಸ್'ದ ವಿಚಾರ ಹಾಗು ಸಿದ್ಧಾಂತಗಳು;- ಈ ರೀತಿಯಾಗಿದೆ ಕಾವ್ಯದಲ್ಲಿ. ವಿಮರ್ಶೆಯಲ್ಲಿ ಈ ಶಾಖೆಗಳಲ್ಲದೆ ಒಂದು ಹೆಚ್ಚಾಗಿದೆ: ರಿಚರ್ಡ್ಸ್ ಹಾಗು ಅವನ ಸಂಗಡಿಗರು ವಿಮರ್ಶೆಗೆ ಮಾನಸಶಾಸ್ತ್ರವನ್ನು ತಳಕು ಹಾಕುತ್ತಿದ್ದಾರೆ.

'ಸಾಯಿಕ್ಸ ಡೇವ್ಹೀಜ' ಹೇಳಿದ ಮಾತುಗಳಲ್ಲಿ ಇವು ಕೆಲವು: "**Technique** is the main thing in poetry......If Freuds' theories are disproved, surrealism is without its foundation; but Freud qualifies his statement in so many ways that he cannot be disproved......Poetry, like madness, is a disease; but with a difference. I have put some of the most

pathological stuff in my book; and yet I am not shut up in an asylum; I am, on the other hand, rewarded with social recognition. Poetry differs from madness in the use of **Technique**.........for us, (surrealists), poetry is of interest only as an activity of the human mind. There are certain fundamental human impulses. They manifest themselves through art, religion, etc. There is no such thing as a special aesthetic emotion or a religious emotion. The unconscious contains much of our suppressed life. It comes to the surface almost by the way when we concentrate our minds on a certain object. We are interested in all states of mind which reveal the unconscious: dream, vision, religious experience etc. As for the forms of expression, automatic writing and painting are some of these. I believe, however,–and I do not know whether all the members of our group will subscribe to this opinion–that it is while concentrating on traditional diction that the unconscious expresses itself most effectively without our knowledge. It thus gives the necessary self-release for the poet. By using it, the poet ceases to be anti-social, unlike the madman, and creates material which has also the same kathartic effect on readers. And that is how he wins social reward." (ಕಾವ್ಯದಲ್ಲಿ ರೀತಿಯು ಮುಖ್ಯವಾದ ಮಾತು....ಫ್ರಾಯ್ಡರ ಸಿದ್ಧಾಂತ ಸುಳ್ಳಾದರೆ, ಸರರಿಯಾಲಿಸ್ಟ ಪಂಥದ ತಳಹದಿಯೇ ಇಲ್ಲದಾಗುತ್ತದೆ; ಆದರೆ ಫ್ರಾಯ್ಡರು ತಮ್ಮ ವಿಧಾನವನ್ನು ಅನೇಕತರದಿಂದ ಭದ್ರಪಡಿಸಿ ಹೇಳುವದನ್ನು ನೋಡಿದರೆ ಅವರ ಶೋಧವೆಂದೂ ಸುಳ್ಳಾಗಲಾರದು..ಕಾವ್ಯವು, ಉನ್ಮಾದದಂತೆ, ಒಂದು ರೋಗ; ಆದರೆ ಎರಡಕ್ಕೂ ಒಂದು ಭೇದವಿದೆ. ನಾನು ನನ್ನ ಪುಸ್ತಕದಲ್ಲಿ ಎಷ್ಟೋ ರೋಗಿಷ್ಠ ವಿಷಯವನ್ನು ಸೇರಿಸಿರುವೆನಾದರೂ ನನ್ನನ್ನು ಯಾರೂ ಹುಚ್ಚರ ಆಸ್ಪತ್ರೆಯಲ್ಲಿ ಹಾಕಿಲ್ಲ. ಅದರ ಬದಲು ನನಗೆ ಸಮಾಜದಲ್ಲಿ

ಮನ್ನಣೆಯಿದೆ. ರೀತಿಯನ್ನು ಬಳಸುವದರಲ್ಲಿ ಕಾವ್ಯವು ಉನ್ಮಾದಕ್ಕಿಂತ ಬೇರೆಯಾಗಿದೆ.....ನಮಗೆ (ಅಂದರೆ ಸರರಿಯಾಲಿಸ್ಟ ಕವಿಗಳಿಗೆ) ಮನುಷ್ಯನ ಚಿತ್ತದ ಚಟವಟಿಕೆಗೆಂದೇ ಕಾವ್ಯದಲ್ಲಿ ಆಸಕ್ತಿಯಿದೆ. ಕೆಲವು ಮೂಲಭೂತವಾದ ಮಾನವಪ್ರೇರಣೆಗಳಿವೆ. ಅವು ಕಲೆ, ಧರ್ಮ ಇತ್ಯಾದಿಗಳಲ್ಲಿ ವ್ಯಕ್ತವಾಗುತ್ತವೆ. ವಿಶಿಷ್ಟವಾದ ಸೌಂದರ್ಯಭಾವನೆ ಇಲ್ಲವೆ ಧಾರ್ಮಿಕಭಾವನೆ ಎಂಬವುಗಳಿಲ್ಲ. ನಮ್ಮ ಅಜ್ಞಾತಜೀವನದಲ್ಲಿ ಎಷ್ಟೋ ನಮ್ಮ ಹುದುಗಿದ ಬಾಳುವೆಯಿದೆ. ನಾವು ಒಂದು ವಸ್ತುವಿನ ಕುರಿತು ಧೇನಿಸುವಾಗ ಅದು ತಳದಿಂದ ಮೇಲಕ್ಕೇಳುತ್ತದೆ. ಅಜ್ಞಾತವನ್ನು ಹೊರಗೆಡಹುವ ಎಲ್ಲ ಮನಸ್ಥಿತಿಗಳಲ್ಲಿ ನಾವು ಮನಸ್ಸುಳ್ಳವರು. ಉದಾ: ಕನಸು, ದರ್ಶನ, ಧಾರ್ಮಿಕ ಅನುಭವ ಇತ್ಯಾದಿ. ಅಭಿವ್ಯಕ್ತಿಯ ಪ್ರಕಾರಗಳ ವಿಷಯದಲ್ಲಿ, ತಂತಾನೆ ಬರೆವುದು ಹಾಗೂ ಚಿತ್ರಿಸುವುದು ಇವು ಕೆಲವು. ನಮ್ಮ ಪಂಥದ ಎಲ್ಲರೂ ಒಪ್ಪುವರೋ ಇಲ್ಲವೋ ಗೊತ್ತಿಲ್ಲ, ಆದರೆ ನನ್ನ ಪ್ರಕಾರ ಸಾಂಪ್ರದಾಯಿಕ ಶೈಲಿಯ ಬಗ್ಗೆ ಧ್ಯಾನಿಸುವಾಗ ಅಜ್ಞಾತವು ನಮಗೆ ತಿಳಿಯದೆ ಅತಿಪರಿಣಾಮಕಾರಕವಾಗಿ ಹೊರಪಡುತ್ತದೆ. ಹೀಗೆ ಅದು ಕವಿಗೆ ಅವಶ್ಯವಾದ ಆತ್ಮವಿಮೋಚನೆಯನ್ನು ಕೊಡುತ್ತದೆ. ಅದರಿಂದ ಹುಚ್ಚನಂತೆ ಕವಿಯು ಅಸಾಮಾಜಿಕನಾಗುವದನ್ನು ಬಿಟ್ಟು ವಾಚಕರ ಮೇಲೆ ಅದೇ ವಿಮೋಚನೆಯ ಪರಿಣಾಮವಾಗುವಂಥ ಸಾಮಗ್ರಿಯನ್ನು ಹುಟ್ಟಿಸುವನು. ಈ ರೀತಿಯಲ್ಲಿ ಅವನಿಗೆ ಸಮಾಜದಲ್ಲಿ ಪ್ರತಿಫಲ ದೊರೆಯುತ್ತದೆ.)

———

೧೮-೨-೩೭

ಮಹಾತ್ಮಾಜಿಯವರ ಸ್ನೇಹಿತರ ಮಗನೊಬ್ಬನು ಸದ್ಯಕ್ಕೆ ಇಲ್ಲಿ ಬಂದಿದ್ದಾನೆ. ಒಳ್ಳೆಯ ಹುಡುಗ. ಶ್ರೀಮಂತರ ಮಗ. ಆದರೂ ಕೆಲವು ಕಾಲವನ್ನು ಸೆರೆಮನೆಯಲ್ಲಿ ಕಳೆದ. ಇಲ್ಲಿ ತನ್ನ ವೇಳೆಯನ್ನು ಚೆನ್ನಾಗಿ ಉಪಯೋಗಿಸುತ್ತಿದ್ದಾನೆ. ಬರುವಾಗ ತನಗೆ ಗೊತ್ತಾದ ವಧುವನ್ನು ಡಿಸೆಂಬರ್ ೧೯೩೮ರಲ್ಲಿ ಬಂದು, ನಿಶ್ಚಯವಾಗಿ ಮದುವೆಯಾಗುವೆನೆಂದು ಮಹಾತ್ಮಾಜಿಯವರಿಗೆ ವಚನಕೊಟ್ಟಿದ್ದಾನೆ!

* * * *

೧೯—೨—೩೭

ಇಲ್ಲಿಯ ಲೇಬರ್ ಪಾರ್ಟಿಯ ಮುಂದಾಳುಗಳಲ್ಲಿ ಒಬ್ಬರಾದ 'ಕ್ರಿಪ್ಸ್' ಎಂಬವರು "The policy before the working class" (ಕೂಲಿಕಾರರ ಮುಂದಿರುವ ಧೋರಣೆ) ಎಂಬ ವಿಷಯದ ಮೇಲೆ ಮಾತನಾಡಿದರು. 'ಸುಶ್ರಾವ್ಯವಾದ ಭಾಷಣ'ವಾಯಿತು.

* * * *

೨೧—೨—೩೭

ವಿಶ್ವವಿದ್ಯಾಲಯದ ಅಮೆಚ್ಯೂರ್ ಸಂಘದವರು (O. U. D. S.) 'ಮ್ಯಾಕಬೆಥ್' ನಾಟಕವನ್ನು ಆಡಿ ತೋರಿಸಿದರು. ತಮ್ಮ ಪ್ರಯೋಗಕ್ಕೆ ಸಹಾಯಕ್ಕಾಗಿ ಒಬ್ಬ ಪ್ರಸಿದ್ಧ ನಟಿಯನ್ನು ಕರೆದಿದ್ದರು ಆಕೆಯು ನಾಯಕಿಯ ಪಾತ್ರವನ್ನು ವಹಿಸಿದ್ದಳು. ಅಲ್ಲದೆ ರಂಗಭೂಮಿಯನ್ನು ಸಜ್ಜುಪಡಿಸಲು ಒಬ್ಬ ಪ್ರಸಿದ್ಧ ಸೂತ್ರಧಾರನನ್ನು (Producer)

ಕರೆಸಿದ್ದರು. ಇಷ್ಟಾಗಿಯೂ ಪ್ರಯೋಗವು ಯಶಸ್ವಿಯಾಗಲಿಲ್ಲ. ಮ್ಯಾಕ್ ಬೆಥ್ ಹಾಗು ಮ್ಯಾಕ್‌ಡಫ್ ಇವರು ಯುದ್ಧ ಮಾಡುವಾಗ ಖಡ್ಗಕ್ಕಿಂತ ಮೊದಲು ಢಾಲನ್ನು ಮುಂದೆ ತಂದು ಒಡ್ಡುತ್ತಿದ್ದರು. ಆದರಿಂದ ಪ್ರೇಕ್ಷಕರು ನಗದೆ ಏನು ಮಾಡಿಯಾರು ? ಮಂತ್ರಗಾರ್ತಿಯರ ಪ್ರವೇಶ ದಲ್ಲಿ ಅವರ 'ರಸಾಯನ'ದ ಕ್ರಿಯೆಯನ್ನು ಚೆನ್ನಾಗಿ ತೋರಿಸಲಾಯಿತು.

* * * *

ನಮ್ಮ ಟ್ಯೂಟರರು ಐದು ನಿಮಿಷ ತಡವಾಗಿ ಬಂದರು. ಅಷ್ಟ ರಲ್ಲಿಯೇ ಶರ್ಮ್ಮಡ್ಡನು ಸುರುವು ಮಾಡಿದ: "England is the most unpunctual country I have ever found. The men here are unpunctual; the trains are unpunctual : and everything else!" (ನಾನು ನೋಡಿದ್ದರಲ್ಲಿ ಇಂಗ್ಲಂಡ ಬಹಳ ಅನಿಯಮಿತ ದೇಶ. ಮನು ಷ್ಯರು ಇಲ್ಲಿ ಅನಿಯಮಿತ, ಗಾಡಿ ಅನಿಯಮಿತ, ಎಲ್ಲವೂ ಹಾಗೆ.)

* * * *

"That, in the opinion of this house, there is no hope for India in the new constitution" (ಈ ಸಭೆಯ ಅಭಿಪ್ರಾಯದಲ್ಲಿ ಹೊಸ ಘಟನೆಯಿಂದ ಹಿಂದುಸ್ಥಾನಕ್ಕೆ ಆಶೆಯಿಲ್ಲ) ಎಂಬ ವಿಷಯದ ಮೇಲೆ 'ಮಜಲಿಸ್'ದಲ್ಲಿ ಚರ್ಚೆಯಾಯಿತು. ಯುನಿಯನ್ನದ ಅಧ್ಯಕ್ಷ ನಾದ May-Hew (ಮೇಹ್ಯೂ) ಎಂಬಾತನು ಕಾಂಗ್ರೆಸ್ ಪಕ್ಷದ ಮತವನ್ನು ಸಮರ್ಥಿಸಿದನು.

* * * *

೨೨—೨—೩೭

ಇಂದು Walter de la mare (ವಾಲ್ಟರ ಡಿ ಲಾ ಮೇರ) ಎಂಬ ಸುಪ್ರಸಿದ್ಧ ಕವಿಯ ಭಾಷಣವನ್ನು ಕೇಳಿದೆ: "Meaning in poetry" ಕಾವ್ಯದಲ್ಲಿಯ ಅರ್ಥಗೌರವವೆಂಬ ವಿಷಯದ ಮೇಲೆ. ಬರೆದು ತಂದ ಒಂದು ನಿಬಂಧವನ್ನು ಧ್ವನಿಯನ್ನು ಎತ್ತದೆ, ಇಳಿಸದೆ, ನನಾದಿ ಹಿಡಿದಂತೆ ಓ (ಊ ?) ದಿದ್ದರಿಂದ, ಆ ಭವ್ಯವಾದ ಸಭಾಮಂದಿರದಲ್ಲಿ

ನನಗೆ ನಿದ್ದೆ ಬಂದಿತು. ನಡುನಡುವೆ ಎಚ್ಚರಿಕೆಯಾದಾಗ ಕೆಲವು ಮಾತುಗಳು ಕಿವಿಯ ಮೇಲೆ ಬಿದ್ದವು. "The sound of words is part of the meaning in poetry...incantation......'The beautiful house' is quite a different thing from 'The house beautiful.' I opened webster's dictionary and looked at four words beginning with 'M,' ascertained my feelings towards them before I knew their meaning and was amused to find that they had romantic, exotic or even quixotic implications emanating from the sound alone." (ಶಬ್ದಗಳ ನಾದವು ಕಾವ್ಯದ ಅರ್ಥದ ಒಂದು ಭಾಗವಾಗಿದೆ....ಮಂತ್ರೋಚ್ಚಾರಣೆ...'ಸುಂದರ ಮನೆ'ಗಿಂತ 'ಮನೆ ಸುಂದರ' ಎಂಬುದು ತೀರ ಬೇರೆ ಮಾತು. ನಾನು ವೆಬ್‌ಸ್ಟರಕೋಶವನ್ನು ತೆರೆದು ನೋಡಲಾಗಿ 'ಎಮ್'ದಿಂದ ಆರಂಭವಾದ ನಾಲ್ಕು ಶಬ್ದಗಳನ್ನು ನೋಡಿದೆ. ಅವುಗಳ ಅರ್ಥ ತಿಳಿದುಕೊಳ್ಳುವ ಮೊದಲು ಅವುಗಳ ಬಗ್ಗೆ ನನ್ನ ಭಾವನೆಗಳನ್ನು ಅರಿತುಕೊಂಡೆ. ಆಗ ಬರೀ ನಾದದಿಂದ ಅವಕ್ಕೆ ಶೃಂಗಾರಿಕ, ಬಾಹ್ಯಪ್ರಾಪ್ತ, ವಿಕ್ಷಿಪ್ತ ಅರ್ಥ ಹೊರಡುವದನ್ನು ಕಂಡು ಚಕಿತನಾದೆನು.)

## ೪೯

೨೩-೨-೩೭

ಇಂದು ಸ್ಕ್ಯಾಂಕಿ-ಸೊಸಾಯಟಿಯ ಸಭೆಗೆ ಹೋಗಿದ್ದೆ. "That this house prefers its shirt to its tie" (ಈ ಸಭೆಯು ಟಾಯಕ್ಕೆ ಬದಲು ಶರ್ಟ ಮೆಚ್ಚುತ್ತದೆ) ಎಂಬ ವಿಷಯದ ಚರ್ಚೆಯಾಯಿತು. ಶರ್ಟಿನ ಮಹತ್ವವನ್ನು ಪ್ರತಿಪಾದಿಸಿದವರು ಹೀಗೆ ಹೇಳಿದರು: (೧) ಅದು ಹೆಚ್ಚು ಉಪಯುಕ್ತವಾಗಿದೆ. ಕೊರಳರಿವೆಗಿಂತ ಹೆಚ್ಚು ಸುಖವನ್ನು

ಕೊಡುತ್ತದೆ, ಶರೀರವನ್ನು ಬೆಚ್ಚಗಾಗಿ ಇರಿಸುತ್ತದೆ. ಸರಕಾರವು ಈಗ ಯುದ್ಧಸಾಮಗ್ರಿಗಾಗಿ ಹೆಚ್ಚು ಕರವನ್ನು ಕೂಡಿಸುತ್ತಿರುವಾಗ ನಾವು ದಿವಾಳಿಖೋರರಾದೆವೆಂದು ತಿಳಿಯುವಾ. ಎಲ್ಲ ಅರಿವೆ–ಅಂಚಡಿಗಳನ್ನು ಒತ್ತೆಯಿಟ್ಟರೂ ಶರ್ಟೊಂದಿದ್ದರೆ ಸಾಕು: "I can, then, be comfortable with my shirt, but the opposer can only hang himself with his tie!" (ನನ್ನ ಶರ್ಟಿದ್ದರೆ ನಾನು ಸುಖಿಯಾಗಬಲ್ಲೆ. ಆದೇ ವಿರೋಧಕನು ಟಾಯ್‌ದಿಂದ ಉರುಲು ಮಾತ್ರ ಹಾಕಿಕೊಳ್ಳಬಲ್ಲನು) (೨) ಶರ್ಟು ಒಂದು ಪ್ರತೀಕ. ಇಂದಿಗೆ ಪ್ರಪಂಚದಲ್ಲಿ ಮುಂದುವರಿಯುತ್ತಿರುವ ಸಮಾತಾವಾದ ಮೊದಲಾದ ಚಳವಳಿಗಳ ಪ್ರತೀಕವದು. ಪ್ರಗತಿಯನ್ನು ಸೂಚಿಸುತ್ತದೆ. ಕಾರಣ ಪರಂಪರೆಗಿಂತ ಪ್ರಗತಿಯು ಲೇಸು. ಈ ಮಾತನ್ನು ನನ್ನ ಭಾಷಣದಲ್ಲಿ ನಾನು ಮುಂದುವರಿಸಿದೆ. ಇನ್ನೊಬ್ಬ ಸದಸ್ಯನು ನನ್ನಿಂದ ಇದನ್ನು ಎತ್ತಿಕೊಂಡಿರುವೆನೆಂದು ಹೇಳಿ ಅದನ್ನು ತಾನೂ ಪ್ರತಿಪಾದಿಸಿದನು.

ಕೊರಳುಪಟ್ಟಿಯ ವಿಷಯವು ಹೀಗೆ: (೧) ವೇಷಕ್ಕೆ ಅದು ಭೂಷಣವಾಗಿದೆ. ಒಂದು ಚಂದವನ್ನು ಕೊಡುತ್ತದೆ. "your dress is not complete until you wear the tie." (ಟಾಯ ಧರಿಸದೆ ನಿಮ್ಮ ವೇಷವು ಪೂರ್ಣವಲ್ಲ) ಉಪಯೋಗಕ್ಕಿಂತ ಸೌಂದರ್ಯಕ್ಕೆ ಹೆಚ್ಚು ಬೆಲೆಯಿದೆ. (೨) The public school tie: (ಪಬ್ಲಿಕ್ ಸ್ಕೂಲ ಟಾಯ) ಇಂದಿನ ರಾಜಕಾರಣದಲ್ಲಿ ನೀತಿಯಿಲ್ಲ. ಕಾರಣ ಪರಂಪರೆಯಲ್ಲಿದ್ದ ನೀತಿಯನ್ನೇ ನಾವು ಅನುಸರಿಸಬೇಕು.

ನನ್ನ ಮಾತಿನಲ್ಲಿ ನಾನು ಹೇಳಿದೆ: "It was some years back that I was introduced to the tie. Whenever I wore it, I was afraid that some one might take hold of me by the tie and show me about. And I still have that uncanny feeling whenever I wear a tie. I am looking forward to a time when I will go back to my own country and move about in the 'great white material' which the proposer so charmingly mentioned in the

course of his speech as the ' Dhoti ' and in a long and flowing shirt."( ನಾನು ಕೆಲವು ವರುಷಗಳ ಹಿಂದೆ ಟಾಯ್‌ಕ್ಕೆ ಪರಿಚಿತನಾದೆನು. ಅದನ್ನು ಧರಿಸಿದಾಗ ಯಾರಾದರೂ ನನ್ನ ಟಾಯ್ ಹಿಡಿದು ಎಳೆಯುತ್ತ ಊರೆಲ್ಲ ಮೆರಸಬಹುದೆಂದು ಭಯವೆನಿಸಿತು. ಟಾಯ್ ಇದ್ದಾಗ ಇನ್ನೂ ಆ ವಿಚಿತ್ರ ಭಾವನೆ ನನಗೆ ಬರುತ್ತದೆ. ನಾನು ತಿರುಗಿ ನನ್ನ ದೇಶಕ್ಕೆ ಹೋಗಿ ಧೋತರವನ್ನೂ – 'ದೊಡ್ಡ ಬಿಳಿವಸ್ತ್ರ' ಎಂದು ಪ್ರತಿಪಾದಕನು ಯಾವದನ್ನು ಮೋಹಕವಾಗಿ ಬಣ್ಣಿಸಿದನೋ–ಅದನ್ನೂ ಉದ್ದಾದ ಶರ್ಟನ್ನೂ ಧರಿಸಿ ತಿರುಗಾಡುವ ದಿನವನ್ನು ಇದಿರು ನೋಡುತ್ತಿರುವೆನು ) ಆ ಮೇಲೆ 'ಪ್ರಗತಿ'ಯ ವಿಷಯವನ್ನು ಹೇಳಿದೆ. ಪ್ರತಿಪಾದಕನು ತನ್ನ ವಿಷಯವನ್ನು ಪುನಃ ಮಂಡಿಸುವಾಗ 'ಗೋಕ್ಯಾಕ್' ಇವರು "Has contributed more than any one else to tonight's debate" (ಗೋಕಾಕರು ಉಳಿದವರಿಗಿಂತ ಹೆಚ್ಚು ಇಂದಿನ ಚರ್ಚೆಗೆ ಉಪಕೃತಿ ಮಾಡಿದ್ದಾರೆ) ಎಂದು ಹೇಳಿದನು !

* * * *

೨೪—೨—೩೭

"That this house would welcome the return of a Labour Government" (ಈ ಸಭೆಯು ಲೇಬರ ಸರಕಾರದ ಪುನರಾಗಮನವನ್ನು ಸ್ವಾಗತಿಸುತ್ತದೆ) ಎಂಬ ವಿಷಯದ ಮೇಲೆ ಯೂನಿಯನ್ನದಲ್ಲಿ ಚರ್ಚೆಯಾಯಿತು.

* * * *

೨೮—೨—೩೭

"That Indians should not accept office under the crown" (ಭಾರತೀಯರು ಆಂಗ್ಲ ಪ್ರಭುತ್ವದ ಕೆಳಗೆ ಅಧಿಕಾರ ಸ್ವೀಕರಿಸಬಾರದು) ಎಂಬ ವಿಷಯದ ಮೇಲೆ 'ಕೇಂಬ್ರಿಜ್ ಮಜಲಿಸ್'ದ ಸಂಗಡ ನಮ್ಮ 'ಮಜಲಿಸ್'ದಲ್ಲಿ ಚರ್ಚೆಯಾಯಿತು. ನಾನೇ ಚರ್ಚೆಯನ್ನು

ಪ್ರಾರಂಭಿಸಿದೆ. ಇಂದು ಮಾತ್ರ ನನ್ನ ಮಾತುಗಾರಿಕೆಯ ಬರವು ಹಿಂಗಿತು ! ಬಾಯಿ ತುಂಬ ಮಾತಾಡಿದೆ.

* * * *

೨–೩–೨೭

ಲೇಬರ್ ಕ್ಲಬ್ಬಿನ ಪರವಾಗಿ ಇಲ್ಲಿಯ ಒಬ್ಬ ರಾಜಕಾರಣ ಧುರೀಣರು ಮಾತನಾಡಿದರು. ಹಿಂದುಸ್ಥಾನದಲ್ಲಿ ಆಂಗ್ಲರಿಂದ ಜರುಗಿದ ಅನ್ಯಾಯಗಳನ್ನು ವರ್ಣಿಸಿ: "Some day, we will have to pay the price for all this" (ಒಂದು ದಿನ ಇದೆಲ್ಲಕ್ಕೆ ನಾವು ದಂಡ ತೆತ್ತಬೇಕಾದೀತು) ಎಂದು ಎಚ್ಚರಿಕೆ ಕೊಟ್ಟರು.

---

# ೫೦

ಆಕ್ಸ್‌ಫರ್ಡ್
೩–೩–೨೭

ಈ ವಾರ ಇಲ್ಲಿಯ 'ಮಜಲಿಸ್'ದ (ಭಾರತೀಯ ವಿದ್ಯಾರ್ಥಿಗಳ ಸಂಘ) ವಾರ್ಷಿಕ ಸಮಾರಂಭವು ಬಹಳ ವಿಜೃಂಭಣೆಯಿಂದ ಜರುಗಿತು. ಸರ್ ರಾಧಾಕೃಷ್ಣನ್ನವರು ಹಾಗು ಇಂಡಿಯಾ ಆಫೀಸಿನ ಸರ್ ಅಬ್ದುಲ್ ಖಾದೀರರು ಮುಖ್ಯ ಅತಿಥಿಗಳಾಗಿದ್ದರು. ಇಲ್ಲಿಯ ಪ್ರಸಿದ್ಧ 'ಕ್ಲ್ಯಾರೆಂಡನ್ ಹೋಟೆಲ್ಲಿ'ನಲ್ಲಿ ಊಟದ ವ್ಯವಸ್ಥೆಯಾಗಿತ್ತು. ಅರಮನೆಯಂಥ ಉಪಹಾರಗೃಹವದು !

'Cloak-room to the right. Reception to the left' (ಬಟ್ಟೆಯ ಮನೆ ಬಲಕ್ಕೆ, ಸ್ವಾಗತದ ಮನೆ ಎಡಕ್ಕೆ) ಎಂದು ಬಾಗಿಲಲ್ಲಿಯ ಸೇವಕನು ಸಾರಿದಾಗ ಅದರಂತೆ ನಿಲುವಂಗಿಗಳನ್ನು ತೆಗೆದಿಟ್ಟು ದಿವಾಣಖಾನೆಯಲ್ಲಿ ಸೇರಿದೆವು. ಅಲ್ಲಿ ಎಲ್ಲರೂ ಒಂದೊಂದು ಗ್ಲಾಸು ದ್ರಾಕ್ಷರಸವನ್ನು ಕುಡಿಯುತ್ತ ಮಾತನಾಡುತ್ತ ನಿಂತಿದ್ದರು. ಆ ಮಂದಿರದಲ್ಲಿದ್ದದ್ದು ವಿಚಿತ್ರ ಹಿಂದುಸ್ತಾನ! ಅತಿಥಿಗಳಾಗಿ ಬಂದ—ನಗ್ನ ಸೌಂದರ್ಯವನ್ನು ತೋರಿಸಲೆಂಬಂತೆ ಮಾತ್ರ ಉಡುಪು ಧರಿಸಿದ—ಆಂಗ್ಲ ಮಹಿಳೆಯರು, ಆಂಗ್ಲ ಸ್ತ್ರೀಯಾಗಿ ಪರಿವರ್ತಿಸಿಬಿಟ್ಟಿರುವ ಬರ್ಮೀ ತರುಣಿಯೋರ್ವಳು,—"All the strange faces are turned towards me" (ಎಲ್ಲ ವಿಚಿತ್ರ ಮೋರೆಗಳು ನನ್ನ ಕಡೆ ತಿರುಗಿವೆ) ಎಂದು ತನ್ನ ತರುಣ ಸ್ನೇಹಿತರಿಗೆ ಹೇಳುತ್ತ ರಾಣಿಯಂತೆ ಒಂದು ಭಾರೀ ಪತ್ತಲವನ್ನುಟ್ಟು ಬಂದ—ಪಾರಸೀಕ ಯುವತಿಯೋರ್ವಳು, 'lounge suit' (ಲಾವುಂಜ್ ಸೂಟ್) ನಲ್ಲಿ ಬಂದ ಭಾರತೀಯ ವಿದ್ಯಾರ್ಥಿಗಳು ಹಾಗು ಅವರ ಆಂಗ್ಲ ಸ್ನೇಹಿತರು, ಹೀಗೆ ದೃಶ್ಯವು ಅನೇಕ ವಿಧವಾಗಿದ್ದಿತು. ಅಲ್ಲಲ್ಲಿ ಕೆಲವು 'ಪೇಠಾ'ಗಳೂ ಕಾಣುತ್ತಿದ್ದವು.

'Dinner is ready' (ಊಟವು ಸಿದ್ಧವಾಗಿದೆ) ಎಂದು ಸೇವಕನು ವಂದಿ—ಮಾಗಧರಂತೆ ಬಂದು ಹೇಳಿದಾಗ, ಎಲ್ಲರೂ ತಮ್ಮ ತಮ್ಮ ಜಾಗದಲ್ಲಿ ಕುಳಿತುಕೊಂಡರು. ಯೂನಿಯನ್ನದ ಅಧ್ಯಕ್ಷ ಹಾಗು ಕಾರ್ಯದರ್ಶಿ ಮೊದಲಾದ ಆಂಗ್ಲ ತರುಣರಿಗೂ ಆಮಂತ್ರಣವಿತ್ತು. ಸಮಾರಂಭಕ್ಕಾಗಿ ಸದಸ್ಯನೊಬ್ಬನಿಗೆ ೫ ರೂಪಾಯಿಯಷ್ಟು ಚಂದಾ ಹಣವನ್ನು ವಸೂಲು ಮಾಡಿದ್ದ ಮೇಲೆ ಕೇಳುವದೇನು? ಊಟದ ಆಡಂಬರವೂ ಸಹ ಅವರ್ಣನೀಯವಾಗಿತ್ತು.

ಊಟವು ಮುಗಿದಾಗ 'Toast' (ಟೋಸ್ಟ) ದ ಕಾರ್ಯಕ್ರಮವು ನಡೆಯಿತು: 'ಹಿಂದುಸ್ತಾನಕ್ಕೆ ಜಯವಾಗಲಿ' ಎ

ಒಬ್ಬರು ಭಾಷಣ ಮಾಡುವದು; ಮಾಡಿ, – Ladies and gentlemen! Hindustan' (ಸಭ್ಯಗೃಹಸ್ಥರೇ ಮಹಿಳೇಯರೇ, ಹಿಂದುಸ್ಥಾನ) ಎಂದು ಎಲ್ಲರೂ ಎದ್ದು ನಿಂತು ಒಂದು ಗ್ಲಾಸು 'ಪೋರ್ಟ್' ಕುಡಿಯಬೇಕು! ಕುಡುಕರಲ್ಲದ ನಾವು ಆದರ ಬದಲು ಒಂದು ಲೋಟ ನೀರು ಕುಡಿದೆವು! ಎರಡನೆಯ 'ಟೋಸ್ಟು' ಕಾಂಗ್ರೆಸ್ಸಿನ ಹೆಸರಿನಲ್ಲಾಯಿತು. 'ಪೋರ್ಟ್' ಕುಡಿಯಲು ಇನ್ನೂ ಮೂರು ನಾಲ್ಕು ಸಂಧಿಗಳು ದೊರೆತವು!

ಮುಂದೆ ಕೆಲವು ಭಾಷಣಗಳಾದ ಮೇಲೆ ಸಮಾರಂಭವು ಮುಗಿಯಿತು.

* * * *

ನಮ್ಮ ಕಾಲೇಜಿನಲ್ಲಿ ಒಬ್ಬ ಆಯ್. ಸಿ. ಎಸ್. ಪ್ರೊಬೇಶನರನಿದ್ದಾನೆ. ಆಯ್. ಸಿ. ಎಸ್. ಆಗಿದ್ದು ಅವನಿಗೆ ಸ್ವರ್ಗ ದೊರೆತಂತಾಗಿದೆ. ಯಾವಾಗಲೂ ಸರಕಾರದ ಬಗ್ಗೆ ತನ್ನ ಸ್ವಾಮಿಭಕ್ತಿಯನ್ನು ಪ್ರದರ್ಶಿಸುತ್ತಾನೆ. ಹಾಲಿನಲ್ಲಿ ಊಟಕ್ಕೆ ಕುಳಿತಿದ್ದೆವು. ಗ್ರೀನ್‌ವೇ ಮೊದಲಾದ ಪರಿಚಿತರು ನಮ್ಮ ಟೇಬಲ್ಲಿನ ಬದಿಗೆ ಕುಳಿತಿದ್ದರು. ಆಯ್. ಸಿ. ಎಸ್. ಮನುಷ್ಯನು ಕೂಡುವದೊಂದೇ ತಡ: 'I must go. I must dine soon, I have guests' (ನಾನು ಹೋಗಬೇಕು. ಬೇಗನೇ ಊಟ ಮಾಡಬೇಕು, ನನಗಲ್ಲಿ ಅತಿಥಿಗಳಿದ್ದಾರೆ.) ಎಂದು ಕೂಗಾಡಹತ್ತಿದನು. ನಡುವೆ ಒಮ್ಮೆಲೆ ಅವನಿಗೆ ನಿಂಬಿಹಣ್ಣು ಬೇಕಾಯಿತು. ವೇಟರನಿಗೆ ಹೇಳಲು, ಆತನು ನಿರ್ವಾಹವಿಲ್ಲದೆ ಒಂದು ದೊಡ್ಡ ಮೋಸಂಬಿಯನ್ನು ತಂದು ಹೆಚ್ಚಿಟ್ಟ. 'Oh! no! I dont want so much. Take half of it yourself' (ಛೇ, ನನಗೆ ಇಷ್ಟು ಬೇಕಾಗಿಲ್ಲ. ಅರ್ಧ ನೀನೇ ತಗೋ) ಎಂದು ಬಡಿಸುವವನಿಗೆ ಕೊಡಹೋದ ನಮ್ಮ ಆಯ್. ಸಿ. ಎಸ್. ರತ್ನ! ಎಲ್ಲರೂ ಬಿದ್ದು ಬಿದ್ದು ನಕ್ಕರು.

ಅಷ್ಟರಲ್ಲಿ ವಯಸ್ಸಿನಿಂದ ಹಿರಿಯನಾದ ಇನ್ನೊಬ್ಬ ವೇಟರನು ಅಲ್ಲಿಗೆ ಬಂದ. ಅವನಿಗೆ: 'What is your name?' (ನಿನ್ನ ಹೆಸರೇನು?) ಎಂದು ಪ್ರಶ್ನೆ ಬಿತ್ತು. 'Freddy' (ಫ್ರೆಡಿ) ಎಂದು ಅವನು ವಿನೋದಕ್ಕಾಗಿ ಹೇಳುವದೊಂದೇ ತಡ: 'Oh! what a grand name! What a name! That other chap is a naughty boy. You are quite useful to me. Look here, Greenway! Freddy is quite useful to me! I wish you could also write my essays for me. (ಓ! ಎಂಥ ದಿವ್ಯ ಹೆಸರು! ಎಂಥಾ ಹೆಸರು! ಆ ಬೇರೆ ಹುಡುಗ ಉಲಿಕೋಚಿ ಇದ್ದಾನೆ. ನೀನು ನನಗೆ ಬಹಳ ಉಪಯುಕ್ತ ಇರುವಿ. ಇಲ್ಲಿ ನೋಡು, ಗ್ರೀನವೇ, ನನಗೆ ಬಹಳ ಬೇಕಾದವ. ನನ್ನ ಸಲುವಾಗಿ ನೀನು ನಿಬಂಧಗಳನ್ನೂ ಬರೆಯುವಿಯೆಂದು ನನ್ನಿಚ್ಛೆಯಿದೆ) ಎಂದು ಮಾತಿನ ಮಳೆ ಸುರಿಯಿತು.

ವೇಟರನಿಗೂ ಚೇಷ್ಟೆ ಮಾಡಲು ಒಂದು ಸುಸಂಧಿಯು ದೊರೆಯಿತು. "Do you know what Aristotle says, sir?" (ಎರಿಸ್ಟಾಟಲ್ ಏನೆನ್ನುವನು ನಿಮಗೆ ಗೊತ್ತಿದೆಯೆ, ರಾಯರೇ?) ಎಂದು ಅಣಕದ ದನಿಯಲ್ಲಿ ಅವನು ಮೂದಲಿಸಿದನು. ಕಥೆಯು ಇಷ್ಟಕ್ಕೇ ಮುಗಿಯಲಿಲ್ಲ. ಇನ್ನೊಬ್ಬ ಹುಡುಗನು ಬಂದು "Do you like wine, sir?" (ನಿಮಗೆ ಸೆರೆ ಸೇರುತ್ತದೋ?) ಎಂದು ಕೇಳಿದ. ಇಲ್ಲವೆಂದರೆ 'ಆಯ್. ಸಿ. ಎಸ್.'ದ ಮರ್ಯಾದೆ ಹೋಗುವದಲ್ಲ! "Oh! yes. Now, Greenway! now, Martindale! make your own choice. Otherwise, I will have to force my own choice on you." (ಓಹೋ! ಒಳ್ಳೇದು ಗ್ರೀನವೇ, ಮಾರ್ಟಿಂಡೇಲ, ನಿಮಗೆ ಯಾವದು ಬೇಕು ಆರಿಸಿರಿ. ಇಲ್ಲದಿದ್ದರೆ ನನ್ನ ಆಯ್ಕೆಯನ್ನು ನಿಮ್ಮ ಮೇಲೆ ಹೇರಿಸೇನು.) ಎಂದ! ಅವರು ಬೇಡವೆಂದರೂ ಕೇಳಲಿಲ್ಲ. ಅವರಿಗಾಗಿ ತಾನೇ ಎರಡು 'ಸಾಯಡರ್' (Cider) ಗ್ಲಾಸುಗಳನ್ನು ತರಿಸಿಕೊಟ್ಟ. ಎಲ್ಲರೂ,

ಮುಗಿಸಿ ಎದ್ದಾಗ ನಾನು ನೋಡಿದೆ, ಅವರು ಆ ಗ್ಲಾಸಿನಲ್ಲಿಯ ಒಂದು ಹನಿಯನ್ನು ಸಹ ಮುಟ್ಟಿರಲಿಲ್ಲ!

ಇದೆಲ್ಲ ಸಾಗುವಷ್ಟರಲ್ಲಿ ಮಿತಿಮೀರಿ ಹೊತ್ತಾಗಿತ್ತು. ಉಳಿದ ಟೇಬಲ್ಲುಗಳೆಲ್ಲ ತೆರವಾಗಿ ವಿದ್ಯಾರ್ಥಿಗಳು ಎದ್ದು ಹೋಗಿದ್ದರು. ಕಡೆಗೆ ಭೇಸತ್ತು ನಮ್ಮ ಟೇಬಲ್ಲಿನ ಮುಖ್ಯಸ್ಥನು ಎರಡು 'Bread roll' (ಬ್ರೆಡ್ ರೋಲ)ಗಳನ್ನು ಕಳಿಸಿದ ಇನಾಮಾಗಿ,–ಇನ್ನೊಮ್ಮೆ ಊಟ ಸುರುವು ಮಾಡಬಹುದೆಂದು ಸೂಚಿಸಲು! ಆಗ ನಿರ್ವಾಹವಿಲ್ಲದೆ 'ಆಯ್. ಸಿ. ಎಸ್.'ದ ಅಮಲು ಮುಗಿಯಬೇಕಾಯಿತು.

*        *        *        *

ಆಸ್ಕರ್ ವಾಯಿಲ್ಡನ "Lady Windermere's Fan" (ಲೇಡಿ ವಿಂಡರಮಿಯರ್ಸ ಫ್ಯಾನ) ಎಂಬ ನಾಟಕವನ್ನು ನೋಡಿದೆ. ಅದ್ಭುತ ವಾಗಿದೆ. ಸಾಮಾಜಿಕ ದೃಶ್ಯಗಳಲ್ಲಿಯ ಸರ್ವಸಾಧಾರಣ ಜೀವನದಲ್ಲಿ ಸಹ ಎಷ್ಟೊಂದು ಆಕರ್ಷಣಶಕ್ತಿಯಿರಬಲ್ಲದೆಂಬುದನ್ನು ಇದರಿಂದ ತಿಳಿಯಬಹುದು. ಡ್ರಾಯಿಂಗ್ ರೂಮಿನಲ್ಲಿಯ ನೃತ್ಯವಾಗಿ ಪತಿ–ಪತ್ನಿ ಯರ ಮನಸ್ಸು ಕಲುಷಿತವಾದಾಗ, ಸೇವಕನು ಬಂದು ಉರಿಯುತ್ತಿ ರುವ ಮೇಣಬತ್ತಿಗಳನ್ನು ನಂದಿಸುತ್ತಾನೆ! ಓದುವಾಗ ಇದರ ಮಹ ತ್ವವು ತಿಳಿಯಲಾರದು; ಆದರೆ ರಂಗಭೂಮಿಯ ಮೇಲೆ ಎಷ್ಟು ತುಂಬಿ ಬರುತ್ತದೆ! ಲೇಡಿ ವಿಂಡರ್‌ಮಿಯರಳು ಕೆಳಗೊಗೆದ ಬ್ಯಾಂಕು ಬುಕ್ಕು, ಮಿಸೆಸ್ ಆರ್ಲಿನ್ನಳ ಕೈಯ್ಯಲ್ಲಿ ಸಿಕ್ಕ ಪತ್ರ, ವಿಂಡರಮಿಯರನು ಅದನ್ನು ಗುರುತಿಸಿ ಮತ್ತೆ ದುರ್ಲಕ್ಷಿಸಿದ ಬಗೆ, ಮುಖ್ಯತಃ ಆ ಬೀಸಣಿಕೆಯ ದೈವ,–ಡಾರ್ಲಿಂಗ್ಟನ್ನನ ಮನೆಯಲ್ಲಿ ವಿಂಡರ್‌ಮಿಯರನು ಅದರ ಹತ್ತಿ ರವೇ ಸುಳಿಯುತ್ತಿರುವದು–ನಾಟಕದ ತುಂಬೆಲ್ಲ ಒಡನುಡಿಯುತ್ತಿರುವ ನಾಟ್ಯ ವಿಡಂಬನ– 'Dramatic irony' ಇವೆಲ್ಲ, ಪ್ರಯೋಗವನ್ನು ಅದ್ಭುತತರಮ್ಯವಾಗಿ ಮಾಡುತ್ತವೆ! ಇದಕ್ಕಿಂತ ಹೆಚ್ಚು ಪರಿಪೂರ್ಣವಾದ ಕಲೆಯೇ ಇಲ್ಲವೆಂದು ಎನಿಸುತ್ತದೆ. ಪಾಪದ ಪುಣ್ಯವನ್ನು ಬಲ್ಲ

ಪುಣ್ಯಾತ್ಮ – ಪಾಪಜೀವಿಯುವನು – ಆಸ್ಕರ್‌ವಾಯಿಲ್ಡ್! ಆಕ್ಸಫರ್ಡಿನ ಮ್ಯಾಗ್ಡಾಲಿನ್.ಕಾಲೇಜಿನಲ್ಲಿ ಅಭ್ಯಾಸ ಮಾಡಿದವನು!

ನನ್ನ ಹತ್ತಿರವೇ ಒಬ್ಬ ಮುದುಕನು ಕುಳಿತಿದ್ದನು. ಆತನು ಆಸ್ಕರ್ ವಾಯಿಲ್ಡ್‌ನ ಸಮಕಾಲೀನನು. ಈ ನಾಟಕದ ಮೊದಲನೆಯ ಪ್ರಯೋಗವನ್ನು ನೋಡಿದ್ದನು. "It all comes back to me. It was in the nineties" (ಅದೆಲ್ಲಾ ನನ್ನ ಕಣ್ಣೆದಿರು ಬರುತ್ತದೆ. ಅದು ೯೯ನೆಯ ಶತಮಾನದ ಮಾತು) ಎಂದು ತನ್ನ ಅನುಭವವನ್ನು ಹೇಳುತ್ತಿದ್ದನು. ಇನ್ನೊಬ್ಬನು "Yes. It is quite different from a modern play,–full of monologues and so on" (ಹೌದು. ಆಧುನಿಕ ನಾಟಕಕ್ಕಿಂತ ಅದು ತೀರ ಬೇರೆಯಾಗಿದೆ–'ಸ್ವಗತ' ಮುಂತಾದ್ದರಿಂದ ತುಂಬಿದ್ದರಿಂದ) ಎಂದು ಉತ್ತರವಿತ್ತನು. ಆದರೆ ಈ ನಾಟಕದ ಜೀವಾಳವು ಚಿರನವೀನವಾದುದು.



## ೫೧

೪–೩–೩೭

ಪ್ರೊ. ರೆನ್ನರ ಕಡೆಗೆ ನಾನು 'ಎಂಗ್ಲೋ ಸ್ಯಾಕ್ಸನ್' ಭಾಷೆಯ ಅಭ್ಯಾಸಕ್ಕಾಗಿ ಹೋಗುತ್ತಿರುವೆನಷ್ಟೆ. ಇಂದು ಓದಿದ ಕೃತಿಯಲ್ಲಿ 'Gewrine' (ಗುರಾಯಿನ್) ಎಂಬ ಶಬ್ದವಿತ್ತು. ಸಂಪಾದಕನು ಅದರ ಅರ್ಥವನ್ನು ಕಂಡು ಹಿಡಿಯದೆ ಮೂಲದಲ್ಲಿ 'S' ದ ಬದಲು ತಪ್ಪಾಗಿ 'R' ಬಂದಿರಬೇಕೆಂದು ಗ್ರಹಿಸಿ 'Geswine' (ಗೆಸ್ವಾಯಿನ್)– 'ದುಡಿತ' 'ಕಷ್ಟ' ಎಂದು ತಿದ್ದಿದ್ದನು. 'ಇಂದಿನ ಪಂಡಿತರು ಮೂಲದ ಅರ್ಥವನ್ನು ಕಂಡುಹಿಡಿಯದೆ ವ್ಯರ್ಥವಾಗಿ ತಿದ್ದುತ್ತಾರೆ. ಹಳೆಯ

ಕಾಲದ ತಾಡವಾಲಿ ಪ್ರತಿಗಳನ್ನು ಪರಿಶೋಧಿಸುವಾಗ ಮೂಲವು ಯಾವಾಗಲೂ ಯೋಗ್ಯವೆಂದು ತಿಳಿದು ಹೊರಡಬೇಕು. ನಿರ್ವಾಹವಿಲ್ಲದ ಪ್ರಸಂಗ ಬಂದರೆ ತಿದ್ದಬೇಕು. ಹಿಂದುಸ್ತಾನದಲ್ಲಿ ಮಾಡಬೇಕಾದ ಕೆಲಸವು ಎಷ್ಟೋ ಇದೆ. ಆಯ್. ಸಿ. ಎಸ್.ಪ್ರೋಬೆಶನರನ್ನು ಕಳಿಸುವದರ ಬದಲು ಸರಕಾರವು ಭಾರತೀಯವಿದ್ಯಾರ್ಥಿಗಳನ್ನು ಉತ್ಪತ್ತಿ ಶಾಸ್ತ್ರದ ಅಭ್ಯಾಸಕ್ಕಾಗಿ ಇಲ್ಲಿಗೆ ಕಳಿಸಬೇಕು' ಎಂದು ಪ್ರೊ. ರೆನ್ನರು ಹೇಳುತ್ತಿದ್ದರು. ಅವರ ಮಾತಿನ ಸೂತ್ರವನ್ನು ಹಿಡಿದು 'Gewrine' (ಗುರಾಯಿನ್) ಎಂಬ ಮೂಲದ ಶಬ್ದವನ್ನು ಶಬ್ದಕೋಶದಲ್ಲಿ ಹುಡುಕಾಡಿದೆ. 'Gewrene' (ಗರೀನ)ಅಂದರೆ 'ಹಂಚಿಕೆ' 'Twist'(ಟ್ವಿಸ್ಟ)' ಎಂಬ ಶಬ್ದವು ದೊರೆಯಿತು. 'S' ಹೋಗಿ 'R' ಆಗಬಹುದಾದಂತೆ 'E' ಹೋಗಿ ಬರಹಗಾರನ ಕೈಯಲ್ಲಿ 'I' ಆಗಿರಬಹುದಲ್ಲ! ನನ್ನ ಊಹೆಯನ್ನು ಪ್ರೊ. ರೆನ್ನರಿಗೆ ಹೇಳಿದೆ. ಅವರಿಗೆ ಮಿತಿಮೀರಿ ಆನಂದವಾಯಿತು. "You are the spiritual descendent of Panini. You have got the right method of conservatism in textual criticism" (ನೀನು ಪಾಣಿನಿಯ ಆಧ್ಯಾತ್ಮಿಕ ಅನುವಂಶಿಕ. ಮೂಲದ ವಿಮರ್ಶೆಯಲ್ಲಿಯ ಪರಂಪರಾ–ಪದ್ಧತಿಯು ನಿನ್ನಲ್ಲಿ ಚೆನ್ನಾಗಿದೆ.) ಎಂದು ಹೊಗಳಿದರು. ಪಾಣಿನಿಗೂ ನನಗೂ ಹಚ್ಚಿದ ಸಂಬಂಧದ ರೀತಿಯನ್ನು ನೋಡಿ ನನಗೆ ನಗೆ ಬಂದಿತು!

* * * *

ಪಂಜಾಬದಿಂದ ಬಂದ ಒಬ್ಬ ವಿದ್ಯಾರ್ಥಿಯಿದ್ದಾನೆ. ಉರ್ದು ಭಾಷೆಯಲ್ಲಿ ಚೆನ್ನಾದ ಕವಿತೆಗಳನ್ನು ಬರೆಯಬಲ್ಲ. ಆದರೆ ಅವನಿಗೆ 'Modern fashion' (ಹೊಸ ಫ್ಯಾಸನ್)ದ ಹುಚ್ಚು ಬಹಳವಾಗಿದೆ. ಇಂಗ್ಲಿಷಿನಲ್ಲಿ ಕವಿತೆ ಬರೆದರೆ, ಸ್ವಚ್ಛಂದ ವೃತ್ತದಲ್ಲಿಯೇ ಬರೆಯುತ್ತಾನೆ. ಸಿಗರೇಟು ಸೇದಿದರೆ, ರಸಿಯನ್ ಸಿಗರೇಟುಗಳನ್ನು ಸೇದಬೇಕು!

ಇನ್ನೊಬ್ಬ ಸ್ನೇಹಿತನಿದ್ದಾನೆ. ಬಹಳ ಕೋಮಲ ಸ್ವಭಾವದವ. ಅನೇಕ ಮಹಿಳೆಯರ ಸ್ನೇಹವು ಇವನಿಗಿದೆ. ಒಬ್ಬಾಕೆ ಭಾರತೀಯಳು. ಇನ್ನೊಬ್ಬಳು ಆಂಗ್ಲ ಯುವತಿ. ಲಂಡನ್ನಿನಲ್ಲಿ ಒಂದು ಸಣ್ಣ ಕೆಲಸವನ್ನು ಹಿಡಿದುಕೊಂಡು ಇದ್ದಳು. ಮುಂದೆ ಒಬ್ಬ ಶ್ರೀಮಂತನ ಕೈಕೆಳಗೆ ಕೆಲಸ ಮಾಡುತ್ತಿದ್ದು ಅವನನ್ನೇ ಮದುವೆಯಾದಳು. ಮತ್ತೊಬ್ಬಳು ಜರ್ಮನಿಯವಳು! ಅಲ್ಲಿಯೇ 'ಟೈಪಿಸ್ಟ್'ಗಿ ಕೆಲಸ ಮಾಡುತ್ತಾಳೆ. ಈ ಜರ್ಮನ್ ಯುವತಿಯ ಮೇಲೆ ಇವನಿಗೆ ಪ್ರೀತಿ ಬಹಳ. ಎಂಟೆಂಟು ದಿನಕ್ಕೊಮ್ಮೆ ಉದ್ದುದ್ದ ಪತ್ರಗಳನ್ನು ಬರೆಯುತ್ತಾನೆ. ಆ ಮೇಲೆ ಪತ್ರದ ಹಾದಿಯನ್ನು ನೋಡುತ್ತ ಕೂಡುವದು, ಅಳುವದು, ತಲೆ ಹಿಡಿದುಕೊಂಡು ಕೋಣೆಯ ತುಂಬ ತಿರುಗಾಡುವದು!

*　　*　　*　　*

ಸೋಮರವ್ಹಿಲ್ ಕಾಲೇಜು ಇಲ್ಲಿಯ ವಿದ್ಯಾರ್ಥಿನಿಯರ ಕಾಲೇಜು. 'The ideal is preferable to the real' (ವಾಸ್ತವಕ್ಕಿಂತ ಆದರ್ಶವು ಲೇಸು.) ಎಂಬ ವಿಷಯವನ್ನು ಚರ್ಚಿಸಲು ಅಲ್ಲಿಯ ಚರ್ಚಾಸಂಘದವರು 'ಮಜಲಿಸ್'ವನ್ನು ಆಮಂತ್ರಿಸಿದ್ದರು. 'ಮಜಲಿಸ್'ದ ಕಾರ್ಯದರ್ಶಿಗಳು ಅಲ್ಲಿ ಮಾತಾಡುವ ಹೊಣೆಯನ್ನು ನನ್ನ ಮೇಲೆ ಹೊರಿಸಿದರು. ಕಾಲೇಲಕರ್ ಎಂಬ ನನ್ನ 'ಫರ್ಗ್ಯುಸನ್ನ'ದ ವಿದ್ಯಾರ್ಥಿಯೊಬ್ಬನು ಇಲ್ಲಿದ್ದಾನೆ. ಇಬ್ಬರೂ ಕೂಡಿ ಹೋದೆವು. ನಾನು ಆದರ್ಶವನ್ನು ಸಮರ್ಥಿಸಿ ಮಾತನಾಡುವವ. ಕಾಲೇಲಕರರು ವಾಸ್ತವದ ಪಕ್ಷವನ್ನು ಮಂಡಿಸಬೇಕೆಂದು ಗೊತ್ತಾಗಿತ್ತು.

ಇಬ್ಬರೂ ಗೊತ್ತಾದ ವೇಳೆಗೆ ಸೋಮರ್‌ವ್ಹಿಲ್ ಕಾಲೇಜಿಗೆ ಹೋದೆವು. ನಮ್ಮ ಕಾಲೇಜಿನಲ್ಲಿಯಂತೆ ಇಲ್ಲಿ 'ಪೋರ್ಟರ್' ಇರಲಿಲ್ಲ: 'ಪೋರ್ಟರೆಸ್' ಇದ್ದಳು. ಚರ್ಚಾಮಂದಿರಕ್ಕೆ ಆಕೆಯು ನಮ್ಮನ್ನೊಯ್ದು ನಿಲ್ಲಿಸಿದಳು. ಕಾರ್ಯದರ್ಶಿನಿಯಾದ ವಿದ್ಯಾರ್ಥಿನಿಯು ಅದೇ ಚರ್ಚಾಮಂದಿರವನ್ನು ಸಿದ್ಧಪಡಿಸುತ್ತಿದ್ದಳು. ನಾವು ಹೋಗುವಷ್ಟರಲ್ಲಿ

ಉಳಿದ ವಿದ್ಯಾರ್ಥಿನಿಯರೂ ಬಂದರು. ಒಬ್ಬಿಬ್ಬ ಭಾರತೀಯ ವಿದ್ಯಾರ್ಥಿಗಳೂ ಬಂದರು. ಮೊದಲು ಕಾಫಿ ಕುಡಿಯುವದಾಯಿತು. ಮುಂದೆ ಚರ್ಚೆ!

"Are you going to be serious or funny" (ನೀವೇನು ಗಂಭೀರವಾಗಿಯೋ ಹಾಸ್ಯವಾಗಿಯೋ ಮಾತಾಡುವದು?) ಎಂದು ಒಬ್ಬ ವಿದ್ಯಾರ್ಥಿನಿಯು ನನ್ನನ್ನು ಕೇಳಿದಳು. "Partly serious and partly funny" (ಅರ್ಧ ಗಂಭೀರ, ಅರ್ಧ ವಿನೋದ) ಎಂದು ನಾನು ಹೇಳಿದೆ. ಚರ್ಚೆಯೆಂದರೆ ವಿನೋದಮಯವಾದ ಹರಟೆಯೆಂಬ ರೂಢಿಯು ಇಲ್ಲಿ ಪ್ರಚಲಿತವಾಗಿದೆ!

ಮೊದಲು ನನ್ನ ಮಾತಾಯಿತು. ಆ ಮೇಲೆ ವಾಸ್ತವದ ಪಕ್ಷವನ್ನು ಒಬ್ಬ ವಿದ್ಯಾರ್ಥಿನಿಯು ಸಮರ್ಥಿಸಿದಳು. ನಾನು ಆದರ್ಶ ಹಾಗು ವಾಸ್ತವ ಎಂಬ ಎರಡೂ ಶಬ್ದಗಳಿಗೆ ಕೊಟ್ಟ ಅರ್ಥದಿಂದ ನನ್ನ ಪಕ್ಷವು ಬಲವಂತವಾಗಿತ್ತು! ಆಕೆಯ ಮಾತಾದ ಮೇಲೆ ನನ್ನ ಪಕ್ಷವನ್ನು ಇನ್ನೊಬ್ಬ ವಿದ್ಯಾರ್ಥಿನಿಯು ಸಮರ್ಥಿಸಿದಳು. ಆ ಮೇಲೆ ಅದಕ್ಕೆ ವಿರುದ್ಧವಾಗಿ ಕಾಲೇಲಕರರು ಮಾತನಾಡಿದರು ನಾನು ಅವರ ಶಿಕ್ಷಕನಾಗಿದ್ದುದು, ನಾನು ಕವಿಯಾಗಿದ್ದುದು, ನನ್ನ ಮರವಿನ ಸ್ವಭಾವ, ಎಲ್ಲವನ್ನೂ ಕಥೆಮಾಡಿ ಹೇಳಿದರು. ನಾನು ಕೆಲವು ಪತ್ರಗಳನ್ನು 'ಪೋಸ್ಟ್' ಮಾಡಬೇಕಾಗಿತ್ತು. ಅಂಚೆ ಮನೆಯ ವರೆಗೆ ಹೋಗಿ ಪತ್ರಗಳನ್ನು ತಂದಿಲ್ಲವೆಂದು ತಿರುಗಿ ಬಂದೆ; ಮನೆಗೆ ಹೋಗಿ ನನ್ನ ಕಿಸೆಯೊಳಗಿಂದ ಪತ್ರಗಳನ್ನು ತೆಗೆದೆ! ಅಂತೂ ಕವಿಯಾಗುವದರಿಂದ ಹೀಗೆಲ್ಲ ಸಂಭವಿಸುವದೆಂದು ಅವರ ಸಿದ್ಧಾಂತ!

ಸಭೆಯು ಮುಕ್ತಾಯವಾದ ಮೇಲೆ ಸಿಗರೇಟು ಸೇದುವದಕ್ಕೆ ಪ್ರಾರಂಭವಾಯಿತು. ನಮಗಿಂತ ಹೆಚ್ಚಾಗಿ ವಿದ್ಯಾರ್ಥಿನಿಯರು ಇಲ್ಲಿ ಸೇದುತ್ತಾರೆ! 'Is that story about you, true?' (ನಿಮ್ಮ ವಿಷಯಕ ಆ ಕಥೆಯು ನಿಜವಾದದ್ದೇ?) ಎಂದು ಒಬ್ಬ ವಿದ್ಯಾರ್ಥಿನಿಯು ನನ್ನನ್ನು

ಕೇಳಿದಳು. 'I am afraid it is' (ಹೌದೆಂದು ಕಾಣುತ್ತದೆ.) ಎಂದು ನಾನು ಒಪ್ಪಿಕೊಂಡೆ!



*       *       *       *

೫—೩—೩೭

ಇಂದು ನಾನು ಹಾಗು ಕಾ....ರು ಲಾಯನ್ಸ್ ಹೋಟೆಲಿನಲ್ಲಿ ಚಹ ಕುಡಿಯುತ್ತ ಕುಳಿತಿದ್ದೆವು. ಹತ್ತಿರದ ಟೇಬಲ್ಲಿನ ಬದಿಗೆ ಒಂದು ಆಂಗ್ಲ ಕುಟುಂಬವಿತ್ತು: ಗಂಡ, ಹೆಂಡತಿ, ಸುಮಾರು ಎರಡು ಮೂರು ವರುಷದ ಒಂದು ಮಗು. ನಮ್ಮನ್ನೇ ಆ ಮಗುವು ನೋಡುತ್ತಿತ್ತು. ಆಗ ಮಗುವಿನೆಡೆ ತಿರುಗಿ ನಾವು ಸಕ್ಕು ಮಾತನಾಡಿಸಿದೆವು. ಇದು ಆ ತಂದೆಗೆ ಸರಿಬರಲಿಲ್ಲ. 'Nigger' (ನಿಗ್ರೋಮನುಷ್ಯ) ಎಂದು ಒದರೆಂದು ಮೆಲ್ಲನೆ ಕಿವಿಯಊದಿದನು. ಆಗ ಆ ಮಗುವು 'Nigger' (ನಿಗರ್) ಎಂದು ನಮ್ಮನ್ನು ಸಂಬೋಧಿಸಿ ಕೂಗಹತ್ತಿತು. ತಾಯಿ—ತಂದೆಗಳಿಬ್ಬರೂ ನಗುತ್ತ ನೋಡುತ್ತ ಕುಳಿತರು. ಹೀಗಿದೆ ಇಲ್ಲಿಯ ಸ್ಥಿತಿ. ತಂದೆ ಮಗುವಿಗೆ ಕೊಡುವ ಶಿಕ್ಷಣವಿದು. ಶಿಕ್ಷಕರು ಶಾಲೆಯಲ್ಲಿ ಹುಡುಗರಿಗೆ ಕೊಡುವ ಶಿಕ್ಷಣವಿದು. ಸರಕಾರವು ಜನತೆಗೆ ಕೊಡುವ ಶಿಕ್ಷಣವಿದು. ಆಂಗ್ಲ ವಾಙ್ಮಯ ಪ್ರೇಮಿಗಳು-ಶೇಕ್ಸಪಿಯರನ ಭಕ್ತರು-ಇದನ್ನು ನೆನಪಿನಲ್ಲಿಡಬೇಕು. ಶೇಕ್ಸಪಿಯರನ ದೇಶದಲ್ಲಿ ಬರಿ ಕಾವ್ಯವಿಲ್ಲ. ಸುಶ್ರಾವ್ಯವಾದ 'Nigger' (ನಿಗರ್) ಎಂಬ ಶಬ್ದವು ಕೇರಿಕೇರಿಗಳಲ್ಲಿ ನಿನದಿಸುತ್ತದೆ. 'ಬರ್ನಾರ್ಡ್ ಶಾ'ನು ಹೇಳಿದ್ದಾನೆ: "The word 'Nigger' will cost us an empire one day" (ನಿಗರ್ ಎಂಬ ಶಬ್ದವು ಒಂದು ದಿನ ನಮ್ಮ ಸಾಮ್ರಾಜ್ಯವನ್ನೇ ಕೊಂಡೀತು.)

*       *       *       *

೬—೩—೩೭

'ಫಾವುಸ್ಟ್' ಎಂಬ ಪ್ರಸಿದ್ಧ ಕಥೆಯನ್ನು ಕುರಿತು ರಚಿಸಿದ ಒಂದು 'ಓಪೆರಾ' ನೋಡಿದೆ. ಸಂಗೀತ, ಹಾಡುಗಾರಿಕೆ, ನೃತ್ಯ, ರಂಗಭೂಮಿ ಸೌಕರ್ಯ, ಅಲ್ಪ ಸ್ವಲ್ಪ ಸಂಭಾಷಣೆ,—ಇಷ್ಟೆಲ್ಲ ಕೂಡಿ ಒಂದು 'ಓಪೆರಾ (ಗೀತನಾಟಕ) ಆಗುತ್ತದೆ. ಸನ್ನಿವೇಶಗಳ ರಸವನ್ನು ಸಂಗೀತದಲ್ಲಿ

ಇಳಿಸಲು ಮಾಡಿದ ಪ್ರಯತ್ನವೇ ಇದರ ಜೀವಾಳ. ಸೈತಾನನೊಡನೆ ಒಪ್ಪಂದವನ್ನು ಮಾಡುವ ಪೂರ್ವದಲ್ಲಿ 'ಫಾವುಸ್ಟ್‌ನ ಅಂತಃಕಲಹ,' 'ಮಾರ್ಗರೆಟ್ಟ'ಳ ದ್ವಿಧಾವೃತ್ತಿ, ಅವಳ ಪಶ್ಚಾತ್ತಾಪ,–ಇವೇ ಮೊದಲಾದ ಪ್ರಸಂಗಗಳನ್ನು ಹಾಡುಗಾರಿಕೆಯು ಹೃದಯಸ್ಪರ್ಶಿಯಾಗಿ ಮಾಡಿತು.

* * * *

೭–೩–೩೭

ಇಂದು ಮಜಲಿಸ್‌ದಲ್ಲಿ ನೃತ್ಯವಿತ್ತು;–ಮೀರಾದೇವಿಯ ನೃತ್ಯ ಹಾಗು ಅತಿಯಾ ಬೇಗಮ್ಮರವರ ಭಾಷಣ. 'ಶಾ'ನ **Caesar and Cleopatra** ಎಂಬ ನಾಟಕದಲ್ಲಿಯ 'ಟೀಟಾ'ನಂತೆ ಕಾಣುತ್ತಿದ್ದರು ಅತಿಯಾ ಬೇಗಮ್ಮರವರು. ಅವರು ಸಂಗೀತಶಾಸ್ತ್ರಜ್ಞರಿರಬಹುದು; ಆದರೆ ಮಾತಿನಲ್ಲಿ ಧೋರಣವಿರಲಿಲ್ಲ. ತಮಗೆ ಬರುವ 'ಹಿಡಿ ಹೆಚ್ಚು ಹಿಡಿ ಕಡಮೆ' ಇಂಗ್ಲೀಷಿನಲ್ಲಿ ಕೆಲವು ಸಾಮಾನ್ಯ ನಿಯಮಗಳನ್ನು ಹೇಳಿದರು. 'We do'nt recognise Tagore in India' (ಹಿಂದುಸ್ಥಾನ ದಲ್ಲಿ ನಾವು ಟಾಗೋರರಿಗೆ ಬೆಲೆ ಕೊಡುವುದಿಲ್ಲ.) ಎಂಬ ಅವರ ಮಾತಿಗೆ 'On what authority do you make that statement?' (ಈ ತಮ್ಮ ಮಾತಿಗೆ ಪ್ರಮಾಣವೇನಾದರೂ ಇದೆಯೆ?) ಎಂದು ಒಬ್ಬ ವಿದ್ಯಾರ್ಥಿಯು ಕೇಳಿದಾಗ,'I would rather read the original songs than the translations' (ಹಾಗಲ್ಲ, ಅವರ ಭಾಷಾಂತರವನ್ನೋದುವದಕ್ಕಿಂತ ಮೂಲದಲ್ಲಿ ಗೀತಗಳನ್ನೋದುವುದು ಮೇಲು.) ಎಂದು ತಮ್ಮ ಮಾತನ್ನು ಸುಧಾರಿಸಿದರು. ಉದಯಶಂಕರನ ನವೀನ ನೃತ್ಯಗಳನ್ನು ನಿರಾಕರಿಸಿದರು. ಆ ಮೇಲೆ ಮೀರಾದೇವಿಯ ನೃತ್ಯವಾಯಿತು. ಯೋಗಿಯ ನೃತ್ಯ, 'the firefly dance,' (ಹೊನ್ನೆಹುಳದ ಕುಣಿತ) ನಾಗನೃತ್ಯ,–ಮೊದಲಾದವು ರಮ್ಯವಾದವು. ಇವರು ಟಾಗೋರರ ಒಂದು ಗೀತೆಯ ಭಾವವನ್ನು ನೃತ್ಯದಲ್ಲಿ ವ್ಯಕ್ತಪಡಿಸಿದರು. ಉದಯ ಶಂಕರನನ್ನು ಬಾಯ್ತುಂಬ ಹೊಗಳಿದರು!

---

## ೫೨

೮-೩-೩೭

'Dylan Thomas' ಎಂಬ ಉದಯಮಾನ ಕವಿಯ ಭಾಷಣವನ್ನು ಕೇಳಿದೆ. ಆಧುನಿಕ ಆಂಗ್ಲ ಕಾವ್ಯವನ್ನು ಕುರಿತು ಆತನು ಮಾತನಾಡಿದ. ವೇಲ್ಸ್ ಪ್ರಾಂತದವನೀತ. ವಯಸ್ಸು ಸುಮಾರು ಇಪ್ಪತ್ತೆರಡು. ನನ್ನ ಒಬ್ಬ ಆಂಗ್ಲ ಸ್ನೇಹಿತನೂ ಇವನೂ ಕೂಡಿಯೇ ಸಾಲೆ ಕಲೆತರು. ಸಾಹಿತ್ಯ ವನ್ನುಳಿದು ಅನ್ಯ ವಿಷಯಗಳಲ್ಲಿ ಈತನಿಗೆ ಅಭಿರುಚಿಯಿರಲಿಲ್ಲ. ಕಾರಣ ವಿಶ್ವವಿದ್ಯಾಲಯದ ಸಂಪರ್ಕವು ಲಭಿಸಲಿಲ್ಲ. ಸಾಲೆಯನ್ನು ಮುಗಿಸಿ ಕೊಂಡು, ಸಾಹಿತ್ಯದ ಮೇಲೆಯೇ ಕಾಲೂರಿ ನಿಲ್ಲಬೇಕೆಂದು ಲಂಡನ್ನಿಗೆ ತೆರಳಿದ. ಅಲ್ಲಿ ಪ್ರಸಿದ್ಧ ಸಾಹಿತಿಗಳ ಪ್ರೋತ್ಸಾಹವನ್ನು ಸಂಪಾದಿಸಿ ಈಗ ಸಾಹಿತ್ಯರಂಗದಲ್ಲಿ ಕಾಲಿಡಹತ್ತಿದ್ದಾನೆ. ಆರ್ಥಿಕಸ್ಥಿತಿಯು ನೆಟ್ಟಗಿಲ್ಲ.

ಬರೆದು ತಂದ ಭಾಷಣವನ್ನು ಓದಿದ. ಅದು 'ಚಂಪೂ' ರೀತಿ,–ಅರ್ಧ ಗದ್ಯ ಹಾಗೂ ಅರ್ಧ ಪದ್ಯದಲ್ಲಿತ್ತು. ಆದರೆ ಅದನ್ನು ಅವನು ಓದುವ ರೀತಿಯು ಮೋಹಕವಾಗಿತ್ತು. ತನ್ನ ಹಾಗು 'ಆಡೆನ್'ನ ಕವಿತೆ ಗಳನ್ನು ಅಂದು ತೋರಿಸಿದ. ಬೇಂದ್ರೆಯವರ 'ಗಾರುಡಿಗ'ನ ರೀತಿಯು ನೆನಪಿಗೆ ಬಂದಿತು ನನಗೆ,–ಅಷ್ಟು ಮೋಹಕವಾಗಿತ್ತು ಅವನು ಓದುವ ಶೈಲಿ.

'Ezra Pound'ನ ಕಾವ್ಯದಲ್ಲಿಯಂತೆ ಪಾಂಡಿತ್ಯವು ಬಹಳವಾಗಿ ಸೇರಬಹುದು,—ಕಾವ್ಯವು ಕಾವ್ಯಮಯವಾಗಿದೆಯೋ ಇಲ್ಲವೋ ಎಂಬುದೇ ನಾವು ನೋಡಬೇಕಾದ ವಿಷಯ.'Day Lewis'ನ ಕಾವ್ಯದಲ್ಲಿ ಬರಿ 'ಕಮ್ಯುನಿಜಮ್' ಇದೆ,–ಕಾವ್ಯವಿಲ್ಲ. "A communist poet should be more clear than most communists. Poetry is its own propaganda, its own problem and its own solution" (ಯಾವ

‘ಕಮ್ಯೂನಿಸ್ಟ’ನಿಗಿಂತಲೂ ‘ಕಮ್ಯೂನಿಸ್ಟ’ ಕವಿಯು ಸುಸ್ಪಷ್ಟವಾಗಿ ಬರೆಯಬೇಕು. ಕಾವ್ಯದ ಪ್ರಸಾರಕತಂತ್ರವೇ ಸ್ವತಂತ್ರ, ಆದರ ಸಮಸ್ಯೆ ಆದರ ಎತ್ತರ, ಅದರಲ್ಲಿಯೆ ಇರಬೇಕು.) ರಾಜಕಾರಣವು ಅನುಚಿತ ವಾಗಿ ಕಾವ್ಯದಲ್ಲಿ ಸೇರಬಾರದು,—‘A dictator giving birth to a shirt’ (ದೊಡ್ಡ ಡಿಕ್ಟೇಟರನ ಹೊಟ್ಟೆಯಲ್ಲಿ ಒಂದು ಪುಟ್ಟ ಶರ್ಟು ಹುಟ್ಟಿದಂತೆ.) ಮುಂತಾಗಿ ಟೀಕಿಸಿದ. ಒಟ್ಟಿನ ಮೇಲೆ ಇವನಲ್ಲಿ ನಿಜವಾದ ಕವಿತ್ವವು ಕಂಡಿತು.

* * * *

೯—೩—೩೭

ಗ್ರಿಫಿಥ್ಸ್ ಎಂಬ ಒಬ್ಬ I. C. S. ಪ್ರೊಬೇಶನರನಾದ ವಿದ್ಯಾರ್ಥಿ ಯಿದ್ದಾನೆ. ಈ ವರ್ಷ ಈತನು ಮದ್ರಾಸ ಇಲಾಖೆಗೆ ಕೆಲಸದ ಮೇಲೆ ಹೋಗುವನು. ಹಿಂದುಸ್ಥಾನದ ಬಗ್ಗೆ ಮನಬಿಚ್ಚಿ ಅವನೊಡನೆ ಮಾತ ನಾಡುತ್ತೇನೆ. ನನ್ನ ‘Bendre and His Poetry’ ಮೊದಲಾದ ಲೇಖ ಗಳನ್ನು ಓದಿದ್ದಾನೆ.

* * * *

೧೦—೩—೩೭

‘ಸ್ಯಾಂಕಿ ಸೊಸಾಯಿಟಿ’ಯಲ್ಲಿ, “There should be no principle in politics except expedience” (ರಾಜಕಾರಣದಲ್ಲಿ ತಾತ್ಕಾಲಿಕ ಉಪಯೋಗವನ್ನು ಬಿಟ್ಟು ಬೇರೆ ತತ್ವವಿರಬಾರದು.) ಎಂಬ ವಿಷಯ ವನ್ನು ಕುರಿತು ಚರ್ಚೆಯಾಯಿತು. ನಾನೇ ಅದನ್ನು ವಿರೋಧಿಸುವವ ನೆಂದು ಕಾರ್ಯದರ್ಶಿಯು ಪ್ರಕಟಿಸಿದ್ದನು. ಗಾಂಧಿಯವರ ರಾಜ ಕಾರಣದ ಮೂಲತತ್ವಗಳನ್ನು ಹಿಡಿದು ನಾನು ಮಾತನಾಡಿದೆ. ಗೊತ್ತು ವಳಿಯನ್ನು ಸಮರ್ಥಿಸಿ ಮಾತನಾಡಿದವರಲ್ಲಿ ಒಬ್ಬನು ಹೀಗೆ ಹೇಳಿದ: “Mr. Gandhi was once asked as to what he would choose between Truth and India. Mr. Gandhi hoped that he would never be forced to make a choice, but if it came to that, he would prefer Truth. I, therefore, support the motion!”



ಕೀಟ್ಸ್ ಮ್ಯುಜಿಯಂ

( ಪುಟ ೧೭೬ )



ಏಡನ್ನಿನ ಗಚ್ಚಿನ ಕೆರೆಗಳು

(ಪುಟ ೨೧)

('ಸತ್ಯ ಮತ್ತು ಹಿಂದುಸ್ಥಾನ ಇವೆರಡರಲ್ಲಿ ಯಾವದನ್ನಾರಿಸಿಕೊಳ್ಳು ವಿರಿ' ಎಂದು ಗಾಂಧಿಯವರಿಗೆ ಒಮ್ಮೆ ಕೇಳಲಾಯಿತು. 'ಅಯ್ಯೋ, ಅಂಥ ಪ್ರಸಂಗವೇ ಬರಬಾರದು ಎಂದು ನನ್ನಾಶೆ' ಎಂದು ಗಾಂಧಿಯವರು ಹೇಳಿ 'ಅಂಥ ಪ್ರಸಂಗವೇ ಬಂದರೆ ನಾನು ಸತ್ಯವನ್ನೇ ಆರಿಸಿಕೊಳ್ಳುವೆ.' ಅಂತೆಯೆ ನಾನೀ ಸೂಚನೆಯನ್ನು ಎತ್ತಿಹಿಡಿಯುತ್ತೇನೆ.)

ನನ್ನ ಭಾಷಣವನ್ನು ಕೇಳಿ ಎಲ್ಲರೂ ಸಂತೋಷಪಟ್ಟರು. "When we framed this motion, hardly a member on the committee thought that it would be lost. But the magnificent speech of Mr. ಗೋಕ್ಯಾಕ್ (!) has changed the course of events this evening"! (ಈ ಸೂಚನೆಯನ್ನು ಸಿದ್ಧಪಡಿಸುವಾಗ ಮಂಡಲದೊಳಗಿನ ಯಾವ ಸದಸ್ಯನಿಗೂ ಅದು ಬಿದ್ದು ಹೋಗಬಹುದೆಂದೆನಿಸಿರಲಿಲ್ಲ. ಆದರೆ ಗೋಕಾರವರ ಉತ್ತಮ ಭಾಷಣದಿಂದ ಇಂದು ಅದರ ಹಣೆ ಬರಹವೇ ಬದಲಾಯಿತು.) ಎಂದು ಅಧ್ಯಕ್ಷರು ಹೇಳಿದರು.

ಮರುದಿನ ಮುಂಜಾನೆ ನನ್ನ ಪರಿಚಯವಿಲ್ಲದ ಆಂಗ್ಲ ವಿದ್ಯಾರ್ಥಿಯು ಬಂದು ಕೇಳಿದ: "Why do you not speak in the Union? You would beat all the speakers hollow." (ಯೂನಿಯನ್ನಿನಲ್ಲಿ ನೀವೇಕೆ ಮಾತನಾಡುವದಿಲ್ಲ? ಅಲ್ಲಿ ಎಲ್ಲ ಮಾತುಗಾರರನ್ನು ನೀವು ಪೊಳ್ಳುಗೆಡಹುವಿರಿ.) ನೋಡುವೆನೆಂದು ಹೇಳಿದೆ. ಆದರೆ ಯೂನಿಯನ್ನದಲ್ಲಿ ಎರಡು ನಿಮಿಷ ಮಾತನಾಡುವದರ ಸಲುವಾಗಿ ೫ ತಾಸು ಹಾದಿ ನೋಡಬೇಕಾಗುತ್ತದೆ! ಅಲ್ಲಿಯೂ ನನ್ನ ಆಟವನ್ನು ಹೂಡಬಲ್ಲೆನೆಂದು ಇಲ್ಲಿಯ ಕೆಲವರಿಗೆ ಎನಿಸಿದರೆ ಸಾಕಲ್ಲ!

## ೫೩

೧೧—೩—೩೭

ಇಂದು ಎರಡು ‘ಓಪೆರಾ’ ಗಳನ್ನು ನೋಡಿದೆ. ‘ಹೋಲ್‌ಸ್ಟ್’ ಎಂಬವನು ಸುಮಾರು ೧೯೧೬ರಲ್ಲಿ ಬರೆದ ‘ಸಾವಿತ್ರಿ’ ಎಂಬುದೊಂದು. ‘ಬ್ಲಾವ್ರುಸ್’ ಎಂಬವನು ಸುಮಾರು ೧೬೮೦ರಲ್ಲಿ ಬರೆದ ‘ವೇನಿಸ್ ಮತ್ತು ಎಡೋನೀಸ್’ ಎಂಬುದು ಇನ್ನೊಂದು.

‘ಸಾವಿತ್ರಿ’ ಎಂಬ ಯಕ್ಷಗಾನವನ್ನು ಬರೆದಾತನು ಸಂಸ್ಕೃತ ಭಾಷಾವಿಶಾರದನು. ಆದರೆ ಸಂಪೂರ್ಣ ಕಥೆಯನ್ನು ಅವನು ಉಪಯೋಗಿಸಿಲ್ಲ, ಸತ್ಯವಾನನು ಇಲ್ಲಿ ಬರಿಯ ಅರಣ್ಯನಿವಾಸಿಯಾಗಿ ಬರುತ್ತಾನೆ. ಅವನು ಸಾಯುವನೆಂದು ಸಾವಿತ್ರಿಯು ಕನಸು ಕಾಣುತ್ತಾಳೆ. ತನ್ನ ಭೀತಿಯನ್ನು ಸತ್ಯವಾನನಿಗೆ ತಿಳಿಸುವಷ್ಟರಲ್ಲಿ ಅವನು ಸತ್ತುಹೋಗುತ್ತಾನೆ. ಆಗ ‘ಡೆಥ್’ ಎಂಬ ಸ್ವರೂಪವು ಬರುತ್ತದೆ. ತನ್ನನ್ನು ನೋಡಿ ಬೆದರದ ಸಾವಿತ್ರಿಗೆ ‘ವರವನ್ನು ಕೇಳು’ ಎಂದು ಹೇಳುತ್ತದೆ. ‘ಜೀವದಾನ ಮಾಡು’ ಎಂದು ಕೇಳಿ ಒಪ್ಪಿಗೆಯನ್ನು ಪಡೆದು ಆ ಮೇಲೆ ‘ಪತಿಯೇ ನನ್ನ ಜೀವ’ವೆಂದು ಆಕೆಯು ಹೇಳುತ್ತಾಳೆ. ಮರಣವು ಹೊರಟು ಹೋಗುತ್ತದೆ. ಪ್ರೇಮವೇ ಸತ್ಯ,—ಮರಣವು ಮಾಯೆಯೆಂದು ದಂಪತಿಗಳು ಹಾಡುತ್ತಾರೆ.

ಇದರಲ್ಲಿ ಉಳಿದ ಯಕ್ಷಗಾನಗಳಲ್ಲಿಯಂತೆ ವಾದ್ಯಸಂಗೀತವು ವಿಶೇಷವಾಗಿಲ್ಲ,—ಎರಡು ಕೊಳಲುಗಳು ಮಾತ್ರ. ಅಲ್ಲಲ್ಲಿ ಕೊಳಲಿನ ಸ್ವರವೂ ಇಲ್ಲದಾಗಿ ಪಾತ್ರಗಳ ಸಂಗೀತವೊಂದೇ ಕೇಳಬರುತ್ತದೆ. ಪರದೆಯ ಹಿಂದೆ,—ಹೆಂಗಳೆಯರ ಗುಂಪಿನ ಶೋಕಧ್ವನಿಯು ಯಾವಾಗಲೂ ಮೆಲ್ಲನೆ ಕೇಳಬರುತ್ತದೆ.

ಇನ್ನು ರಂಗಭೂಮಿಯ ವಿಷಯ. ಅರಣ್ಯದ ದೃಶ್ಯವನ್ನು ಸೌಮ್ಯವಾಗಿ ರೂಪಿಸುವ ಪರದೆಯೊಂದಿದ್ದರೆ ಸಾಕು. ಸತ್ಯವಾನನು ತಲೆಯ

ಸುತ್ತೆಲ್ಲ ದುಂಡಗೆ ಕೂದಲು ಬಿಟ್ಟು 'ಕಫನಿ'ಯಂತಹ ಬಟ್ಟೆಯನ್ನು ಧರಿಸಿದ್ದನು. ಅವನು ಹಿಡಿದ ಕೊಡಲಿಯು ಮಾತ್ರ ಪೂರ್ಣವಾಗಿ ಆಂಗ್ಲವಾದುದು,–'Eric Blood-Axe' ಎಂಬ ದೇಸನು ಮಾತ್ರ ಅಂಥ ಕೊಡಲಿಯನ್ನು ಹಿಡಿಯಬಹುದಾಗಿತ್ತು! ಸಾವಿತ್ರಿಯು ಇಂದಿನ ಹಿಂದು ರಮಣಿಯಂತೆ ನೀಲಿ ಪತ್ತಲವನ್ನು ಉಟ್ಟಿದ್ದಳು –ಸೆರಗು ಮಾತ್ರ ತಲೆಯ ಮೇಲಿಂದ ಹಾಯ್ದು ಬಂದಿತ್ತು. ಆದರೆ ಆಕೆಯ ನಡಿಗೆ ಹಾಗು ಹಾವಭಾವಗಳಲ್ಲಿ ಪಾಶ್ಚಾತ್ಯ ಮಹಿಳೆಯರ 'ಪೌರುಷವು'ವು ಸ್ಫುಟ ವಾಗುತ್ತಿತ್ತು! 'ಮರಣ'ದ ವೇಷವು ವಿಚಿತ್ರವಾಗಿತ್ತು,–ಇಲ್ಲಿಯ ಸೈತಾನನ ರೀತಿಯನ್ನು ಹೋಲುತ್ತಿತ್ತು.

ಸಂಭಾಷಣೆಯೆಲ್ಲ ಕೇವಲ ಗೀತೆಗಳಲ್ಲಿ ವ್ಯಕ್ತವಾಗಬೇಕು. ಸಾಹಿತ್ಯವು ಈ ಯಕ್ಷಗಾನದಲ್ಲಿ ಮಾತ್ರ ಸಂಗೀತಕ್ಕಿಂತ ಹೆಚ್ಚಾಗಿದೆ. ವಾಡಿಕೆಯಾಗಿ ಹಾಗಾಗಬಾರದು.

ಮಾತನಾಡುವ ಪೂರ್ವದಲ್ಲಿ 'ಸಾವಿತ್ರಿ', 'ಸತ್ಯವಾನ್' ಎಂಬ ಹೆಸರುಗಳನ್ನು ಇಲ್ಲಿಯ ಸಂಗೀತ ಪದ್ಧತಿಗೆ ಒಪ್ಪುವಂತೆ ಬಹಳ ವಿಚಿತ್ರ ವಾಗಿ ಎಳೆಯುತ್ತಿದ್ದರು.

'**Venus and Adonais**' ಎಂಬುದು ಒಂದು 'Masque'– ಇದರಲ್ಲಿ 'ಓಪೆರಾ'ದ ಲಕ್ಷಣಗಳೂ ಕಂಡುಬರುತ್ತವೆ.

* * * *

೧೬–೩–೩೭

ಮತ್ತೆ ಲಂಡನ್ನಿಗೆ ಬಂದಿದ್ದೇನೆ! ಈ ಸಲ 'ಆರ್ಯಭವನದಲ್ಲಿ ತಳವೂರಿದ್ದೇನೆ. ಇದು ಲಂಡನ್ನಿನಲ್ಲಿಯ ಗುಜರಾಥವಿದ್ದಂತೆ! ಇಲ್ಲಿದ್ದ ಆಂಗ್ಲ ಕೆಲಸಗಿತ್ತಿಯೂ 'ಕಿಚಡಿ' ಮೊದಲಾದ ಗುಜರಾಥಿ ಶಬ್ದಗಳನ್ನು ಕಲಿತಿದ್ದಾಳೆ. ಪಂಜಾಬದ 'ಪಂಡಿತಜಿ'ಯೊಬ್ಬನು ಇಲ್ಲಿದ್ದಾನೆ. ಆರ್ಯ-ಸಮಾಜದವನೆಂದು ಕಾಣುತ್ತದೆ. ಹಿಂದು ಧರ್ಮವನ್ನು ಕುರಿತು ವಾರಕ್ಕೊಮ್ಮೆ ಉಪನ್ಯಾಸವನ್ನು ಕೊಡುತ್ತಾನೆ. ಕೇಳಲು ಬಂದ ಶ್ರೋತೃವೃಂದದಲ್ಲಿ ಕೆಲವರು ಆಂಗ್ಲರೂ ಕಂಡುಬರುತ್ತಾರೆ.

ಇಲ್ಲಿ ಸುಳಿಯುವ ಇನ್ನೊಂದು ಚಿತ್ರವು ಒಬ್ಬ ಆಂಗ್ಲ ಯುವತಿಯದು. ಆಕೆ ಒಬ್ಬ ಹಿಂದು ತರುಣನನ್ನು ಮದವೆಯಾಗಿ ಹಿಂದುಸ್ತಾನಕ್ಕೆ ಹೋದಳು. ಅವಳ ಹೊಟ್ಟೆಗೆ ಹಾಕಲು ಶಕ್ಯವಿಲ್ಲದೆ ಗಂಡನು ತನ್ನ ಸ್ನೇಹಿತನೊಬ್ಬನ ಮನೆಯಲ್ಲಿ ಆಕೆಯನ್ನು ಬಿಟ್ಟು ಹೋದ. ಅಂತೂ ಇಂತೂ ಇಂಗ್ಲಂಡಕ್ಕೆ ಆ ಪ್ರಾಣಿ ಬಂದು ಮುಟ್ಟಿದಳು. ಮತ್ತೆ ಪತಿಯನ್ನು ಶೋಧಿಸಲು ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ. ಇಲ್ಲಿ ಸೀರೆಯನ್ನುಟ್ಟು ತಲೆಯ ಮೇಲೆ ಸೆರಗನ್ನು ಹೊದ್ದುಕೊಂಡು—ಅವಳ ಹೆಸರು ಮಿಸೆಸ್. ಜೋರಗಲ್‌ಕರ್ ಎಂದಿದೆಯೆಂದು ತಿಳಿಯುವಾ!–'ಕಾದಲರನ್ನು' ಹುಡುಕುತ್ತ ತಿರುಗಾಡುತ್ತಾಳೆ. ಭಾರತೀಯ ತರುಣರ ಪರಿಚಯವನ್ನು ಪಡೆಯಲು ಪ್ರಯತ್ನಿಸುತ್ತಾಳೆ. 'ಶೇಕ್ ಹ್ಯಾಂಡ್' ಮಾಡುವದಿಲ್ಲ. 'ನಮಸ್ತೇ' ಎಂದು ಕೈಮುಗಿಯುತ್ತಾಳೆ! ನನ್ನ ಪರಿಚಿತನೊಬ್ಬನ ಕೋಣೆಗೆ ಹೋಗಿದ್ದೆ. ಅವನ 'ಪುಲೋವ್ಹರ್' ಹರಿದಿತ್ತು. ಅದನ್ನು ಅವನಿಗಾಗಿ ಹೊಲೆಯುತ್ತ ಕುಳಿತಿದ್ದಳು. ಅಂತೂ ದೇಶವನ್ನು ಬಿಟ್ಟುಬಂದ ವಿದ್ಯಾರ್ಥಿಗಳ ಮನಸ್ಸೆಳೆಯುವ ರೀತಿಯಿದು.

* * * *

೨೩—೩—೩೭

**'ಆರ್ಯ ಭುವನ'** ದಲ್ಲಿ ಸಂಪೂರ್ಣವಾಗಿ ಹಿಂದುಸ್ತಾನದ ವಾತಾವರಣವಿದೆ. ನಿನ್ನೆ ಪುರಿ ಹಾಗು ಸೀಕರಣೆಯನ್ನು ತಿಂದೆವು! ಇಲ್ಲಿದ್ದ ಆಂಗ್ಲ ಸೇವಕರು ಸಹ ನಮ್ಮ ರೀತಿ–ನಡತೆಗಳನ್ನು ಕಲಿತಿದ್ದಾರೆ. ಸಂಪತ್ತು ಹಾಗು ಶಕ್ತಿ,– ಇವಿಷ್ಟಿದ್ದರೆ,– ತೀರ ಕೀಳು ಜನಾಂಗದವರ ಸಂಸ್ಕೃತಿಯೂ ಸಹ 'ಎಲ್ಲ ಮೇಲ್ಮೆಗಿಂತ ಮಿಗಿಲೆ'ಂದು ತೋರಿಸಬಹುದು!

———

ಭೂಗರ್ಭಶಾಸ್ತ್ರದಲ್ಲಿ ಎರಡು ವಿಷಯಗಳು ತಿಳಿಯುವಂತಹವು. ಇಲ್ಲಿಯ ಆಂಗ್ಲ ಪ್ರೊಫೆಸರರೊಬ್ಬರು ಇದರ ಬಗ್ಗೆ ಹೇಳುತ್ತಿದ್ದರು:— (೧) ಸಾವಿರಾರು ವರ್ಷಗಳಿಂದ ಬೆಳೆದು ಒಣಗಿದ ದೊಡ್ಡ ಮರಗಳು ಸರೋವರಗಳ ಪಾತಾಳದಲ್ಲಿ ಸಣ್ಣ ಕಲ್ಲುಗಳ ಮೇಲೆ ಒರಗಿಕೊಂಡುದು: ಇಜಿಪ್ತದಲ್ಲಿಟ್ಟ ಮಾಸವರ 'ಮಮಿ'ಗಳಂತೆ! (೨) ಆದಿಶೇಷನ ಕಲ್ಪನೆ ಯಿದೆಯಷ್ಟೆ? ಇದು ಬರಿ ಊಹೆಯಲ್ಲ. ಭೂಗರ್ಭದಲ್ಲಿ ರೂಪಗೊಳ್ಳು ತ್ತಿರುವ ಶಿಲೆಯ ತರವು ಹಾವಿನಾಕಾರವನ್ನು ಹೊಂದಿರುತ್ತದೆ. ನೆಲಕ್ಕೆ ಸಮೀಪವಾಗಿದ್ದ ಶಿಲೆಯು ಹೆಡೆಯಂತೆ ಅಗಲವಾಗಿದ್ದು, ಕೆಳಗಿನ ಭಾಗವು ಸಣ್ಣದಾಗುತ್ತ ಹೋಗುತ್ತದೆ. ಈ ಕಲ್ಲಿನ ತರಹದ ಬಣ್ಣವು ಸಹ ಕರಿದು. ಆದಿಶೇಷನು ತಲೆಯಲ್ಲಾಡಿಸಿದಾಗ ಭೂಕಂಪವಾಗುತ್ತ ದೆಂದು ಹೇಳುತ್ತಾರಲ್ಲ! ಈ ಶಿಲೆಯ ತರಹದಲ್ಲಿ ಒತ್ತಡ ( pressure ) ಹೆಚ್ಚಾದಾಗ ಭೂಕಂಪವಾಗುವದು. ಅಂತೂ 'ಆದಿಶೇಷ'ನಲ್ಲಿ ತಥ್ಯವಿದೆ!

ಸಂಕ್ರಾಂತಿಯ ವಿಷಯವೊಂದು. "Had there been the sun's deflection from his orbit by a degree, at that time, the winds that are generated by the sun's heat would not have been there; and India, that is fertile today, would have been turned into a desert. Hence the Indian people are justified in distributing corn and other things on Sankranti day; for they have got to be thankful for another harvest that is sure to follow." ( ಸೂರ್ಯನು ತನ್ನ ಮಾರ್ಗದಿಂದ ಒಂದು ಅಂಶಮಾತ್ರ ವಾದರೂ ಚಲಿಸಿದ್ದರೆ ಸೂರ್ಯನ ಕಾವಿನಿಂದುಂಟಾಗುವ ಗಾಳಿಗಳೇ ಬೀಸುತ್ತಿರಲಿಲ್ಲ. ಮತ್ತು ಹಿಂದುಸ್ಥಾನವು ಇಂದು ಫಲವತ್ತಾಗಿರು ವಂತೆ ಇರದೆ ಒಂದು ಮರುಭೂಮಿಯಾಗಬಹುದಾಗಿತ್ತು. ಆದ್ದರಿಂದ

ಸಂಕ್ರಾಂತಿಯ ದಿವಸ ಕಾಳುಕಡಿ ಮೊದಲಾದವುಗಳನ್ನು ಹಿಂದೂ ಜನರು ಹಂಚುವುದು ಯಥಾರ್ಥವಾಗಿದೆ. ಸಂಕ್ರಾಂತಿಯ ನಂತರ ಬರುವ ಇನ್ನೊಂದು ಸುಗ್ಗಿಗಾಗಿ ಅವರು ಕೃತಜ್ಞರಾಗಲೇಬೇಕಾಗಿದೆ. ) ಎಂದು ಪ್ರೊಫೆಸರರು ಹೇಳುತ್ತಾರೆ.

* * * *

೨೪—೩—೩೭

ಲಂಡನ್ನಿನಲ್ಲಿ ವಿದ್ಯಾರ್ಥಿಗಳ ಅಂತರರಾಷ್ಟ್ರೀಯ ಸಂಘವೊಂದಿದೆ. ಭಾರತೀಯ ವಿದ್ಯಾರ್ಥಿಗಳ ಸಂಘವಿದು. ಆಂಗ್ಲ ಯುವಕ–ಯುವತಿಯರನ್ನು ಭೆಟ್ಟಿಯಾಗಲು ಮಾಡಿದ ಒಂದು ಏರ್ಪಾಟು. ಒಬ್ಬ ಭಾರತೀಯ ತರುಣನು ಇದರ ಅಧ್ಯಕ್ಷನು. ಈ ಸಂಘದ ಸಭೆಯೊಂದು ಕೂಡಿತ್ತು–ಕಾರ್ಯದರ್ಶಿಯ ಚುನಾವಣೆಗಾಗಿ. ಅರ್ಧ ತಾಸಾದಮೇಲೆ ಇದು ಅಧಿಕೃತಸಭೆಯಲ್ಲವೆಂದು ಒಬ್ಬ ಸದಸ್ಯನು ತಂಟೆ ಹೂಡಿದನು. ಎಲ್ಲದಕ್ಕೂ ಅಧ್ಯಕ್ಷರದು ಒಂದೇ ಉತ್ತರ: ‘ Move it as a resolution ’ ( ಅದನ್ನು ಸೂಚನೆಯನ್ನಾಗಿ ತರ್ರಿ. ) ಸಲ್ಲದ ತಕರಾರುಗಳನ್ನು ಕಿತ್ತೊಗೆಯುವ ಅಧಿಕಾರವು ತಮಗಿದೆಯೆಂಬುದು ಅಧ್ಯಕ್ಷರಿಗೆ ಹೊಳೆದಂತೆ ತೋರಲಿಲ್ಲ!

ಈ ಸಂಘದ ಸಭೆಗಳೆಂದರೆ,–ಊಟ, ಅಲ್ಲದೆ ನೃತ್ಯ. ಪಾಪಭೀರುವಾದ ಒಬ್ಬ ಭಾರತೀಯ ವಿದ್ಯಾರ್ಥಿಯನ್ನು ಸುಧಾರಕನಾದ ಇನ್ನೊಬ್ಬನು ಒಂದು ಸಭೆಗೆ ಕರೆದೊಯ್ದನು. ‘Leave off your fourteenth cntury ideas’ ( ನಿಮ್ಮ ಪುರಾಣ ಕಾಲದ ಕಲ್ಪನೆಗಳನ್ನು ಬಿಟ್ಟುಬಿಡಿ. ) ಎಂದು ಆತನಿಗೆ ಉಪದೇಶವಾಯಿತು. ಊಟವಾದ ಮೇಲೆ ನೃತ್ಯವಿದೆಯೆಂಬುದು ಆ ಸಾದಾ ಹುಡುಗನಿಗೆ ಗೊತ್ತಿರಲಿಲ್ಲ. ಬ್ಯಾಂಡು ಬಾರಿಸುವದು ಸುರುವಾಯಿತು. ಯುವತಿಯರೆಲ್ಲರೂ ಸಾಲಾಗಿ ನಿಂತರು. ಯುವಕರು ಸಂಗೀತಕ್ಕೆ ಸರಿಯಾಗಿ ತಿರುಗಹತ್ತಿದರು. ಬ್ಯಾಂಡಿನ ಸ್ವರವು ಬದಲಾಗಿ ಇನ್ನೊಂದನ್ನು ಬಾರಿಸುವದಕ್ಕೆ ಪ್ರಾರಂಭವಾದ

ಕೂಡಲೆ,–ತಿರುಗುತ್ತಿರುವ ತರುಣರು ತಾವು ಎದುರುನಿಂತ ತರುಣಿ ಯೊಡನೆ ನೃತ್ಯವನ್ನು ಪ್ರಾರಂಭಿಸಬೇಕು. ಆ ತರುಣಿಯು ಒಲ್ಲೆನೆಂದು ಹೇಳಲಾರಳು; ಅದು ಸಂಪ್ರದಾಯಕ್ಕೆ ವಿರುದ್ಧವಾಗಿದೆ! ಇದಾವುದನ್ನೂ ಅರಿಯದ ಆ ಸಭ್ಯ ವಿದ್ಯಾರ್ಥಿಯು ಎಲ್ಲರೊಡನೆ ತಿರುಗುತ್ತ, ಸ್ವರವು ಬದಲಾದೊಡನೆ ಎಲ್ಲರಂತೆ ತಾನೂ ಒಬ್ಬ ತರುಣಿಯನ್ನು ಎದುರಿಸಿ ನಿಂತ. ಇಂಥ ಪ್ರಸಂಗವು ಬರಬಹುದೆಂದು ಅವನಿಗೆ ಹೊಳೆದಿರಲಿಲ್ಲ;–ಇದೇನೋ ಮೋಜೆಂದು ಎಲ್ಲರೊಡನೆ ಕಲೆತಿದ್ದ! ಉಳಿದವರು ನೃತ್ಯವನ್ನು ಪ್ರಾರಂಭಿಸಿ ದಾಗ ಅವನಿಗೆ ಅದರ ಕಲ್ಪನೆ ಬಂತು. ಆ ಹೆಣ್ಣುಮಗಳನ್ನು ಹಿಂದಕ್ಕೆ ಸರಿಸಿ ಆ ತಂಡದೊಳಗಿಂದ ಪಾರಾಗಿ ಹೋದ. 'I do not dance with a girl' (ಹುಡುಗಿಯೊಡನೆ ನಾನು ಕುಣಿಯುವುದಿಲ್ಲ.) ಎಂದು ಅವಳಿಗೆ ಹೇಳಿದ. 'It is all right' (ಹಾಗೇ ಆಗಲಿ.) ಎಂದು ಅವಳು ಹೇಳಿದ್ದೇನೋ ನಿಜ. ಆದರೆ ಅವಳ ಮೋರೆಯು ಸಣ್ಣದಾಗಿತ್ತು. ಜೊತೆಗಾರನು ಸಿಕ್ಕದೆ ಹೋಗಿ ಅವಳು ಸುಮ್ಮನೆ ನಿಲ್ಲಬೇಕಾಯಿತು. ಸಭ್ಯ ವಿದ್ಯಾರ್ಥಿಯು ನೆಹರು ಶರ್ಟನ್ನು ಹಾಕಿದ್ದ; ಧೋತರವನ್ನುಟ್ಟಿದ್ದ. 'You look beautiful, why not have a dance' (ಎಂಥ ಚೆಲುವ ನೀನು! ನೀನು ಕುಣಿತಕ್ಕೇಕೆ ಬರಬಾರದು?) ಎಂದು ಅನೇಕ ಆಂಗ್ಲ ಯುವತಿಯರು ಅವನಿಗೆ ಕೇಳಿದರು. ಮೋರೆ ತಪ್ಪಿಸಿಕೊಂಡು ಅವನು ತಿರುಗಿ ಬಂದ.

ಸುಧಾರಕನ ಅಭಿಪ್ರಾಯವು ಬೇರೆ. ಅವನ ಲಗ್ನವಾಗಿದೆ. ಆದರೆ,- ಏನು ತಪ್ಪೆಂದು ಅವನ ಪ್ರಶ್ನೆ! ವಿಲಾಯತಿಗೆ ಬಂದು ನೀವು ಆಹಾರ-ನಿದ್ರೆಯನ್ನು ಬಿಡುವಿರಾ? ಇಲ್ಲ. ಅಂದ ಮೇಲೆ ಉಳಿದ ಕೊರತೆಗಳನ್ನು ಏಕೆ ಪೂರೈಸಬಾರದು? ಮನೆಯಲ್ಲಿಯ–ಸ್ವದೇಶದಲ್ಲಿಯ ಜನರಿಗೆ ತಿಳಿಯದಿದ್ದರಾಯಿತು! ಪತ್ನಿಗೆ ಬರೆದ ಪತ್ರಗಳಲ್ಲಿ ಪ್ರೇಮವು ತುಂಬಿರಲಿ, ಇಲ್ಲಿಯ ವಿಲಾಸವೂ ನಡೆದಿರಲಿ!

---

## ೫೫

೨೫—೩—೩೭

ಫರ್ಗ್ಯುಸನ್ - ಕಾಲೇಜಿನಲ್ಲಿ ಅಧ್ಯಾಪಕನಾಗಿರುವದು ಒಂದು ಭೂಷಣವೆಂದು ಕಾಣುತ್ತದೆ! ನನ್ನ ಕೈಕೆಳಗೆ ಕಲಿತ ಎಂಟು-ಹತ್ತು ವಿದ್ಯಾರ್ಥಿಗಳು ನಾಲ್ಕೆಂಟು ದಿವಸಗಳಲ್ಲಿ ನನಗಿಲ್ಲಿ ಭೆಟ್ಟಿಯಾದರು!

ಹಿಂದುಸ್ತಾನದಿಂದ ಬಂದ ಮೈಸೂರು ಕರ್ನಾಟಕದ ದಂಪತಿಗಳು ಇಂದು ಭೆಟ್ಟಿಯಾದರು. ಉತ್ತರ ಹಿಂದುಸ್ತಾನದಲ್ಲಿ ಇವರಿಗೆ ದೊಡ್ಡ ಕೆಲಸವಿದೆ. ಪ್ರವಾಸಕ್ಕೆಂದು ಇಲ್ಲಿಗೆ ಬಂದಿದ್ದಾರೆ. ಬರುವಾಗ ಬೆಂಗಳೂರಿನ ಮೇಲೆ ಹಾಯ್ದು ಬಂದರು. ಬೇಂದ್ರೆಯವರು ಪರಿಷತ್ ಮಂದಿರದಲ್ಲಿ ಕೊಟ್ಟ 'ಕನ್ನಡ ಕುಲ' ಎಂಬ ಭಾಷಣವನ್ನು ಬರುವಾಗ ಕೇಳಿದರಂತೆ! ಬಸ್ಸಿನಲ್ಲಿ ಸುಮಾರು ಅರ್ಧ ತಾಸು ಒಂದೇ ಕಡೆಗೆ ಕುಳಿತಿದ್ದೆವು. ಆಧುನಿಕ ಕನ್ನಡ ವಾಙ್ಮಯದ ಬಗ್ಗೆ ಮಾತನಾಡಿದೆವು. 'ಬೊಳ್ಳುಗಟ್ಟಿ'ಯ ತರುವಾಯ ಕೈಲಾಸಂ ಅವರ ಕೃತಿಗಳು ಅಷ್ಟು ಚೆನ್ನಾಗಿಲ್ಲವೆಂದು ಅವರ ಅಭಿಪ್ರಾಯ. ಅದನ್ನು ಅಲ್ಲಗಳೆಯಲು ನಾನು ಪ್ರಯತ್ನಿಸುತ್ತಿದ್ದೆ. 'ಬಹಿಷ್ಕಾರ'ವಿದೆಯಲ್ಲ,-ಎಂದು ಅವರ ಪತ್ನಿಯವರು ಸೂಚಿಸಿದರು! ನೂರಾರು ಮೋಟರುಗಳ ನಡುವೆ ಹಾಯ್ದು ಕೇರಿಕೇರಿಗೆ ನಿಲ್ಲುತ್ತ ಬಸ್ಸು ಮುಂದೆ ನಡೆದಿತ್ತು.

* * * *

ನನ್ನ ಪರಿಚಯದವರೊಬ್ಬರು ಎಡಿನ್‌ಬರೋದಲ್ಲಿ ಅಭ್ಯಾಸಕ್ಕಾಗಿ ಇದ್ದಾರೆ. ಅಲ್ಲಿ ಹೊಲಸು ನೀರಿನ ಸಣ್ಣ ಕಾಲುವೆಯೊಂದು ಹರಿಯುತ್ತಿತ್ತು,-ಅವರು ದಿನಾಲು ಹೋಗುವ ದಾರಿಯಲ್ಲಿ. ಅದರ ಮೇಲೆ ಒಂದು ಪೂಲನ್ನು ಕಟ್ಟಿದ್ದರು. ಇಲ್ಲಿ ಇಂಥ ಕಾಲುವೆಗಳಿಗೂ ನದಿಗಳೆಂಬ ಅಭಿದಾನವು ಬಂದಿದೆಯೆಂಬುದು ಅವರಿಗೆ ಗೊತ್ತು. ಒಂದು ದಿನ ಅಲ್ಲಿ

ನಿಂತಿದ್ದ ಒಬ್ಬ ಗೃಸಹಸ್ಥನಿಗೆ ಕೇಳಿದರು: 'Is this a river or gutter water?' (ಇದೇನು ಹೊಳೆಯೋ ಕಾಲುವೆಯ ನೀರೋ?) ಅವನು ಕ್ಷಣ ಹೊತ್ತು ಅವರನ್ನು ದಿಟ್ಟಿಸಿ ನೋಡಿ "I do not know. I am a stranger in this country. I am English." (ನನಗೆ ಗೊತ್ತಿಲ್ಲ. ನಾನೂ ಈ ಊರಿಗೆ ಹೊಸಬನೇ. ನಾನು ಆಂಗ್ಲ ಮನುಷ್ಯ.) ಎಂದು ತಲೆಯಲ್ಲಾಡಿಸಿದನು!

* * * *

ಭಾರತೀಯ ವಿದ್ಯಾರ್ಥಿಗಳು ಇಲ್ಲಿಯ ನೃತ್ಯಕೂಟಗಳಲ್ಲಿ ಭಾಗ ತೆಗೆದುಕೊಳ್ಳಬೇಕೇನೆಂಬ ಪ್ರಶ್ನೆಗೆ ಇಲ್ಲಿಯವರ ಉತ್ತರವು ಹೀಗೆ: "An Indian student has either to be repressed or to go astray. The only other course open is to sublimate the sexual instinct. This can be done by taking to dancing." (ಹಿಂದುಸ್ಥಾನದ ವಿದ್ಯಾರ್ಥಿಯು ತಪ್ಪು ಹಾದಿಯನ್ನಾದರೂ ಹಿಡಿಯಬೇಕು, ಇಲ್ಲವೆ ಮನಸ್ಸನ್ನು ಹಾಗೂ ಹೀಗೂ ನಿಗ್ರಹಿಸಬೇಕು. ಇನ್ನೊಂದು ಹಾದಿಯೆಂದರೆ ತನ್ನ ಶೃಂಗಾರ ಭಾವನೆಗೆ ಉದಾತ್ತ ರೂಪ ಕೊಡುವುದು. ನೃತ್ಯಸಾಂಪ್ರದಾಯಕ್ಕೆ ಸೇರಿ ಅದನ್ನು ಮಾಡಬಹುದು.) ಕಾಮವಾಸನೆಯನ್ನು ಈ ರೀತಿಯಾಗಿ ಪಲ್ಲಟಗೊಳಿಸಲು ಬೇರೆ ಹಾದಿಗಳಿವೆಯಲ್ಲವೆಂದು ಸೂಚಿಸಿದಾಗ,— 'Of course. But dancing is also one of them' (ಅದು ಸರಿ. ಆದರೆ ನೃತ್ಯವೂ ಒಂದು ಹಾದಿ.) ಎಂದು ಹೇಳಿದರು. ಆದರೆ ಒಮ್ಮೊಮ್ಮೆ ನೃತ್ಯವನ್ನು ಸೇರಿದ ಮನುಷ್ಯನ ಪತನವಾಗಬಹುದಲ್ಲವೆಂದು ಕೇಳಿದಾಗ,— "It depends on the partner you get. She can mislead you if she wants to. But college girls are generally respectable" (ಅದೆಲ್ಲ ಜೊತೆಗಾತಿಯನ್ನವಲಂಬಿಸಿದೆ. ಅವಳ ಮನಸ್ಸೇ ಇದ್ದರೆ ಅವಳು ನಿಮ್ಮನ್ನು ತಪ್ಪು ಹಾದಿಗೂ ಒಯ್ಯಬಹುದು. ಆದರೆ ಕಾಲೇಜ ಹುಡುಗಿಯರು ಸಾಮಾನ್ಯವಾಗಿ ಸಭ್ಯರಾಗಿರುತ್ತಾರೆ.) ಎಂದು ಹೇಳಿದರು.

* * * *

ಇಲ್ಲಿ ಮುಂಬಯಿ ಇಲಾಖೆಯಿಂದ ಬಂದ ದಂಪತಿಗಳಿದ್ದಾರೆ. ಗಂಡನು ವಯಸ್ಸಾದರೂ ಕಲಿಯುವ ಮನಸ್ಸುಳ್ಳವ. ಹೆಂಡತಿಗೆ ಇಂಗ್ಲಿಷಿನ ಗಂಧವು ಸಹ ಇಲ್ಲ. ಆದರೂ ಪತಿಯನ್ನು ಬೆನ್ನಟ್ಟಿ ಬಂದಿದ್ದಾಳೆ. ಆದಷ್ಟು ಮಿತವ್ಯಯದಿಂದ ಇದ್ದು ಹೋಗಬೇಕೆಂದು ಅವರ ಪ್ರಯತ್ನವಿದೆ. ಕಾರಣ ಅವರು ಚಳಿಗಾಲದಲ್ಲಿ ಕೋಣೆಯಲ್ಲಿಯ 'Fire' ಸಹ ಹೊತ್ತಿಸುವದಿಲ್ಲ. ತಮ್ಮ ತಮ್ಮ ಹಾಸಿಗೆಯೊಳಗೆ ತುಂಬ ಹೊದ್ದುಕೊಂಡು ಕೂಡುತ್ತಾರೆ. ಭೆಟ್ಟಿಯಾಗಲು ಹೋದವರಿಗೆ,- ಇವರಿಗೆ ಜಡ್ಡಾಗಿದೆಯೆಂಬ ಸಂಶಯವು ಬರುತ್ತದೆ.

* * * *

೨೬—೨—೩೭

ಶೇಕ್ಸಪಿಯರನ **Twelfth Night** ಎಂಬ ನಾಟಕದ ಪ್ರಯೋಗವನ್ನು ನೋಡಲು ಹೋಗಿದ್ದೆ. 'Voila' ಹಾಗು 'Sebastian' ಎಂಬ ಇಬ್ಬರು ಅಣ್ಣ-ತಂಗಿಯರು 'One dress, one form and one Voice' (ಒಂದೇ ವೇಷ, ಒಂದೇ ರೂಪ, ಒಂದೇ ಧ್ವನಿ) ಇದ್ದುದನ್ನು ಬಹಳ ಚೆನ್ನಾಗಿ ಕಂಡುಬರುವಂತೆ ನಟ-ನಟಿಯರನ್ನು ಆರಿಸಿದ್ದರು. ವಿದೂಷಕನ ಹಾಡುಗಳಲ್ಲಿ ಉತ್ತಮ ಸಂಗೀತವು ತುಂಬಿ ತುಳುಕುತ್ತಿತ್ತು. ಸರ್ ಟೋಬಿ ಮೊದಲಾದವರು ಮಾಲ್‌ವ್ಹೋಲಿಯನ ವಿರುದ್ಧ ಹೂಡಿದ ಸಂಚು,- ಮಾಲ್‌ವ್ಹೋಲಿಯೋನು ಟೋಬಿ ಮೊದಲಾದವರನ್ನು ಗಲಭೆಗಾಗಿ ಬಯ್ದುದರ ಪ್ರತಿಫಲವೆಂಬುದು ಪ್ರಯೋಗದಿಂದ ಸ್ಪಷ್ಟವಾಗುತ್ತದೆ. ಕೊನೆಯ ಪ್ರವೇಶದಲ್ಲಿಯ ಅಶಕ್ಯ ಸನ್ನಿವೇಶಗಳ ಮೂಲಕ ಅದು ಮನಸ್ಸನ್ನು ಅಷ್ಟೊಂದು ಹಿಡಿಯುವದಿಲ್ಲ.

* * * *

ಇಲ್ಲಿಯ 'Zoological' ತೋಟಗಳಿಗೆ ಹೋಗಿದ್ದೆ. ಪ್ರಕೃತಿಯ ಅದ್ಭುತ ಚಮತ್ಕಾರಗಳನ್ನು ನೋಡಬೇಕಾದರೆ ಇಲ್ಲಿಗೆ ಹೋಗಬೇಕು. ಮಂಗನ ಮನೆಯಲ್ಲಿ ಅನೇಕ ಕೋತಿಗಳು ವಾಸವಾಗಿವೆ. ಸಿಂಹಶಾಲೆಯಲ್ಲಿ ಒಂದೇಸವನೆ ಗರ್ಜನೆಯಾಗುತ್ತದೆ. ಕೆಂಡದಂಥ ಕಣ್ಣುಗಳನ್ನು

ಹುಲಿಗಳು ನಿಂತಿರುತ್ತವೆ. ಒಂಟೆಗಿಂತ ಉದ್ದವಾದ ಗೋಣಿನ ‘Giraffe’ ಎಂಬ ಪ್ರಾಣಿಯು ಮುಗಿಲಿನೊಳಗಿಂದ ನಮ್ಮನ್ನು ನೋಡುವದು! ‘Pole-cat, polar bear, hyena, porcupine, hippopotamus, guerilla, rhinoceras’ ಮುಂತಾದ ಅನೇಕ ಪ್ರಾಣಿಗಳು ಕಣ್ಣಿಗೆ ಬೀಳುತ್ತವೆ. ನಾಗಶಾಲೆಯಲ್ಲಿಯ ಹಾವುಗಳೂ ಸಹ ನೋಡುವ ಹಾಗಿವೆ. ನೀರುಹಾವಿನ ಕುಂಡದಲ್ಲಿ ಜೀವವಿದ್ದ ಮೀನಗಳನ್ನು ಬಿಟ್ಟು ತಿನ್ನಿಸುತ್ತಾರೆ,– ಇದೊಂದು ಈ ತೋಟಗಳಲ್ಲಿಯ ಕಲಂಕ. ಇಲ್ಲದಿದ್ದರೆ ಎಲ್ಲ ಪಶು–ಪಕ್ಷಿಗಳನ್ನು ಪ್ರೀತಿಯಿಂದ ಸಾಕುತ್ತಾರೆ. ಪ್ರತಿಯೊಂದು ಪ್ರಾಣಿಯ ಸುತ್ತಲು ಅದಕ್ಕೆ ಸರಿಯಾದ ಪ್ರಕೃತಿಭಿತ್ತಿಯನ್ನು ನಿರ್ಮಿಸಿರುತ್ತಾರೆ. ಇಲ್ಲಿಯ ‘acquarium’ ದಲ್ಲಿ ಬಣ್ಣಬಣ್ಣದ ಜಿನುಗು ಮೀನಗಳ ಜಾತ್ರೆಯು ನೆರೆದಿರುತ್ತದೆ. ಶುಕಗೃಹವನ್ನು ಹೊಕ್ಕೊಡನೆ, ಬಣ್ಣಬಣ್ಣದ ಗಿಳಿಗಳು ಕಾಣುತ್ತವೆ: ‘Hullo! hullo!’ ಎಂದು ಕೂಗಿಕೊಳ್ಳುತ್ತವೆ. ಸೃಷ್ಟಿಯ ರೂಪ-ಕುರೂಪಗಳನ್ನು–ಅದ್ಭುತವಾದ ಅನಂತತೆಯನ್ನು–ಇಲ್ಲಿ ಕೆಲವು ಮುಟ್ಟಿಗೆ ಕಾಣಬಹುದು.

* * * *

೨೭–೩–೩೭

ನಮ್ಮ ಪ್ರೀತಿಯನ್ನು ಪರಕೀಯರೆದುರಿಗೆ ವ್ಯಕ್ತಪಡಿಸಬಾರದು. ಇಲ್ಲಿ ದಂಪತಿಗಳಿಬ್ಬರು ಕಣ್ಣಿಗೆ ಬಿದ್ದರು: ನಾಲ್ಕಾರು ಮಂದಿ ಪರಿಚಿತರು ಕೂಡಿ ಕುಳಿತಲ್ಲಿ ಹೆಂಡತಿಯು ಗಂಡನ ಮೇಲಿದ್ದ ಪ್ರೀತಿಯನ್ನು ತನ್ನ ಮಾತಿನಲ್ಲಿ–ರೀತಿಯಲ್ಲಿ–ವ್ಯಕ್ತಗೊಳಿಸಿದಳು. ಇದರಿಂದ ಈ ಪ್ರೀತಿಯ ಪಾವಿತ್ರ್ಯಕ್ಕೆ ಭಂಗಬರುತ್ತದೆ. ಅಲ್ಲದೆ ಉಳಿದವರ ಮನಸ್ಸು ನೋಯುತ್ತದೆ.

೫೬

೨೮–೩–೩೭

ನಮ್ಮಲ್ಲಿಯಂತೆ ಹಬ್ಬಕ್ಕೊಮ್ಮೆ ಇಲ್ಲಿ ಜಾತ್ರೆಗಳಾಗುತ್ತವೆ. ಈಗ ಈಸ್ಟರ ಹಬ್ಬದ ನಿಮಿತ್ತವಾಗಿ ಹ್ಯಾಂಪ್‌ಸ್ಟೆಡ್ ಬೈಲಿನಲ್ಲಿ ಒಂದು ದೊಡ್ಡ ಜಾತ್ರೆಯು ಕೂಡಿದೆ. ಲಂಡನ್ನಿನಲ್ಲಿಯ ನೂರಾರು ಜನರು ಮೋಜಿಗಾಗಿ ಇಲ್ಲಿ ಬರುತ್ತಾರೆ. Merry-gorownd,— ಅಂದರೆ ಗಿರ್ರೆಂದು ಸುತ್ತಲು ತಿರುಗುವ ಕಬ್ಬಿಣದ ಕುದುರೆಗಳು, ಮೋಟರುಗಳು; ರೊಕ್ಕ ಹಚ್ಚಿ ಆಡುವ ಅನೇಕ ಆಟಗಳು; ಜಾರುಗಟ್ಟೆಯಂತೆ ಉಪಯೋಗಿಸುವ ಎತ್ತರವಾದ ಕಟ್ಟಡವೊಂದು,– ಹೀಗೆ ಅನೇಕ ವಿಚಿತ್ರಗಳಿವೆ. 'The Great Indian torture' ಎಂದು ಒಂದು ಮೋಜಿದೆ. ಇದರ ಏರ್ಪಾಟು ಮಾಡಿದವನು ಅಮೇರಿಕನ್ ಇಂಡಿಯನ್ನರ ಹಾಗು ನಮ್ಮ ನಡುವೆ ಯಾವ ಭೇದವನ್ನೂ ಕಂಡು ಹಿಡಿದಂತೆ ತೋರಲಿಲ್ಲ. ಎರಡೂ ಜನಾಂಗ ಗಳ ಚಿತ್ರಗಳನ್ನು ಹೊರಗೆ ತೂಗು ಹಾಕಿದ್ದಾನೆ. ದುಡ್ಡು ಕೊಟ್ಟು ಹೋದಾಗ ಒಳಗೆ ಕಾಣುವದು,– ಕೆಲವು ಕಠಾರಿಗಳು ಮಾತ್ರ! ಅನೇ ಕರು 'Monkey-nuts' ಅಂದರೆ ನೆಲಗಡಲೆಯನ್ನು ತಿನ್ನುತ್ತ ತಿರು ಗಾಡುತ್ತಾರೆ. ವಿಲಾಸಕ್ಕೆ ಮನಸೋತವರಿಗೂ ಇಲ್ಲಿ ಬೇಕಾದಷ್ಟು ಆಸ್ಪದವಿದೆ. 'The Miracle Maid...a daring french demonstration of science and art; five nights in five minutes of life' (ಪವಾಡ ಮಾಡುವ ಕನ್ಯೆ: ಫ್ರೆಂಚ್ ವಿಜ್ಞಾನ ಮತ್ತು ಕಲೆಯ ಅತಿ ಸಾಹಸದ ಪ್ರದರ್ಶನ; ಐದು ನಿಮಿಷಗಳಲ್ಲಿ ಐದು ರಾತ್ರಿಗಳ ಚಮತ್ಕಾರ) ಎಂದು ಒಂದು ದೊಡ್ಡ ಬೋರ್ಡನ್ನು ನೋಡಿದೆ. ಒಳಗೆ ಹೋಗಲು ಮಾತ್ರ ಪ್ರಯತ್ನಿಸಲಿಲ್ಲ! 'A real mermaid half-fish and half-woman' (ನಿಜವಾದ ಜಲದೇವತೆ: ಅರ್ಧ ಮೀನ ಅರ್ಧ ಹೆಣ್ಣು;) ಎಂದು ಇನ್ನೊಂದು ಪಾಟಿಯಿತ್ತು. ಅದನ್ನೂ ನೋಡಲಿಲ್ಲ! ಇಲ್ಲಿಯ

ಅನೇಕ ಸಾಹಿತಿಗಳು ಸಹ ಇಂಥ ಅನೇಕ ಜಾತ್ರೆಗಳಲ್ಲಿ ಕಲೆಯುತ್ತಾರೆ: They become indiscreet in a few fairs! (ಕೆಲಕೆಲವು ಜಾತ್ರೆಗಳಲ್ಲಿ ಅವರೂ ವಿವೇಕಹೀನರಾಗುತ್ತಾರೆ)

* * * *

೨೯-೩-೩೭

ನನ್ನ ಪರಿಚಿತರೊಬ್ಬರು ಹೇಳಿದರು: ತಮ್ಮ ಸ್ನೇಹಿತರೊಡನೆ ಅವರು ಒಂದು ಶಾಂತವಾದ ಸಂಜೆಯ ಹೊತ್ತಿಗೆ (ಸಪ್ಟಂಬರ್ ತಿಂಗಳಲ್ಲಿ) ಹಾಯಿಡ್ ಪಾರ್ಕಿಗೆ ಹೋಗಿದ್ದರು. ಅಲ್ಲಿಯ ಸರ್ಪಂಟಾಯಿನ್ ಸರೋವರದ ಹತ್ತಿರ 'Love-garden'ದಲ್ಲಿ ಉದಿಸುತ್ತಿರುವ ಚಂದ್ರನನ್ನು ನೋಡುತ್ತ ಕುಳಿತಿದ್ದರು. ಅವರಿಗೆ ಪಾರ್ಕಿನ ಇತಿಹಾಸವು ಗೊತ್ತಿರಲಿಲ್ಲ. ಆಗ ಅಲ್ಲಿಯೇ ಅಲೆಯುತ್ತಿದ್ದ ಒಬ್ಬ ಆಂಗ್ಲ ಯುವತಿಯು ಅವರ ಕಡೆಗೆ ಒಂದಳು. 'What is the time?' (ಹೊತ್ತೆಷ್ಟು?) ಎಂದು ಕೇಳಿದಳು. ಏನೂ ಗೊತ್ತಿಲ್ಲದ ಇವರು ಗಡಿಯಾಳವನ್ನು ನೋಡಿ ಆದ ಹೊತ್ತನ್ನು ತಿಳಿಸಿದರು, 'It is a beautiful moon, is'nt it?' (ಚಂದ್ರಮ ಎಷ್ಟು ಚೆಂದ! ಅಲ್ಲವೇ?) ಎಂದು ಆ ಪ್ರಾಣಿ ಕೇಳಿದಳು. 'Yes' (ಹೌದು) ಎಂದು ಸಂಶಯಗ್ರಸ್ತರಾಗಿ ಇವರು ಉತ್ತರ ಕೊಟ್ಟರು. ಕೆಲವು ಹೊತ್ತು ಸುಮ್ಮನೆ ನಿಂತು ಆಮೇಲೆ ಆ ಹೆಣ್ಣು ಮಗಳು ಸಂಕೋಚವಿಲ್ಲದೆ 'Don't you want to make love to me?' (ನನ್ನೊಡನೆ ನಿಮಗೆ ಸ್ವಲ್ಪ ಸರಸ ಬೇಡವೆ?) ಎಂದು ಕೇಳದಳು. ಆಗ ನನ್ನ ಪರಿಚಿತರು ಗಾಬರಿಯಾದರು. ಅವರ ಸ್ನೇಹಿತನು ವಿನೋದಿ. 'What is the price of your love?' (ಆಗಲಿ, ನಿಮ್ಮ ಸರಸದ ಬೆಲೆ ಎಷ್ಟು?) ಎಂದು ಕೇಳಿದ. 'Well. Not particular. I usually take one guinea for a night. But I don't mind anything you give out of love,—Ten shillings or even five shillings' (ಇದು ನೋಡಿ, ನಾನು ಅಷ್ಟು ಕಟ್ಟುನಿಟ್ಟಿನವಳಲ್ಲ. ಸಾಮಾನ್ಯವಾಗಿ ಒಂದು ರಾತ್ರಿಗೆ ಒಂದು 'ಗಿನಿ' ನಾನು ತಕ್ಕೊಳ್ಳುವದು. ಇನ್ನು ನಿಮಗೆ ಪ್ರೀತಿ ಬಂದಷ್ಟು ನೀವು ಕೊಡಿ. ಹತ್ತು ಶಿಲಿಂಗು, ಹೋಗಲಿ, ಐದು ಶಿಲಿಂಗು

ಕೊಟ್ಟರೂ ಸಾಕು. ) ಎಂದು ವ್ಯವಸ್ಥಿತವಾಗಿ ಆ ಯುವತಿಯು ಉತ್ತರ ಬಂದಿತು. 'I never thought that love was so cheap' ( ಪ್ರೀತಿ ಇಷ್ಟು ಅಗ್ಗವಾಗಿದೆ ಎಂದು ನನಗೆ ಗೊತ್ತಿರಲಿಲ್ಲ. ) ಎಂದನು ಆ ಸ್ನೇಹಿತ. ಪರಿಚಿತರು ಸಾತ್ವಿಕ ಸಂತಾಪದಿಂದ ಉತ್ತರಕೊಟ್ಟರು : 'You have lighted on the wrong persons. Better go and try for the next catch.' ( ಪಾಪ, ನೀವು ತಪ್ಪು ಮಂದಿಯನ್ನು ಆರಿಸಿಕೊಂಡು ಬಂದಿರಿ. ಬೇರೆ ಎಲ್ಲಾದರೂ ಹೋಗಿ ನಿಮ್ಮ ಬಲೆ ಬೀಸಿ. )

ಆಮೇಲೆ ಅಲ್ಲಿಂದ ಇಬ್ಬರೂ ಎದ್ದು ಹೊರಡುವಾಗ ಆ ಯುವತಿಯು ಮತ್ತೆ ಸಮೀಪಿಸಿ ಹೇಳಿದಳು : 'I congratulate you. You are the first Indians to escape me.' ( ಭಲೆ, ಧನ್ಯರು ನೀವು ! ನನ್ನ ಹಿಡಿತ ತಪ್ಪಿಸಿಕೊಂಡ ಹಿಂದೀಯರಲ್ಲಿ ನೀವೇ ಮೊದಲು.

* * * *

೩೧–೩–೩೭

**Romeo & Juliet** ಚಲಚ್ಚಿತ್ರವನ್ನು ನೋಡಿದೆ. ವಿಮರ್ಶೆಯಲ್ಲಿಯ ವೈಚಿತ್ರ್ಯವೆಂದು ಇದನ್ನು ಬರೆಯುತ್ತಿದ್ದೇನೆ. ಕಾವ್ಯವೆಂದು ಓದಿದಾಗ ಒಂದೊಂದು ಸಲ ಶೇಕ್ಸಪಿಯರನ ಶ್ರೇಷ್ಠ ಕೃತಿಗಳಿಗಿಂತ ಇದು ಉತ್ತಮವೆಂದು ಎನಿಸುತ್ತದೆ. ಇದರಲ್ಲಿಯ ಶೃಂಗಾರದಲ್ಲಿ ಅಷ್ಟೊಂದು ಪಾವಿತ್ರ್ಯವಿದೆ. ನಾಟಕದ ಪ್ರಯೋಗವನ್ನು ನೋಡಿದಾಗ ದ್ವಂದ್ವಯುದ್ಧ–ನ್ಯಾಯಗಳ ಜಂಜಾಟವೇ ಹೆಚ್ಚಾಗಿ ಕಾವ್ಯದ ಬೆಳಕು ಮಸಕಾಗುತ್ತದೆ. ಬಡಿದಾಟಗಳೂ ಅಷ್ಟೊಂದು ವಾಸ್ತವಿಕವಾಗುವದಿಲ್ಲ: 'York and Lancaster's long jars' ಎಂದು ಬೆನ್ ಜಾನ್ಸನ್ನನು ಬರೆದಿದ್ದಾನಲ್ಲ ! ಚಲಚ್ಚಿತ್ರವನ್ನು ನೋಡಿದಾಗ ಒಂದು ಹೆಚ್ಚಿನ ಪರಿಣಾಮವು ಇದೆ. ಅಂದಿನ ಸಾಮಾಜಿಕ ದೃಶ್ಯಗಳು, ಜುಲಿಯಟ್ಟಳ ನೃತ್ಯಶಾಲೆ ( Oh! she doth teach the torches to burn bright; ),–– (ಅಹಾ! ಪಂಜುಗಳಿಗೆ ಬೆಳಕು ಬೀರುವುದ ಕಲಿಸುವವಳು. ) ಇವೆಲ್ಲ ಮನಸ್ಸಿನಲ್ಲಿ ಬಿಂಬಿಸುತ್ತವೆ. ದಾಯಿಯು ಹಾಗು ಮರ್ಕ್ಯೂಶಿಯೋನ ಸ್ವಭಾವಗಳು

ಮಸದಟ್ಟಾಗುತ್ತವೆ. ಆದರೆ ಆ ವಿಷಪ್ರಯೋಗ,- ಜುಲಿಯಟ್ಟಳು ಕಠಾರಿಯಿಂದ ಇರಿದುಕೊಂಡು ಸಾಯುವದು,- ಕಥಾವಸ್ತುವಿನ ಅಸಂಭಾವ್ಯತೆಯೆಲ್ಲ ಕಣ್ಣಿಗೆ ಸ್ಫುಟವಾಗಿ ಕಾವ್ಯದ ಸೌಂದರ್ಯವು ಮಲಿನವಾಗುತ್ತದೆ.

*　　*　　*　　*

೧-೪-೩೭

ಎಡಿನ್‌ಬರೋದಲ್ಲಿದ್ದ ನನ್ನ ಪರಿಚಿತರೊಬ್ಬರು ತಾವಿದ್ದ ಮನೆಯಲ್ಲಿ ನಡೆದ ಸಂಗತಿಯೊಂದನ್ನು ಹೇಳುತ್ತಿದ್ದರು. ಆ ಮನೆಯ ಯಜಮಾನನು ಸುಮಾರು ೩೦ ವರ್ಷದವ. ಒಳ್ಳೇ ವಿನೋದಿ. ಆದರೆ ಕುಡಿಯುವ ಚಟ ಹೆಚ್ಚು. ಯಜಮಾನಿಗೆ ಸುಮಾರು ೨೭ ವರ್ಷ. ಗಂಡನು ಕುಡಿಯುವದು ಆಕೆಯ ಮನಸ್ಸಿಗೆ ಬರುವದಿಲ್ಲ. ಮತ್ತೇನು? ದಿನಬೆಳಗಾದರೆ ಜಗಳಕ್ಕೆ ಆರಂಭ! 'You are very jolly; quite good' (ನೀವು ಒಳ್ಳೇ ಉಲ್ಲಾಸಿಗಳು. ಹೀಗೇ ಇರಬೇಕು.) ಎಂದು ನನ್ನ ಪರಿಚಿತರು ಯಜಮಾನನಿಗೆ ಹೇಳಿದರೆ, ಆತನು ಅರ್ಧ ಒಪ್ಪಿಕೊಂಡು 'But wife does not think so' (ಆದರೆ ನನ್ನ ಹೆಂಡತಿಯ ಅಭಿಪ್ರಾಯ ಹೀಗಿಲ್ಲ) ಎಂದು ಹೆಂಡತಿಯು ಇದ್ದೆಡೆಗೆ ಬೊಟ್ಟುಮಾಡಿ ತೋರಿಸುವನು! ರಾತ್ರಿಯೆಲ್ಲ ಬಡಿದಾಟ. ಒಂದು ದಿನ ಯಜಮಾನಿಯು ಆವೇಶದಿಂದ ಪರಶುರಾಮನಂತೆ ಕೊಡಲಿಗೆ ಕೈಹಾಕಿದಳು! ಇನ್ನೊಂದು ರಾತ್ರಿ-ಸುಮಾರು ಒಂದು ಗಂಟೆಯಾಗಿತ್ತು. ಇವರ ಜಗಳಕ್ಕೆ ಕಳೆ ಬಂದಿತ್ತು. 'I will call the police' (ನಾನು ಪೋಲೀಸರನ್ನು ಕರೆಯುತ್ತೇನೆ.) ಎಂದು ಯಜಮಾನಿಯು ರಂಬಾಟ ಮಾಡುತ್ತ ಹೊರಗೆ ಬರುವದನ್ನು ಕೇಳಿ ನನ್ನ ಪರಿಚಿತರು ಗಡಿಬಿಡಿಸಿ ಎಚ್ಚತ್ತರು. ಎದ್ದು ಕೋಣೆಯ ಬಾಗಿಲ ತೆರೆದು ನೋಡಿದರು. ಅಲ್ಲಿ ಯಜಮಾನಿಯು ದಿಗಂಬರಳಾಗಿ ಒಂದಿಷ್ಟು ಅರಿವೆಯಿಲ್ಲದೆ ನಿಂತಿದ್ದಳು! 'I am sorry' (ಛೀ, ಛೀ, ತಪ್ಪಿದೆ.) ಎಂದು ನನ್ನ ಪರಿಚಿತರು ಮತ್ತೆ ತಮ್ಮ ಕೋಣೆಯನ್ನು ಹೊಕ್ಕರು. ಮರುದಿವಸ ಮುಂಜಾನೆ ಎಲ್ಲರೂ ಫಲಾಹಾರಕ್ಕೆ ಕುಳಿತಾಗ ಯಜಮಾನನು ನಗುತ್ತ, "Well, Mr.—! how do you like the figure of

my wife?" (ಏನು ರಾಯರೆ, ನನ್ನ ಹೆಂಡತಿಯ ಆಕೃತಿ ಎಷ್ಟೇನು ಮನಸಿಗೆ ಬಂತು?) ಎಂದು ಕೇಳಿದನು.

* * * *

ಒಬ್ಬ ಶ್ರೀಮಂತ ಭಾರತೀಯ ವಿದ್ಯಾರ್ಥಿಯು ಇಲ್ಲಿ ಆತ್ಮಹತ್ಯೆ ಮಾಡಿಕೊಂಡ. ಏಕಾಂತದ ಭಯವೇ ಅದರ ಕಾರಣವಾಗಿರಬೇಕು. ಇನ್ನೊಬ್ಬನು ಆಸ್ಪತ್ರೆಯಲ್ಲಿ ಹಾಸಿಗೆ ಹಿಡಿದು ಸರಿಯಾಗಿ ಹದಿನಾರು ತಿಂಗಳಾಗಿತ್ತು. ಇನ್ನೊಂದು ಮಗ್ಗುಲಿಗೆ ಹೊರಳಲು ಬರುತ್ತಿರಲಿಲ್ಲ. ಹೃದಯವಿಕಾರದಿಂದ ನಿನ್ನೆ ತೀರಿಕೊಂಡ. ಈಗ ಒಂದು ವರ್ಷದ ಹಿಂದೆಯೇ ತೀರುವನೆಂದು ಡಾಕ್ಟರರು ಹೇಳಿದ್ದರು. ಕೇವಲ ಇಚ್ಛಾಶಕ್ತಿಯಿಂದ ಇಲ್ಲಿಯವರೆಗೆ ಕಣ್ಣಿನಲ್ಲಿ ಜೀವವನ್ನು ಹಿಡಿದುಕೊಂಡಿದ್ದ.

---

೫೭

ಆಕ್ಸಫರ್ಡ ಹಾಗು ಕೇಂಬ್ರಿಜ್ಜಿನ ದೋಣಿಯ ಪಂದ್ಯಾಟವು ಜಗತ್ಪ್ರಸಿದ್ಧವಾಗಿದೆ. ಪ್ರತಿ ವರ್ಷ ಮಾರ್ಚ ತಿಂಗಳಲ್ಲಿ ಲಂಡನ್ನಿಗೆ ಸಮೀಪಿಸಿ ಹರಿಯುವ ಥೇಮ್ಸ್ ನದಿಯ ಮೇಲೆ ಈ ಪಂದ್ಯಾಟವು ಜರಗುತ್ತದೆ. ನೋಡಲು ಸಾವಿರಾರು ಜನರು ಸಾಲು ಸಾಲಾಗಿ ಎರಡೂ ದಂಡೆಗಳ ಮೇಲೆ ನೆರೆಯುತ್ತಾರೆ. ಅನೇಕರು ಉಗಿದೋಣಿಗಳಲ್ಲಿ ಸೇರಿ ಹುಟ್ಟುಹಾಕುವದು ಮುಗಿಯುವ ನಿರ್ಣಯಸ್ಥಾನಕ್ಕೆ ಬಂದು ನಿಲ್ಲುತ್ತಾರೆ. ಯಾವ ವಿಶ್ವವಿದ್ಯಾಲಯದವರು ಗೆಲ್ಲಬಹುದೆಂದು ಅನೇಕರು ಜಿದ್ದು ಕಟ್ಟುತ್ತಾರೆ. ಸಾವಿರಾರು ಪೌಂಡು ಹೀಗೆ ಜಿದ್ದಿಗಾಗಿ ಖರ್ಚಾಗುತ್ತವೆ! ಕೇಂಬ್ರಿಜ್ ದೋಣಿಯ ಬಣ್ಣ ತಿಳಿನೀಲಿ; ಆಕ್ಸಫರ್ಡದ್ದು ಕರಿನೀಲಿ. ಸಣ್ಣ ಹುಡುಗರು ತಿಳಿನೀಲಿ ಇಲ್ಲವೆ ಕರಿನೀಲಿ ನಿಶಾನೆಗಳನ್ನು ಹಿಡಿದು ತಮ್ಮ ಪಕ್ಷವನ್ನು ಸಮರ್ಥಿಸಿ ಕೇಕೆ ಹಾಕುತ್ತಾರೆ. ದೊಡ್ಡವರು ತಮ್ಮ ಪಕ್ಷದ ಬಣ್ಣದ ಅರಿವೆ–ಹೂಗಳನ್ನು ಕೋಟಿನ ಮೇಲೆ

ಹಚ್ಚುತ್ತಾರೆ. ಈ ಹೂವುಗಳನ್ನು ಮಾರುವವರು ‘Go od luck,sir!’ (ರಾಯರೆ, ಶುಭವಾಗಲಿ, ಇಕೊಳ್ಳಿ.) ಎಂದು ಇಂಥ ಹೂವುಗಳನ್ನು ಮಾರದೆ ಬಿಡುವದಿಲ್ಲ! ಅಂತೂ ಈ ಪಂದ್ಯಾಟವೆಂದರೆ ಲಂಡನ್ನಿಗೆ ಒಂದು ಹಬ್ಬ; ಬ್ರಿಟನ್ನಕ್ಕೆ ಹೃದಯವನ್ನು ಕಂಪಿಸುವಂತಹ ಸುದ್ದಿ; ಜಗತ್ತಿಗೆ ಮೋಜಾಡ ವರ್ತಮಾನ.

ಆದರಲ್ಲಿ ಇಲ್ಲಿಯವರೆಗೆ ಹದಿಮೂರು ವರ್ಷ ಆಕ್ಸ್‌ಫರ್ಡದವರು ಸೋತಿದ್ದರು,–ಒಂದೇ ಸಮನೆ! ಹುಟ್ಟುಹಾಕುವ ಕಲೆಯಲ್ಲಿ ಸಂಭವಿಸಿದ ಸುಧಾರಣೆಗಳನ್ನು ಅವರು ಉಪಯೋಗಿಸಿದ್ದಿಲ್ಲ. ಈ ವರ್ಷ ಮಾತ್ರ ಹೊಸ ರೀತಿಯನ್ನು ಅನುಸರಿಸಿದ್ದರು. ಅಲ್ಲದೆ ‘ವಿಸ್ಸರ್’ ಎಂಬ ವಿದ್ಯಾರ್ಥಿಯೂ ಆ ವಿದ್ಯೆಯಲ್ಲಿ ತೀರ ಒಲ್ಲಿದನು. (ಇವನು ಕವಿ. ೧೯೩೬ರಲ್ಲಿ ನ್ಯೂಡಿಗೇಟ್ ಇನಾಮನ್ನು ಪಡೆದವ). ಕಾರಣ ಆಕ್ಸ್‌ಫರ್ಡಿನ ವಿಜಯವು ನಿಶ್ಚಿತವೆಂದು ಮೊದಲಿನಿಂದ ವರ್ತಮಾನಪತ್ರಗಳು ಸಾರುತ್ತಿದ್ದವು.

ಪ್ರತಿಯೊಂದು ದೋಣಿಯಲ್ಲಿ ಎಂಟು ಮಂದಿ ಹುಟ್ಟುಹಾಕುವವರು. ಎಲ್ಲಕ್ಕೂ ಮುಂದಿನವನಿಗೆ ‘Stroke’ ಎಂದು ಹೆಸರು. ಇವನ ಕೆಲಸವು ಬಹಳ ಮಹತ್ವದ್ದು. ಇವನ ಒತ್ತರವೇ ಉಳಿದವರ ಒತ್ತರ. ಇವನು ಹಾಕಿದ ಹುಟ್ಟಿಗೆ ಉಳಿದವರು ‘ಸೋ’ ಎನ್ನಬೇಕು. ಹಿಂದಿನವನಿಗೆ ‘Bow’ ಎಂದು ಹೆಸರು. ದೋಣಿಯು ಹೋಗುವ ದಿಕ್ಕನ್ನು ಗೊತ್ತುಮಾಡುವವನು ಅದರ ಹುರಿಗಳನ್ನು ಕೈಯ್ಯಲ್ಲಿ ಹಿಡಿದು ಎಲ್ಲಕ್ಕೂ ಹಿಂದೆ ಕುಳಿತಿರುತ್ತಾನೆ. ಈತನನ್ನು ‘Cox’ ಎಂದು ಕರೆಯುತ್ತಾರೆ; ಇವನನ್ನು ಹಿಡಿದು ದೋಣಿಯಲ್ಲಿರುವವರು ೯ ಮಂದಿ.

ಈ ಪಂದ್ಯಾಟವು ನಾಲ್ಕು ಮೈಲಿನವರೆಗೆ ನಡೆಯುತ್ತದೆ. ಸುಮಾರು ೨೦ ನಿಮಿಷಗಳಲ್ಲಿ ಮುಗಿದು ಹೋಗುತ್ತದೆ. ದಂಡೆಗುಂಟ ನಿಂತವರು ಒಂದು ನಿಮಿಷ ಮಾತ್ರ ಎರಡೂ ದೋಣಿಗಳನ್ನು ಕಾಣಬಹುದು. ಆದರೂ ಲೆಕ್ಕವಿಲ್ಲದಷ್ಟು ಜನರು ನೆರೆಯುತ್ತಾರೆ. ಚಿಸ್‌ವಿಕ್ ಪೂಲಿನ ಹತ್ತಿರ ಮುಂದೆ ಬಂದ ದೋಣಿಯೇ ವಿಜಯಶಾಲಿ!

ನಾವು ಚೆಸ್‌ವಿಕ್ ಪೂಲಿನ ಹತ್ತಿರ ಹೋಗಿ ಕುಳಿತೆವು. ಮೊದಲು ಪರೀಕ್ಷಕರ 'Judges' ದೋಣಿಯು ಬಂದಿತು. ಸಣ್ಣ ಸಣ್ಣ ಉಗಿದೋಣಿಗಳಲ್ಲಿ ಕುಳಿತು ಪೋಲೀಸರು ದಂಡೆಗಿದ್ದ ಜನಸಂದಣಿಯನ್ನು ನದಿಯ ಪಾತ್ರದಿಂದ ಹಿಂದಕ್ಕೆ ಸರಿಸುತ್ತಿದ್ದರು. ಸ್ವಲ್ಪ ವೇಳೆಯಲ್ಲಿ ಎಲ್ಲವೂ ಗೊತ್ತಾಗುವದಲ್ಲ! ಸಣ್ಣ ಹುಡುಗರಿಗೇನು ಗೊತ್ತು ಆಕ್ಸಫರ್ಡ-ಕೇಂಬ್ರಿಜ್ಜಿನ ಸ್ಪರ್ಧೆ! ಆದರೂ ತಮ್ಮ ತಂದೆ-ತಾಯಿಗಳು ಸಮರ್ಥಿಸಿದ ಪಕ್ಷವನ್ನು ಹಿಡಿದು ನಿಶಾನೆಗಳನ್ನು ಹಾರಾಡಿಸುತ್ತ 'ಆಕ್ಸಫರ್ಡ!' 'ಕೇಂಬ್ರಿಜ್!' ಎಂದು ಕೂಗಿಕೊಳ್ಳುತಿದ್ದರು.

ಕಡೆಗೊಮ್ಮೆ ಬಂದರ ಮಗ್ಗುಲಿಗೊಂದು ರಭಸದಿಂದ ಸಾಗುತ್ತ ಎರಡೂ ದೋಣಿಗಳು ಬಂದವು. ಕೇಂಬ್ರಿಜ್ಜಿನ ದೋಣಿಯು ತುಸು ಮುಂದಾಗಿತ್ತು. ಹಾಗಾದರೆ ಹದಿನಾಲ್ಕನೆಯ ಸಲವೂ ಆಕ್ಸಫರ್ಡಿಗೆ ಸೋಲು ಬರುವದೇನು? 'Home of lost causes' ನ (ಕಳೆದ ಕಾರ್ಯದ ತವರ್ಮನೆ.) ದೋಣಿಯೂ 'Boat of lost causes' (ಕಳೆದ ಕಾರ್ಯದ ದೋಣಿ) ಆದರೆ? ಪಣದ ಕಟ್ಟೆಯು ಇನ್ನೊಂದು ಫರ್ಲಾಂಗಿನಷ್ಟು ದೂರವಿತ್ತು. ಅಷ್ಟರಲ್ಲಿ ದೈವವು ಆಕ್ಸಫರ್ಡನ್ನು ಎತ್ತಿ ಹಿಡಿಯಿತು. 'Stroke' ಆದವನು ಒಂದು 'Spurt'— ಅಂದರೆ ದೋಣಿಯು ನೀರಿನಲ್ಲಿ ಒಂದು ಜಿಗಿತವನ್ನು ತೆಗೆದುಕೊಳ್ಳುವಂತೆ ಮಾಡಿದನು. ಆಗ ಮುಂಬಡಿಯುಟ್ಟ ಆಕ್ಸಫರ್ಡು ಹಿಂದೆಗೆಯಲಿಲ್ಲ. ಎಲ್ಲರೂ 'ಆಕ್ಸಫರ್ಡ್!' ಎಂದು ಹುಚ್ಚೆದ್ದು ಒದರಿಕೊಂಡರು. ನಾನೂ ಆನಂದದ ಭರದಲ್ಲಿ ಕೂಗಿಕೊಂಡೆ! ನನ್ನ ಕೂಗನ್ನು ಕೇಳಿದ ಆಂಗ್ಲರಿಗೆ 'What is he to Hecuba or Hecuba to him?' (ಇವನಿಗೆ 'ಹೆಕ್ಯೂಬಾ' ಏನಾಗಬೇಕು? 'ಹೆಕ್ಯೂಬಾ' ಇವರಿಗೆ ಇವನಾದರೂ ಏನಾಗಬೇಕು? (ನಿಜ ಸಂಬಂಧವಿಲ್ಲದೆ ಒಬ್ಬರ ಸುಖದುಃಖ ಇನ್ನೊಬ್ಬರಿಗೆ ಆಗುವದೊಂದು ನಾಟಕದ ಮೋಜು.) ಎಂದು ಎನಿಸಿರಬೇಕು! ಆದರೆ ಅದೊಂದು ಉನ್ಮಾದ. ಅದರಲ್ಲಿ ನಾನೂ ಪಾಲುಗಾರನಾಗಿದ್ದೆ. ಬರುವಾಗ ಭಿಕ್ಷುಕರು 'Good luck, sir' (ಶುಭವಾಗಲಿ ದೇವರು,)

ಎಂದು ಟೊಪ್ಪಿಗೆಯನ್ನು ಮುಂದೆ ಮಾಡುತ್ತಿದ್ದರು. ನನ್ನ ಗುರುತಿದ್ದ ವರು ಆಕ್ಸಫರ್ಡಿನ ವಿಜಯಕ್ಕಾಗಿ ತಮಗೆ ಗೊತ್ತಿದ್ದಂತೆ ಅದರ ಪ್ರತಿನಿಧಿ ಯಾದ ನನ್ನನ್ನು ಅಭಿನಂದಿಸುತ್ತಿದ್ದರು. ಅದೊಂದು ಮೋಜು!

ದೇಶದ ತುಂಬೆಲ್ಲ ಈ ವಿಜಯದ ಸುದ್ದಿಯು ಹಬ್ಬಿತು. ಡ್ರಿಂಕ ವಾಟರ್ ಎಂಬ ಪ್ರಸಿದ್ಧ ಕವಿಯು ವಯಸ್ಸಾದವ; ಆಕ್ಸಫರ್ಡಿನ ಗತ ವಿದ್ಯಾರ್ಥಿ. ಈ ವರ್ಷವೂ ದೋಣಿಯ ಪಂದ್ಯಾಟವನ್ನು ನೋಡಲು ಬಂದಿದ್ದ. ತನ್ನ ವಿಶ್ವವಿದ್ಯಾಲಯವು ವಿಜಯವನ್ನು ಸಂಪಾದಿಸಿದ್ದನ್ನು ನೋಡಿ ಅವನಿಗೆ ಹಿಡಿಸಲಾರದಷ್ಟು ಆನಂದ. ಆ ಆನಂದದಲ್ಲಿಯೇ ಮನೆಗೆ ಹೋಗಿ ಮಲಗಿದ. ಹಿಗ್ಗಿನ ಭರವು ಅವನ ಹೃದಯದ ಮೇಲೆ ಭಾರವಾಗಿ ಬಂದಿರಬೇಕು. ಮಲಗಿದಲ್ಲಿಯೇ ತೀರಿಕೊಂಡ!

ಹೀಗಿದೆ ಆಕ್ಸಫರ್ಡ್–ಕೇಂಬ್ರಿಜ್ಜಿನ ದೋಣಿಯ ಪಂದ್ಯಾಟ!

---

## ೫೮

ಲಂಡನ್
೭–೪–೩೭

ಈ ವಾರ ಇಲ್ಲಿ– ಲಂಡನ್ನಿನಲ್ಲಿ– ಮಹರಾಷ್ಟ್ರ ಮಂಡಳದ ಸಭೆ ಯೊಂದು ಜರುಗಿತು. ಇಲ್ಲಿ ಸುಮಾರು ಇನ್ನೂರು ಮಹರಾಷ್ಟ್ರೀಯ ರಿದ್ದಾರೆ. ಸಭೆಗೆ ಮಾತ್ರ ಸುಮಾರು ೫೦ ಜನರು ಬಂದಿದ್ದರು. 'ವಿಲಾಯತಿ ಯಲ್ಲಿ ಭಾರತೀಯ ವಿದ್ಯಾರ್ಥಿಗಳ ಜೀವನ' ಎಂಬ ವಿಷಯದ ಮೇಲೆ ಚರ್ಚೆಯಾಯಿತು. ಚರ್ಚೆಯಾಗುವ ಕಾರಣವೆಂದರೆ,– ಮರಾಠಿ ವರ್ತಮಾನ ಪತ್ರಗಳಲ್ಲಿ ನಡೆದ ಟೀಕೆ! 'ಕೇಸರಿ'ಯಲ್ಲಿ ಇಲ್ಲಿಯ ಹಿಂದೀ ವಿದ್ಯಾರ್ಥಿಗಳ ಅನೀತಿಯನ್ನು ವರ್ಣಿಸಿದ ಲೇಖವೊಂದು ಪ್ರಸಿದ್ಧವಾ ಯಿತು. ಪುಣೆಯ ಸಭ್ಯಗೃಹಸ್ಥರೊಬ್ಬರು ಅದರ 'ಕಟಿಂಗ್'ನ್ನು ಇಲ್ಲಿದ್ದ ತಮ್ಮ ಮಗನಿಗೆ ಕಳಿಸಿದರು! ಸರಿ. ಇದರ ವಿಷಯವನ್ನು ಜವಾಬ್ದಾರಿ ಯಿಲ್ಲದೆ ಟೀಕಿಸಿ ಬರೆಯುವ ಜನರ ವರ್ತನವನ್ನು ಚರ್ಚಿಸಲೆಂದು ಈ ಸಭೆಯು ಕೂಡಿತು.

ಕಾರ್ಯದರ್ಶಿಗಳು ಅದೇನೋ ನನ್ನಲ್ಲಿ ವಿಶ್ವಾಸವಿಟ್ಟು, ಸಭೆಯು ನನ್ನ ಅಧ್ಯಕ್ಷತೆಯಲ್ಲಿ ಜರಗುವದೆಂದು ನೋಟೀಸು ಕಳಿಸಿ ಆ ಮೇಲೆ ನನಗೆ ತಿಳಿಸಿದರು. ನನ್ನ ಮರಾಠಿಯ ನೆಲೆಯನ್ನು ಅವರಿಗೆ ತಿಳಿಸಿ ಇನ್ನೊಬ್ಬರನ್ನು ಅಧ್ಯಕ್ಷರನ್ನಾಗಿ ಆರಿಸಬೇಕೆಂದು ನಾನು ಸೂಚಿಸಿದೆನು; ಬೇಕಾದರೆ ನಾನೂ ಇಂಗ್ಲಿಷಿನಲ್ಲಿ ಮಾತನಾಡಿ ಚರ್ಚೆಯಲ್ಲಿ ಭಾಗ ವಹಿಸ ಬಹುದೆಂದು ಹೇಳಿದೆನು.

ಆದರಂತೆ ಇನ್ನೊಬ್ಬರ ಅಧ್ಯಕ್ಷತೆಯಲ್ಲಿ ಸಭೆಯು ಜರುಗಿತು. ಅಧ್ಯಕ್ಷರು ಪ್ರಾಸ್ತಾವಿಕವಾಗಿ ಮಾತನಾಡಿದ ಮೇಲೆ ಚರ್ಚೆಗೆ ಆರಂಭ ವಾಯಿತು. ಶ್ರೀ. ಬೆಂಗೇರಿ ಎಂಬ ಕನ್ನಡಿಗರೊಬ್ಬರು 'ಸೋಲಿಸಿಟರ'ರಾಗಿ ಇಲ್ಲಿ ನೆಲೆಸಿದ್ದಾರೆ. ಅವರೂ ಸಭೆಗೆ ಬಂದಿದ್ದರು.

ಎಷ್ಟು ಜನ ವಿದ್ಯಾರ್ಥಿಗಳು ಇಲ್ಲಿ ಬರುತ್ತಾರೆ; ಅವರಲ್ಲಿ ಎಷ್ಟು ಮಂದಿ ಯಶಸ್ವಿಯಾಗಿ ಮಾತೃಭೂಮಿಗೆ ಮರಳಿ ಹೋಗುತ್ತಾರೆ; ಹೋದ ಮೇಲೆ ತಮ್ಮ ಹಾಗು ದೇಶದ ಹಿತವನ್ನು ಎಷ್ಟರ ಮಟ್ಟಿಗೆ ಸಾಧಿ ಸುತ್ತಾರೆ,—ಇದರ 'ಖಾನೇಸುಮಾರಿ' ಮಾಡಬೇಕೆಂದು ಒಬ್ಬರು ಹೇಳಿದರು.

ವಿಲಾಯತಿಯೆಂದರೆ ಸ್ವರ್ಗವಲ್ಲ, ಮಲ್ಲಿಗೆಯ ಮಂಟಪವಲ್ಲ,- ಎಂಥ ಮಾನಸಿಕ ಯಾತನೆಯನ್ನು ಅನುಭವಿಸಿ ಇಲ್ಲಿ ಅಭ್ಯಾಸ ಮಾಡ ಬೇಕಾಗುತ್ತದೆಂಬುದನ್ನು ಇಲ್ಲಿಗೆ ಬರುವದಕ್ಕಿಂತ ಮೊದಲು ನಮ್ಮ ವಿದ್ಯಾರ್ಥಿಗಳು ತಿಳಿದಿರಬೇಕು; ಆದಷ್ಟುಮಟ್ಟಿಗೆ ಸ್ವಂತದ ಲಾಭಕ್ಕಾಗಿ ಇಲ್ಲಿಗೆ ಬರುವದನ್ನು ಕಡಿಮೆ ಮಾಡಬೇಕು; ನಮ್ಮ ದೇಶದಲ್ಲಿ ವಿದ್ಯೆ ಯನ್ನು ಹೊಂದಿ ಇಲ್ಲಿಯ ಡಿಗ್ರಿಗೆ ಮರುಳಾಗದೆ—ಪ್ರಯಾಣದಿಂದ ದೊರಕುವ ವೈಶಾಲ್ಯಕ್ಕಾಗಿ ಮಾತ್ರ ಇಲ್ಲಿಗೆ ಬರಬೇಕು; ಎಂದು ನಾನು ಹೇಳಿದೆ.

ಹಿಂದೀ ವಿದ್ಯಾರ್ಥಿಗಳು ಇಲ್ಲಿಗೆ ಬರುವದರಿಂದ ನಮ್ಮ ದೇಶಕ್ಕಾ ಗುವ ದುಡ್ಡಿನ ಹಾನಿ, ಶಕ್ತಿವ್ಯಯ,—ಇವೇ ಮೊದಲಾದ ಮಾತುಗಳೂ ಚರ್ಚೆಯಲ್ಲಿ ಮುಂದೆ ಬಂದವು.

ಒಬ್ಬ ಯುವಕನು ಹೇಳಿದನು: ‘ಇಲ್ಲಿಯ ಹವೆ, ಹೊಸ ವಾತಾವರಣ, ಪರದೇಶದಲ್ಲಿರುವ ಜೀವನ,–ಇದರಿಂದ ಮನಸ್ಸು ಕ್ಷುಬ್ಧವಾಗುತ್ತದೆ. ಏನು ಮಾಡಬೇಕೆಂಬುದು ತಿಳಿಯುವದಿಲ್ಲ. ಒಂದೂವರಿ ವರ್ಷದ ವರೆಗೆ ನಾನು ಸಂಯಮದಿಂದ ಇದ್ದೆ. ಆ ಮೇಲೆ ಮಾತ್ರ ಇಲ್ಲಿಯ ಯುವತಿಯರೊಡನೆ ಸಂಬಂಧ ಬೆಳೆಸಿದೆ. ಇಲ್ಲಿ ಸಮಾಧಾನದಿಂದಿದ್ದು ನಮ್ಮ ಕಾರ್ಯವನ್ನು ಕೊನೆಗಾಣಿಸಿಕೊಂಡು ಹೋಗಬೇಕಾದರೆ,– ನೀವೆಲ್ಲರೂ ಸಹ ಸಂಕೋಚವಿಲ್ಲದೆ ಇಲ್ಲಿಯ ನೃತ್ಯಗಳಲ್ಲಿ ಭಾಗವಹಿಸಬೇಕು; ಯುವತಿಯರೊಡನೆ ಸಂಬಂಧ ಬೆಳೆಸಬೇಕು;’–ಎಂದು ಹೇಳಿದ. ಹಿಂದುಗಡೆ,–ಈ ಯುವಕನ ಲಗ್ನವಾಗಿದೆಯೆಂಬುದು ತಿಳಿಯಿತು. (ಲಗ್ನವಾದವಳು ಸ್ವದೇಶದಲ್ಲಿದ್ದಾಳೆ.)

ಇನ್ನೊಬ್ಬನು ಹೇಳಿದನು: ‘ಭಾರತದಲ್ಲಿದ್ದಾಗ ಸಹ ಯುವತಿಯರೊಡನೆ ನಾನು ಕಾಮಸ್ವಾತಂತ್ರ್ಯದಿಂದ ವರ್ತಿಸುತ್ತಿದ್ದೆ; ಇಲ್ಲಿಯೂ ಅದೇ ರೀತಿಯಾಗಿ ಇದ್ದೇನೆ. ಹಿಂದೂ ಧರ್ಮವನ್ನು ಸುಟ್ಟು ಗಂಗಾ ನದಿಯಲ್ಲಿ ತೇಲಿಬಿಟ್ಟು ಹೊಸ ಜೀವನವೊಂದನ್ನು ಹಿಂದುಸ್ಥಾನದಲ್ಲಿ ಸ್ಥಾಪಿಸಬೇಕು! ಇತ್ಯಾದಿ, ಇತ್ಯಾದಿ.

ಮೂರನೆಯವನೊಬ್ಬನು ಇದಕ್ಕೆ ದನಿಗೂಡಿಸಿದನು.

ವಯಸ್ಸಾದ ಮಹರಾಷ್ಟ್ರೀಯರೊಬ್ಬರು ವಿದ್ಯೆಗಾಗಿ ಇಲ್ಲಿ ಬಂದಿದ್ದಾರೆ; ಅವರು ಸಪತ್ನೀಕರಾಗಿ ಬಂದಿದ್ದಾರೆ. ಪತ್ನಿಗೆ ಸುಮಾರು ೩೫–೪೦ ವರ್ಷಗಳಾಗಿರಬಹುದು; ಅವರು ಮಾತನಾಡಿದರು: ‘ಗಂಡಸರು ನೀವು ಹೇಗೆ ನಡೆದರೂ ಚಿಂತಿ; ಆದರೆ ಒಂದು ಮಾತನ್ನು ಲಕ್ಷ್ಯದಲ್ಲಿಡಿರಿ; ನೀವು ಇಲ್ಲಿ ಪಡೆಯುತ್ತಿರುವ ಸ್ವಾತಂತ್ರ್ಯವನ್ನು–ಅದು ನಿಮಗೆ ಇದ್ದೇ ತೀರಬೇಕಾದರೆ–ನಿಮ್ಮ ಪತ್ನಿಯರಿಗೂ ಕೊಡಿರಿ; ಇಂದಿನ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅದು ಅವರಿಗೆ ದೊರಕದೆ ಹೋದರೆ,–ಮೊದಲು ಆ ಸ್ವಾತಂತ್ರ್ಯವು ಅವರಿಗೆ ದೊರಕುವಂತೆ ಮಾಡಿ, ಆ ಮೇಲೆ ಮನಬಂದಂತೆ ವಿಹರಿಸಿರಿ. ಗಂಡಸರಿಗಿಂತ ಹೆಣ್ಣುಮಕ್ಕಳಲ್ಲಿ ಸಂಯಮವು ಹೆಚ್ಚು.

ನಾನು ಹೇಳುವದು ಲಗ್ನವಾದವರಿಗಿಷ್ಟೇ. ಬ್ರಹ್ಮಚಾರಿಗಳಿಗೆ ಹೇಳುವ ಅಧಿಕಾರವಿಲ್ಲ ನನಗೆ,–ಮನಸ್ಸೂ ಇಲ್ಲ.'

ಸ್ವತಂತ್ರ ಕಾಮೋಪಾಸನೆಯ ಮಾತನ್ನೆತ್ತಿ ನಾನು ಹೇಳಿದೆ: 'ಸ್ವದೇಶದಿಂದ ಇಲ್ಲಿಗೆ ಬಂದೊಡನೆ ನಮ್ಮಲ್ಲಿದ್ದ ಉಚ್ಚ-ನೀಚ ಭಾವಗಳೆಲ್ಲ ಜಾಗೃತವಾಗುತ್ತವೆ. ಇಲ್ಲಿರುವದೆಂದರೆ ನಮ್ಮ ಜೀವನವನ್ನು ಒರೆಗೆ ಹಚ್ಚಿದಂತೆ. ಅನೇಕ ಪರೀಕ್ಷಾಸಮಯಗಳು ಇಲ್ಲಿ ಬರುವದು ನಿಜ. ಇಲ್ಲಿ ಬಂದವರಿಗೆ ಎರಡೇ ಹಾದಿ:—ಸಂಯಮ, ಇಲ್ಲವೆ ಸ್ವತಂತ್ರ ಕಾಮೋಪಾಸನೆ. ಇದರಲ್ಲಿ ಯಾವುದು ಯೋಗ್ಯವೆಂದು ವಿಂಗಡಿಸುವದು ಶಕ್ಯವಿದ್ದರೂ ಇಲ್ಲಿ ಹೇಳುವದು ಅವಶ್ಯವಿಲ್ಲ; ಒಟ್ಟಾರೆ, ಇಲ್ಲಿಂದ ಯಶಸ್ವಿಯಾಗಿ ತಿರುಗಿ ಹೋಗುವವರಿಗೆ,–ಇವೆರಡರಲ್ಲಿ ಒಂದನ್ನು ಪಾಲಿಸಬೇಕಾಗುವದು. ಆದರೆ ನಿಜವಾಗಿ ನಾವು ವಿಚಾರಮಾಡಬೇಕಾದ ಮಾತಿದು: ಸದ್ಗುಣಿಗಳಾದ ಅನೇಕರು ಇಲ್ಲಿಯ ಪರಿಸ್ಥಿತಿಯ ಕಲ್ಪನೆಯಿಲ್ಲದೆ ಬಂದು ಆ ಮೇಲೆ ತೊಳಲಾಡುತ್ತಾರೆ; ಅಂತಃಕಲಹವು ಸುರುವಾಗುತ್ತದೆ. ಸ್ವತಂತ್ರ ಕಾಮೋಪಾಸಕರು, ತಮ್ಮಂತೆ ಏಕೆ ಅವರು ನಡೆಯಬಾರದೆಂದು ಕೇಳಬಹುದು. ಆದರೆ ಅವರ ವಿವೇಕಕ್ಕೆ ಅದು ಒಪ್ಪುವದಿಲ್ಲ. ಹೀಗಾಗಿ ಇಂತಹ ಕಷ್ಟದಲ್ಲಿ ಅಭ್ಯಾಸವಾಗದೆ ಬಂದ ಕೆಲಸವೂ ಕೂಡ ಕೈತಪ್ಪಿ ಅವರು ಬಾಳನ್ನು ಹಾಳಿಟ್ಟುಕೊಂಡು ಸ್ವದೇಶಕ್ಕೆ ತೆರಳುತ್ತಾರೆ. ಇಂಥವರ ದುಃಖವು ತಪ್ಪುವಂತೆ ನಾವು ಮಾಡಬೇಕು.

ಮುಂದೆ ತುಸು ಹೊತ್ತಾದ ಮೇಲೆ,–ಈ ಎಲ್ಲ ವಿಷಯವನ್ನು ವಿಚಾರಿಸಲು ಒಂದು ಕಮೀಟಿಯನ್ನು ನೇಮಿಸಬೇಕೆಂದು ಗೊತ್ತಾಗಿ ಸಭೆಯು ಮುಕ್ತಾಯವಾಯಿತು.

*    *    *    *

೫೯

೭—೪—೩೭

ಗಾಂಧಿಯವರು ದುಂಡುಮೇಜಿನ ಪರಿಷತ್ತಿಗಾಗಿ ವಿಲಾಯತಿಗೆ ಬಂದಾಗ, ಸಿನೇಮಾನಟನೆಯಲ್ಲಿ ಪ್ರಖ್ಯಾತಿ ಹೊಂದಿದ ಚಾರ್ಲಿ ಚಾಪ್ಲಿನ್‌ನು ಅವರಿಗೆ ಭೆಟ್ಟಿಯಾಗಲು ಬರುವೆನೆಂದು ಹೇಳಿಕಳಿಸಿದನಂತೆ. 'Who is Charlie Chaplin?' (ಚಾರ್ಲಿ ಚಾಪ್ಲಿನ್ ಯಾರು?) ಎಂದು ಕೇಳಿದರು ಗಾಂಧಿಯವರು. 'ಮುದುಕನು ಇನ್ನೂವರೆಗೆ ಒಂದು ಸಿನೆಮಾ ಸಹ ನೋಡಿಲ್ಲ' ಎಂದು ಗಾಂಧಿಯವರ ಪರಿಚಯವಿದ್ದವರೊಬ್ಬರು ಹೇಳುತ್ತಿದ್ದರು!

ಇನ್ನೊಂದು ಸಲ ಒಬ್ಬ ಆಂಗ್ಲ ಗೃಹಸ್ಥನು ಅವರ ದರ್ಶನಕ್ಕಾಗಿ ಬಂದಿದ್ದ. 'May I know Mahatma's mind on pictures?' (ಚಲಚ್ಚಿತ್ರಗಳ ಬಗ್ಗೆ ಮಹಾತ್ಮಾಜಿಯವರ ಮನಸ್ಸಿನಲ್ಲೇನಿದೆ? ತಿಳಿಯಬಹುದೇ?) ಎಂದು ಕೇಳಿದ. 'Mahatma's mind is quite blank' (ಮಹಾತ್ಮನ ಮನಸ್ಸು ಹೊಸ ಸ್ಲೇಟಿ (ಪಾಟಿ)ನಂತೆ ಬಚ್ಚ ಬರಿದು.) ಎಂದು ಹೇಳಿದರು ಗಾಂಧಿಯವರು!

* * * *

ರೀಜೆಂಟ್ ಪಾರ್ಕಿಗೆ 'Rowing' ಗಾಗಿ ಹೋಗಿದ್ದೆವು. ಇಲ್ಲಿಯ ನೀರು ನಾಲ್ಕು ಫೂಟು ಮಾತ್ರ ಆಳವಿರುವಂತೆ ಮಾಡಿದ್ದಾರೆ! ಎಂಥ ಅಂಜುಬುರುಕರೂ ಸಹ ದೋಣಿಯಲ್ಲಿ ಕೂತು ಹುಟ್ಟು ಹಾಕುತ್ತ ಹೋಗಬಹುದು. ತಾಯಿಯನ್ನು ಕೂಡಿಸಿ ಅನೇಕ ಹೆಣ್ಣುಮಕ್ಕಳು ಹುಟ್ಟು ಹಾಕುತ್ತ ಹೋಗುತ್ತಾರೆ. ಇಲ್ಲವೆ ದಂಪತಿಗಳಿಬ್ಬರು ಒಂದು ದೋಣಿಯಲ್ಲಿ ನಡೆದಿರುತ್ತಾರೆ.

ಇಲ್ಲಿಯು ಎಲ್ಲ ಪಾರ್ಕುಗಳಲ್ಲಿ ಮರದ ಕೆಳಗೆ ಎರಡೇ ಕುರ್ಚಿಗಳನ್ನು ಇಟ್ಟಿರುವದು ವಾಡಿಕೆಯಾಗಿದೆ!

* * * *

ಸಿಲೋನಿ ವಿದ್ಯಾರ್ಥಿಗಳನೇಕರು ಕೂಡಿ ಇಲ್ಲಿ ಒಂದು ಕಡೆಗೆ ಇದ್ದಾರೆ. ತಮ್ಮ ಭಾಷೆಯಲ್ಲಿ ಒಂದು ರಾಜಕೀಯ ನಾಟಕವನ್ನು ಪ್ರಯೋಗಿಸಬೇಕೆಂದು ಅವರು ತಯಾರಿ ನಡೆಸಿದ್ದರು. ಅದರಲ್ಲಿ ಪಾತ್ರ ವಹಿಸಿದ ಹುಡುಗನೊಬ್ಬ ಎಂಟ್‌ವರ್ಪ್, ಪ್ಯಾರಿಸ್ ಮೊದಲಾದ ಪಟ್ಟಣಗಳನ್ನು ನೋಡಲೆಂದು ಸೂಟಿಯಲ್ಲಿ ಒಂದು ವಾರದ ಮಟ್ಟಿಗೆ ಹೋದ. ಅವನು ಸಿಲೋನಿನ ಒಬ್ಬ ಗರ್ಭ ಶ್ರೀಮಂತರ ಮಗ. ಕ್ರಿಕೆಟ್ ಆಟದಲ್ಲಿ ಪ್ರಸಿದ್ಧನಾದವ. ಪ್ರಕೃತಿಯಿಂದ ಬಲವಂತ. ಆದರೆ ಅಕಸ್ಮಾತ್ತಾಗಿ ಪ್ಯಾರಿಸಿನಲ್ಲಿದ್ದಾಗ ನೆಗಡಿಯು ಹಾಯ್ದಿತು. ಔಷಧೋಪಚಾರವನ್ನು ಮಾಡುವಷ್ಟರಲ್ಲಿಯೇ ಅದು 'ಡಬಲ್ ನಿಮೋನಿಯಾ' ಆಗಿ ಪರಿಣಮಿಸಿತು. ಮರುದಿವಸವೇ ಹುಡುಗನು ತೀರಿಕೊಂಡ.

ನನ್ನ ಸ್ನೇಹಿತನು ಚಹಕ್ಕಾಗಿ ತನಗೆ ಪರಿಚಿತರಾದ ಸಿಲೋನಿ ವಿದ್ಯಾರ್ಥಿಗಳ ಕಡೆಗೆ ಹೋಗಿದ್ದ. ಅವರು ಚಹದ ಕಪ್ಪನ್ನು ತುಟಿಗೆ ಹಚ್ಚುವಷ್ಟರಲ್ಲಿಯೇ ಪ್ಯಾರಿಸಿನಿಂದ ಆ ಹುಡುಗನ ಮರಣದ ಬಗ್ಗೆ ಟೆಲಿಫೋನ್ ಬಂತು. ದೈವದಾಟದ ಮುಂದೆ ಸಿಲೋನಿ ನಾಟಕವು ಸಾಗುವದೆ?

* * * *

೮-೪-೩೭

'Taming of the Shrew' ಎಂಬ ಶೇಕ್ಸಪಿಯರನ ನಾಟಕದ ಪ್ರಯೋಗವನ್ನು ನೋಡಲು ಹೋಗಿದ್ದೆ. 'Old Vic' ಥಿಯೆಟರಿನಲ್ಲಿ ಆಧುನಿಕ ರಂಗಭೂಮಿಯ ಸೌಕರ್ಯಗಳನ್ನು ಉಪಯೋಗಿಸುವದಿಲ್ಲ. ಇಲ್ಲಿ (New Theatre)ದಲ್ಲಿ ಮಾತ್ರ ಅದ್ಭುತ ದೃಶ್ಯಗಳನ್ನು ತೋರಿಸುತ್ತಾರೆ- ಹೋಟೆಲಿನ ಮುಂಭಾಗ. ಪ್ರತ್ಯಕ್ಷ ದೃಶ್ಯದಂತೆ ಕಾಣುವ ತೆರೆ ಇತ್ಯಾದಿ. 'Sly' ಎಂಬ ಭಿಕ್ಷುಕನು ಶ್ರೀಮಂತನಾದಾಗ ಮಲಗಲು ಉತ್ತಮವಾದ

ಪಲ್ಲಂಗವಿರುತ್ತದೆ. ಮನೆಯಲ್ಲಿಯ ಬೇರೆಬೇರೆ ಕೋಣೆಗಳು, ಬಾಗಿಲ ಉಪಯೋಗ,—ಇವೆಲ್ಲ ನೋಡುವಂತಿದೆ. ಬೇಟೆಗಾರರು ಎರಡು ನಾಯಿಗಳನ್ನು ಹಿಡಿದುಕೊಂಡು ರಂಗಭೂಮಿಯ ಮೇಲೆ ಬರುತ್ತಾರೆ! ಪಾತ್ರಗಳ ಸಂಭಾಷಣೆ ನಡೆದಿರುವಾಗಲೇ— ಅವರಲ್ಲಿ ಕೆಲವರು ಮುಂದೆ ಬಂದು ತೆರೆಯು ಬಿದ್ದಮೇಲೆ— ದೃಶ್ಯವು ಬದಲಾಯಿಸುತ್ತದೆ. ಬಿದ್ದ ತೆರೆಯ ಮಧ್ಯದಿಂದ ಪಾತ್ರಗಳು ಒಳಗೆ ಹೋದರೂ ಅಪ್ರಾಸಂಗಿಕವೆನಿಸುವದಿಲ್ಲ,- ಬಾಗಿಲ ಕಲ್ಪನೆಯು ಅಲ್ಲಿ ಬರುವಹಾಗೆ ಮಾಡಿರುತ್ತಾರೆ.

ನಟರ ಬಾಯಲ್ಲಿ ನಾಟಕವು ಅಷ್ಟು ನೆಟ್ಟಗೆ ಕೂತಿರಲಿಲ್ಲ. 'Here comes your father' ( ಇಗೋ ಇಲ್ಲಿ ನಿಮ್ಮ ತಂದೆ ಬಂದ. ) ಎಂದು ಹೇಳುವದರ ಬದಲು '**Husband**' ( ಗಂಡ ) ಎಂದು ಪೆಟ್ರುಶಿಯೋನು ಕ್ಯಾಥರಿನಳಿಗೆ ಹೇಳಿದ!

ಈ ನಾಟಕವನ್ನು ನೋಡಲು ಗಂಡಸರಿಗಿಂತ ಹೆಣ್ಣುಮಕ್ಕಳು ಹೆಚ್ಚಾಗಿ ನೆರೆದಂತೆ ಕಂಡಿತು. ಹೆಣ್ಣನ್ನು ಇಷ್ಟುಪರಿ ಹಣ್ಣುಮಾಡಿದ್ದು ಸಹಜವಾಗಿಯೇ ಈ ೨೦ನೆಯ ಶತಮಾನದ ಮಹಿಳೆಯರ ಮನಸ್ಸಿಗೆ ಬರಲಿಲ್ಲ. 'It's silly', 'I don't agree with it' ( ಏನು, ಹಚ್ಚುಚ್ಚು ! ನಾನು ಒಪ್ಪಲಾರೆ. ) ಎನ್ನುತ್ತ ಮನೆಗೆ ಹೋದರು.

ನಾಟಕಕ್ಕೆ ಉತ್ತಮವಾದ 'Induction' ಇಲ್ಲವೆ ವಿಷ್ಕಂಭಕವನ್ನು ಶೇಕ್ಸಪಿಯರನು ಕಲ್ಪಿಸಿದ್ದಾನೆ. ಇಡಿಯ ನಾಟಕಕ್ಕೇ ಒಂದು ನಾಟಕದ ಕಟ್ಟು ಹಾಕಿದ್ದಾನೆ. ಅಭಿನಯ ವಿಶೇಷದಿಂದ ಕೊನೆಯವರೆಗೆ ಇವುಗಳ ಸಂಬಂಧವು ಉಳಿಯುವದು. ಆದರಿಂದ ಇಡಿ ಪ್ರಯೋಗಕ್ಕೆ ಹೊಸ ಕಳೆ ಬರುತ್ತದೆ.

———

ಮತ್ತೆ ಭಾರತೀಯ ವಿದ್ಯಾರ್ಥಿಗಳ ಸುದ್ದಿ. ಒಂದು ಆಂಗ್ಲ ಕುಟುಂಬದೊಡನೆ ಕೆಲವರು ಇರುತ್ತಿದ್ದರು. ಅಲ್ಲಿ ಒಬ್ಬ ಆಂಗ್ಲ ಕುಮಾರಿಯೂ ( Shop-girl ) ಇದ್ದಳು. ಆ ಮನೆಯಲ್ಲಿದ್ದ ಪಂಜಾಬಿ ವಿದ್ಯಾರ್ಥಿಯ ಅನುರಾಗವು ಅವಳೊಡನೆ ಬೆಳೆಯಿತು. ಅವನು ಲಗ್ನ ವಾದವ. ಆದರೂ ಇದು ತಪ್ಪಲಿಲ್ಲ. ಅದೇ ಮನೆಯಲ್ಲಿ ಲಗ್ನವಾದ ನನ್ನ ಪರಿಚಿತರೊಬ್ಬರು ವಾಸಿಸುತ್ತಿದ್ದರು. ಮನೆಯ ಯಜಮಾನಿಯು ಅವರ ಮೇಲೆ ಕರುಣೆಪಟ್ಟು ಹೇಳುತ್ತಿದ್ದಳು:—“ Mr—you are very lonely. Shall I introduce you to Miss—? She is a good dancer...” (ಯಾಕೆ, ಒಬ್ಬೊಂಟಿಗರಾಗಿದ್ದೀರಿ ? ಕುಮಾರಿ—ಇವರ ಗುರತು ಮಾಡಿ ಕೊಡಲಾ ? ಅವಳು ಚೆನ್ನಾಗಿ ನರ್ತನಮಾಡುವಳು.) ಬೇಡವೆಂದು ಇವರು ದೂರಿನಿಂದ ಶರಣು ಹೊಡೆದರು.

ಇವರ ಕಾಲೇಜಿನಲ್ಲಿ ( King's College ) ಇದ್ದ ಒಬ್ಬ ಆಂಗ್ಲ ವಿದ್ಯಾರ್ಥಿನಿಯ ತಂದೆಯವರ ಪರಿಚಯವು ಇವರಿಗಿತ್ತು. ( ಪರಸ್ಪರ ಮಿತ್ರರ ಮೂಲಕ ). ಆ ತಂದೆಯು ಆಯರ್ಲಂಡದವ; ಒಳ್ಳೆಯ ಕೆಲಸ ಇತ್ತು ಲಂಡನ್ನಿನಲ್ಲಿ. ಮೊದಲನೆಯ ಸಲ ನನ್ನ ಪರಿಚಿತರನ್ನು ಊಟಕ್ಕೆ ಕರೆದ. ಬಹಳ ಆದರೋಪಚಾರವೂ ಆಯಿತು. ಎರಡನೆಯ ಸಲ ಹೋದಾಗ ಮಾತೆತ್ತಿದ: ‘My daughter is anxious to dance with you!’ ( ನನ್ನ ಮಗಳಿಗೇನೋ ನಿಮ್ಮೊಡನೆ ನರ್ತಿಸಬೇಕೆಂಬ ಮನಸ್ಸು. ) ಮುಂದೆ ಪತ್ರ ಬಂದಾಗ ಇವರು ಜಾಣತನದಿಂದ ತಪ್ಪಿಸಿಕೊಂಡರು !

* * * *

ಡಿಗ್ರಿ ಸಂಪಾದಿಸಲು ಬಂದ ಅನೇಕರು ‘ ವೇಟರ ’ರಾಗಿ ಇಲ್ಲಿಯ ಹೋಟಲುಗಳಲ್ಲಿ ಕಾಲ ಕಳೆಯುತ್ತಾರೆ. ಪಂಜಾಬದ ಒಬ್ಬ ವಿದ್ಯಾರ್ಥಿ;

ಶ್ರೀಮಂತರ ಮಗ. ಆಯ್. ಸಿ. ಎಸ್‌ಗಾಗಿ ಇಲ್ಲಿಗೆ ಬಂದ. ಸರಿ. ಆಂಗ್ಲ ಯುವತಿಯರ ಸೆಳೆತದಲ್ಲಿ ಸಿಕ್ಕ. ಪರೀಕ್ಷೆಯು ಎಲ್ಲಿಯೋ ಉಳಿಯಿತು. ತಂದೆಗೆ ಇವನ ವರ್ತನವು ಗೊತ್ತಾಗಿ ದುಡ್ಡು ಕಳಿಸುವದನ್ನು ಬಂದುಮಾಡಿದ; ತಿರುಗಿ ದೇಶಕ್ಕೆ ಬರಬೇಕೆಂದು ಹೇಳಿದ. ಹೋಗದೆ ಇಲ್ಲಿಯೇ ವೇಟರನಾಗಿ ತನ್ನ ಯುವತಿಯರ ದಾಸ್ಯದಲ್ಲಿ ಇದ್ದಾನೆ.

* * * *

ಒಬ್ಬ ಪ್ರಸಿದ್ಧ ಫಾರ್ಸಿ ವಿದ್ಯಾರ್ಥಿ. ಲಗ್ನವಾದವ. ವೈದ್ಯಶಾಸ್ತ್ರವನ್ನು ಅಭ್ಯಾಸಿಸಲು ಇಲ್ಲಿಗೆ ಬಂದ. ಇಲ್ಲಿಯೇ ಒಬ್ಬ ಆಂಗ್ಲ ಯುವತಿಯನ್ನು ಲಗ್ನವಾದ. 'ಪ್ರ್ಯಾಕ್ಟಿಸ್' ಮಾಡಹತ್ತಿದ; ತಿಂಗಳಿಗೆ ಸಾವಿರ ಪೌಂಡು ಗಳಿಸುತ್ತಿದ್ದ. 'Ruxton' ಎಂದು ತನ್ನ ಹೆಸರನ್ನು ಬದಲಾಯಿಸಿದ. ಮೂರು ಮಕ್ಕಳಾದ ಮೇಲೆ ತನ್ನ ಆಂಗ್ಲ ಪತ್ನಿಯು ಇನ್ನೊಬ್ಬನ ಬೆನ್ನು ಹತ್ತಿ ಹೋಗುವದನ್ನು ಕಂಡ. ಸಹನವಾಗಲಿಲ್ಲ. ಆಕೆಯನ್ನು ಗುಂಡು ಹಾಕಿ ಕೊಂದು ದಿಕ್ಕಿಗೊಂದು ಎಲುಬನ್ನು ಕಾಣಿಸಿ ಬಂದ. ಆದರೂ ಅವನ ಅಪರಾಧವು ಗೊತ್ತಾಯಿತು. ಕೊಲ್ಲುವದಕ್ಕೆ ಕಾರಣವೇನೆಂದು ನ್ಯಾಯಾಧೀಶರು ಕೇಳಿದಾಗ: 'I loved my wife. I could not live without her. And I could not live with her.' (ನನ್ನ ಹೆಂಡತಿಯನ್ನು ನಾನು ಪ್ರೀತಿಸುತ್ತಿದ್ದೆ. ಅವಳನ್ನು ಬಿಟ್ಟಿರುವುದು ನನಗಾಗಲಿಲ್ಲ. ಮತ್ತು ಕೂಡಿರುವದಂತೂ ಆಗಲೇ ಇಲ್ಲ.) ಎಂದು ಹೇಳಿದ. ಇವನ ಮೇಣದ ಮೂರ್ತಿಯನ್ನು (ಇವನನ್ನು ಶೂಲಕ್ಕೇರಿಸಿದರು.) ಮ್ಯಾಡೆಂ ಟ್ಯೂಸ್ಯಾಡ್‌ಳ ಸಂಗ್ರಹಾಲಯದ 'ಭೀಕರ ದೃಶ್ಯಗಳ ಮಂದಿರ'ದ ವಿಭಾಗವಲ್ಲಿ ಇಟ್ಟಿದ್ದಾರೆ!

---

## ೬೧

೧೧-೪-೩೭

'ಕ್ರಿಕಲ್‌ವುಡ್' ಎಂಬ ಲಂಡನ್ನಿನ ಭಾಗದಲ್ಲಿರುವ 'ಸ್ಕೇಟಿಂಗ್ ರಿಂಕ್'ಗೆ 'ರೋಲರ್-ಸ್ಕೇಟಿಂಗ್'ಗಾಗಿ ಕೆಲವು ಗೆಳೆಯರೊಡನೆ ಹೋಗಿದ್ದೆ. 'ರೋಲರ್-ಸ್ಕೇಟಿಂಗ್' ಎಂದರೆ,- ಸಪ್ಪೈ ಕಟ್ಟಿಗೆಯ ನೆಲದಮೇಲೆ ಗಾಲಿ ಹಚ್ಚಿದ ಪಾದರಕ್ಷೆಗಳನ್ನು ಹಾಕಿಕೊಂಡು ಜಾರುತ್ತ ಸಾಗುವದು! 'fast skating, dance skating, figure skating',- ಹೀಗೆ ಅದರಲ್ಲಿ ಅನೇಕ ಪ್ರಕಾರಗಳಿವೆ. ಮೊದಲನೆಯ ದಿವಸ ಇದನ್ನು ಪ್ರಯೋಗಿಸಿದ ನನಗೆ ಅನೇಕಸಲ ಬೀಳಬೇಕಾಯಿತು! ಆದರೆ ಬೀಳುವ ಪುಣ್ಯಾತ್ಮರು ಅನೇಕರಿರುತ್ತಾರೆ.

ಸಣ್ಣ ಮೈದಾನದಲ್ಲಿ ಜಾರಲು ಕಲಿತ ಮೇಲೆ ದೊಡ್ಡ ಮೈದಾನ ದಲ್ಲಿ ಹೋಗಿ 'ಸ್ಕೇಟ್' ಮಾಡಬಹುದು. ನನ್ನ ಪರಿಚಿತರೊಬ್ಬರು ಹೀಗೆ ಮಾಡಿದರು. ಆಳತೆ ತಪ್ಪಿ ಒಮ್ಮೆ ಬೀಳಲು ಅವರ ಹಿಂದೆಯೇ ಬರುತ್ತಿದ್ದ ಒಬ್ಬ ಜರ್ಮನ್ ಯುವತಿಗೆ ಕಾಲು ತಟ್ಟಿ ಆಕೆಯೂ ಬಿದ್ದಳು. ನನ್ನ ಪರಿಚಿತರು ಅವಳನ್ನು ಹಿಡಿದು ಎಬ್ಬಿಸಿದರು. ಒಬ್ಬರೊಬ್ಬರ ಪರಿ ಚಯವಾಯಿತು. ಒಂದಾಟವು ಮುಗಿದು ದಣಿದು ಕುಳಿತಾಗ ಆ ಯುವತಿಯು ಇವರನ್ನು ಮಾತನಾಡಿಸಿದಳು: "ಬರ್ಫದ ಮೇಲೆ ನಾನು ಚೆನ್ನಾಗಿ ಸ್ಕೇಟ್ ಮಾಡಬಲ್ಲೆ. ಇಲ್ಲಿ ಹೇಗೋ ಹೇಗೋ ಅನಿಸುತ್ತದೆ. ನನಗಷ್ಟು ರೂಢಿಯಿಲ್ಲ!" ಪರಿಚಿತರು ಕೇಳಿದರು: "ಹೊಸದಾಗಿ ಸುರುವು ಮಾಡುವವರಿಗೆ ಬರ್ಫದ ಮೇಲೆ ಸ್ಕೇಟ್ ಮಾಡಲು ಕಠಿಣವಾಗುವ ದೇನು?" "ನನಗೇನು ಹಾಗೆನಿಸುವದಿಲ್ಲ. ನಾಳೆದು ನಾನು 'ಆಯಿಸ್ ಸ್ಕೇಟಿಂಗ್'ಗೆ ಹೋಗಬೇಕೆಂದು ವಿಚಾರವಿದೆ. ಅವಶ್ಯವಾಗಿ ನೀವೂ ಬರಬೇಕು." ನನ್ನ ಪರಿಚಿತರಿಗೆ ದಿಗಿಲು ಬಿದ್ದಿತು. ಏನು ಮಾಡಬೇಕು? ಇಷ್ಟು ಶೀಘ್ರದಲ್ಲಿಯೇ ನಮ್ಮ ಮೈತ್ರಿಯು ಬೆಳೆಯಿತೊ ಹೇಗೆ? ನನ್ನ

ಪರಿಚಯವಿಲ್ಲದೆ ನನ್ನನ್ನು ಈ ಪ್ರಾಣಿಯು ಆಮಂತ್ರಿಸಿದುದು ಹೇಗೆ? ಕೊನೆಗೆ,—ಅಂದು ಬೇರೆ ಕೆಲಸವಿದೆಯೆಂದು ಹೇಳಿ ಮಾತು ಮುಗಿಸಿದರು!

* * * *

ನಾನು ಬಸ್ಸಿನಲ್ಲಿ ಕುಳಿತಾಗ ಒಬ್ಬ ವೆಲ್ಸ್ ಪ್ರಾಂತದ ಕೂಲಿಕಾರನು ಭೆಟ್ಟಿಯಾದ. ಒಳ್ಳೆಯ ಸ್ವಭಾವದವ. ಮಾತಿಗೆಮಾತು ಹೊರಟು ಹೇಳಿದ: ‘You and your friends look like Englishmen but for your skin. You are quite healthy’ (ನೀವೂ ನಿಮ್ಮ ಗೆಳೆಯರೂ ತೀರ ಇಂಗ್ಲಿಷ್ ಜನರಂತೆ ಕಾಣುವಿರಿ. ಇನ್ನೇನು, ನಿಮ್ಮ ತೊಗಲಿನ ಬಣ್ಣ ಬೇರೆ. ನೀವು ಒಳ್ಳೇ ಆರೋಗ್ಯವಂತರಾಗಿದ್ದೀರಿ)

ಇರಬಹುದೆಂದು ನಾನು ಉತ್ತರ ಕೊಟ್ಟೆ.

‘They say that it is very hot in your country. A relative of mine had been to Jerusalem during the war. He said that he would have been struck blind if he looked at the sun. How do the Europeans live there?’ (ನಿಮ್ಮ ದೇಶದಲ್ಲಿ ಬಹಳೇ ಉರಿ ಬಿಸಿಲು ಎಂದು ಹೇಳುತ್ತಾರೆ. ನನ್ನ ಆಪ್ತರೊಬ್ಬರು ಯುದ್ಧದ ಕಾಲಕ್ಕೆ ಜರೂಸ್ಲೇಮಕ್ಕೆ ಹೋಗಿದ್ದರು. ಅಲ್ಲಿಯ ಸೂರ್ಯನನ್ನು ದಿಟ್ಟಿಸಿ ನೋಡಿದ್ದರೆ ಕಣ್ಣೇ ಹೋಗುತ್ತಿದ್ದವೆಂದು ಹೇಳಿದರು. ಯುರೋಪಿಯನ್ನರು ನಿಮ್ಮ ದೇಶದಲ್ಲಿ ಆಗ ಹೇಗೆ ವಾಸಮಾಡುತ್ತಾರೆ?)

ಬೇಸಿಗೆಯಾದೊಡನೆ ಬೆಟ್ಟದೋರೆಗೆ ಹೋಗಿ ಅವರಿರುವರೆಂದು ನಾನು ಹೇಳಿದೆನು.

‘You are a great English talker. You talk me down. Sure! You speak English as if you had been born and bred in England’ (ನೀವು ಇಂಗ್ಲೀಷಿನಲ್ಲಿ ಚೆನ್ನಾಗಿ ಮಾತನಾಡಲು ಬಲ್ಲಿದರು. ನನ್ನನ್ನು ಸೋಲಿಸುತ್ತೀರಿ. ನಿಜವಾಗಿ ನೀವು ಇಂಗ್ಲಂಡಿನಲ್ಲಿಯೇ ಹುಟ್ಟಿಬೆಳೆದವರಂತೆ ಇಂಗ್ಲೀಷು ಮಾತಾಡುತ್ತೀರಿ.)

ಭಾರತೀಯರು ಪರಕೀಯರಾಗಿದ್ದು ಸಹ ಚೆನ್ನಾಗಿ ಇಂಗ್ಲೀಷು ಮಾತಾಡಬಲ್ಲರೆಂಬುದು ಇಲ್ಲಿಯ ಜನರಿಗೆ ಒಂದು ಆಶ್ಚರ್ಯವಾಗಿದೆ.

ಅದೊಂದು ನಮ್ಮ ದುರ್ದೈವವೆಂದು ನಾನು ಉತ್ತರಕೊಟ್ಟೆ. ಅಷ್ಟರಲ್ಲಿ ಬಸ್ಸಿನಿಂದಿಳಿದು ಅವನಿಗೆ ಹೋಗಬೇಕಾಗಿತ್ತು. 'Good night!' ಎಂದು ಮಾತು ಮುಗಿಸಿದೆವು.

* * * *

ನಾನಿರುವ ಕೋಣೆಯ ಮಗ್ಗುಲಿಗೆ ಇನ್ನೊಬ್ಬ ವಿದ್ಯಾರ್ಥಿ ಇದ್ದಾನೆ. ಮುಂಜಾನೆಯಿಂದ ಅವನಿಗೆ ಹೊಟ್ಟೆಶೂಲೆ ಹಿಡಿದಿತ್ತು. 'Appendicites' ಆಗಿದೆ; ಶಸ್ತ್ರಕ್ರಿಯೆ ಮಾಡಿಸಬೇಕೆಂದು ಡಾಕ್ಟರರು ಹೇಳಿ ಹೋದರು. ರಾತ್ರಿಯೆಲ್ಲ ಅವನಿಗೆ ನಿದ್ದೆ ಹತ್ತಲಿಲ್ಲ. ಮಧ್ಯರಾತ್ರಿಯಲ್ಲಿ,- ಈಗಿಂದೀಗ ಶಸ್ತ್ರಕ್ರಿಯೆಯಾಗದಿದ್ದರೆ ಸಾಯಬಹುದೆಂಬ ಭೀತಿ ಬಂದಿತು. ಚೀರಿಕೊಂಡ. ಯಾರಿಗೂ ಕೇಳಿಸಲಿಲ್ಲ. ಪುಣ್ಯಕ್ಕೆ ಹತ್ತಿರದಲ್ಲಿಯೇ 'ಟಾಯಿಮ್‌ಪೀಸ್' ಇಟ್ಟುಕೊಂಡು ಮಲಗಿದ್ದ. 'ಅಲಾರಂ' ಒಂದೇಸಮನೆ ಬಾರಿಸಿದೊಡನೆ ನನಗೆ ಎಚ್ಚರವಾಯಿತು. ಹೋಗಿ ಅವನನ್ನು ಸಮಾಧಾನ ಮಾಡಿದೆ.

* * * *

'ದಿ ಬ್ಯಾಟ್' ಎಂಬ ನಾಟಕವನ್ನು ನೋಡಿದೆ. 'ಪತ್ತೇದಾರಿ' ಕಾದಂಬರಿಗಳ ಸುಗ್ಗಿ ಮುಗಿದು ಇಲ್ಲಿ ಅಂಥ ನಾಟಕಗಳಿಗೆ ಆರಂಭವಾಗಿದೆ. ಈಗ ಲಂಡನ್ನಿನಲ್ಲಿ ೪೬ ನಾಟಕಗೃಹಗಳಿವೆ. ೧೪ ನಾಟಕಗಳು,- ಸಾಮಾಜಿಕ ಮುಂತಾದವು; ೮ 'ಕಾಮೆಡಿ'ಗಳು; ಒಂದು Very light comedy; ಒಂದು light comedy; ೩ musical comedy; ಒಂದು comedy with music; ಒಂದು farcical comedy; ಒಂದು comedy-thriller, ೨ musical plays, ೪ revues; ಒಂದು musical revue; ಒಂದು musical show; ೩ thrillers; ಒಂದು ballet and opera:— ಹೀಗೆ ಸುಮಾರು ವಿಭಾಗವಿದೆಯೆನ್ನಬಹುದು. 'Plays'ದಲ್ಲಿ ಎರಡು ಶೇಕ್ಸ್‌ಪಿಯರನವು; ಒಂದು 'ಶಾ;' ಒಂದು 'ಆಡೆನ್' ಎಂಬ ಆಧುನಿಕ ಕವಿಯ ಕಾವ್ಯಮಯ ನಾಟಕ.

ಪತ್ತೇದಾರಿ ನಾಟಕಗಳ ಸ್ಥಿತಿಯು ಹೀಗೆ: (೧) ಸಿನೇಮಾದಲ್ಲಿ

ಕಂಡುಬರುವ ಅದ್ಭುತ ವಾಸ್ತವಿಕತೆಯನ್ನು ರಂಗಭೂಮಿಯ ಮೇಲೆ ಏರ್ಪಡಿಸುವ ಪ್ರಯತ್ನವು ಇಲ್ಲಿಯ ನಾಟಕಗಳಲ್ಲಿ ಕಂಡುಬರುತ್ತದೆ. 'ಬ್ಯಾಟ್'ದಲ್ಲಿಯ ಮನೆಯ ದೃಶ್ಯ, ಅಂತಸ್ತಿನ ರಚನೆ, ನೆಲಮನೆ, ತಿಜೋರಿ,-ಇದೆಲ್ಲ ವಾಸ್ತವಿಕತೆಯು ರಮ್ಯವಾದುದು. (೨) ಉಳಿದ ನಾಟಕಗಳಲ್ಲಿಯಂತೆ ಇಲ್ಲಿಯೂ ವಿನೋದಕ್ಕೆ ಎಡೆಯಿದೆ. 'The only other detective outside the profession is the married woman!' (ಕಸಬುಗಾರರನ್ನು ಬಿಟ್ಟು ಪತ್ತೇದಾರಿ ಕೆಲಸ ಮಾಡುವವರೆಂದರೆ ಮದುವೆಯಾದ ಹೆಂಗಸರು.) (೩) ಪ್ರತಿ ನಿಮಿಷ ಇಲ್ಲಿ ಹೊಸದೇನಾದರೂ ಸಂಭವಿಸುತ್ತಲೇ ಇರುತ್ತದೆ. ವಸ್ತುವಿನ ಆಕರ್ಷಕ ಗುಣವೇ ಇದರ ಜೀವಾಳ.

ಆದರೆ ಪತ್ತೇದಾರಿ ಕಾದಂಬರಿಯಂತೆ ಇಂಥ ಪ್ರಯೋಗಗಳು ಮನಸ್ಸನ್ನು ಹಿಡಿಯಲಾರವು. ಕಳ್ಳರೊಡನೆ ಬಡಿದಾಟ ನಡೆದಾಗ ದೀಪಗಳನ್ನು ಆರಿಸಿ ಬಿಡುತ್ತಾರೆ,-ಯಾಕಂದರೆ, ನಾಟಕದಲ್ಲಿಯ ದೀಪಗಳೂ ಆರುತ್ತವೆ! ಇದೆಲ್ಲ ನಡೆವಾಗ ಶ್ರೋತೃವೃಂದವು ನಗುತ್ತ ಕೂತಿರುತ್ತದೆ. ಕೆಲವು ಸನ್ನಿವೇಶಗಳು ಸ್ಫುಟವಾಗುವದಿಲ್ಲ ಕೂಡ. ಶರ್ಲಕ್ ಹೋಮ್ಸನ ವಿವೇಚನಾಪದ್ಧತಿಯು ನಾಟಕಗಳ ಸಂಭಾಷಣೆಯಲ್ಲಿ ಎಲ್ಲಿಂದ ಬರಬೇಕು? ಆದರೂ ಯಥಾಪ್ರಕಾರ ನಾಟಕಗೃಹವನ್ನು ತುಂಬಿದ್ದರು ಪ್ರೇಕ್ಷಕರು.

* * * *

೧೨—೪—೩೭

ಇಂದು ಒಂದು ಹೋಟೆಲಿನಲ್ಲಿ ಊಟಕ್ಕೆ ಕುಳಿತಿದ್ದೆ. ನನ್ನ ಟೇಬಲ್ಲಿನ ಬದಿಗೇ ಒಬ್ಬ ಇಂಗ್ಲಿ ಯುವಕನು ಕುಳಿತಿದ್ದ. ಒಬ್ಬರನ್ನೊಬ್ಬರು ಮಾತನಾಡಿಸಲಿಲ್ಲ. ನಾನು ಸಹಜವಾಗಿ ನನ್ನ ಕಿಸೆಯಲ್ಲಿದ್ದ ಆಕ್ಸಫರ್ಡ ಡೈರಿಯನ್ನು ತೆಗೆದು ನೋಡುತ್ತ ಕುಳಿತೆ. ಅದು ಕೇಂಬ್ರಿಜ್ ಡೈರಿಯೆಂದು ಆ ಯುವಕನ ಕಲ್ಪನೆಯಾಯಿತು. ಅವನು ಕೇಂಬ್ರಿಜ್

ವಿದ್ಯಾರ್ಥಿ. ಕೂಡಲೆ ನನ್ನೊಡನೆ ಮಾತಿಗೆ ಸುರುವು ಮಾಡಿದ. ವಿಶ್ವ ವಿದ್ಯಾಲಯದ ಆಪ್ತತ್ವದಲ್ಲಿ ಜನಾಂಗಭೇದಗಳೂ ಸಹ ಮರೆಯಾಗುತ್ತವೆ!

* * * *

೧೩-೪-೩೭

ಇಂದಿನದು ಮನೋಹರವಾದ ಸಂಜೆ. ವಸಂತಕಾಲವು ಬಂದಿದೆ ಯೆನ್ನಬೇಕು. ಹ್ಯಾಂಪ್‌ಸ್ಟೆಡ್ ಬಯಲಿನಲ್ಲಿ ತಿರುಗಾಡಲು ಹೋಗಿದ್ದೆನು. ಇಲ್ಲಿಯ ಸೂರ್ಯಾಸ್ತದ ವೈಚಿತ್ರ್ಯವೇ ಬೇರೆ. ಬಣ್ಣದ ಸಂಧ್ಯಾರವಿ ಯನ್ನು ಚಿತ್ರಕಾರನೊಬ್ಬನು ಬರೆದು ಆ ಮೇಲೆ ಅದನ್ನು ಅಳಿಸಿದಂತೆ, ಉರಿಯ ಮೈಯನ್ನು ಧರಿಸಿ ನಾಲಗೆಯನ್ನು ಚಾಚುತ್ತಿರುವ ಪಂಜಿನಂತೆ ಸೂರ್ಯನು ಕಾಣುತ್ತಿದ್ದ. ಟರ್ನರ್ ಮೊದಲಾದ ಚಿತ್ರಶಿಲ್ಪಿಗಳ ಕೃತಿಗಳು ಬರಿ ಕಲ್ಪನೆಗಳಲ್ಲ,—ವಾಸ್ತವಿಕತೆಯಲ್ಲಿ ಸೌಂದರ್ಯವನ್ನು ಕಂಡ ದೃಷ್ಟಿಯ ಫಲಗಳೆಂಬ ಮಾತು ಇಂಥ ಸೂರ್ಯಾಸ್ತಗಳನ್ನು ನೋಡಿದರೆ ಸಹಜವಾಗಿ ಹೊಳೆಯುವದು. ಬಯಲ ಹಚ್ಚಹಸಿರು ಸಂಜೆಯ ಬಣ್ಣವನ್ನು ಎತ್ತಿ ತೋರಿಸುತ್ತಿತ್ತು:

ಬಂದನಿದೊ ವಸಂತ!
ಬಂತು ಕುಳಿರಿನಂತ!
ಬಂದನೈ ಮಹಂತ
ಇಳೆಯಳುವನು ಕಳೆಯಲು!

ನೋಡಿದೆಂಥ ಬಣ್ಣ!
ಕುಕ್ಕಿಸುವದು ಕಣ್ಣ,
ಹೊನ್ನಾಗಿಸಿ ಮಣ್ಣ,
ರನ್ನದಂತೆ ಹೊಳೆಯಲು!

———

೧೪-೪-೩೭

ಲಂಡನ್ನಿನಲ್ಲಿ ಒಂದು ಹಿಂದೀ ಹೋಟೆಲು. ಹಿಂದೀ ವಿದ್ಯಾರ್ಥಿಗಳು ಇಳಿದುಕೊಳ್ಳಲು ಸೌಕರ್ಯವಿದೆ. ಸಪತ್ನೀಕನಾಗಿ ಯಜಮಾನನು ಇದನ್ನು ನಡೆಸುತ್ತಿರುವನು. ಒಳ್ಳೇ ಸ್ವಭಾವದವ. ಆದರೆ ಬಿಳಿ ಮೋರೆಯ ಕಳೆಯನ್ನು ಕಾಣದೆ ಇರಲಾರ. ಸರಿ. ಆಂಗ್ಲ ಕೆಲಸಗಿತ್ತಿಯರು ಇಲ್ಲಿ ಒಂದೇ ಸಮನೆ ಎಂಟು ದಿವಸ ಸಹ ನಿಲ್ಲುವದಿಲ್ಲ.

ಒಬ್ಬ ಕೆಲಸಗಿತ್ತಿಯೊಡನೆ ಯಜಮಾನನ ಸಖ್ಯವು ಬೆಳೆಯಿತು. ಆಕೆಯನ್ನು ಲಗ್ನವಾಗುವೆನೆಂದು ವಚನಕೊಟ್ಟ. 'ಇದ್ದ ಹೆಂಡತಿಯನ್ನೇನು ಮಾಡುವೆ?' ಎಂದು ಕೆಲಸಗಿತ್ತಿಯು ಕೇಳಿದಳು. 'ಅದಕ್ಕೇನು? ಹಿಂದೂ ಧರ್ಮದ ಪ್ರಕಾರ ಇಬ್ಬರು ಹೆಂಡತಿಯರಿರಲು ಅಡ್ಡಿಯಿಲ್ಲ. ನೀನು ಹಿಂದೂ ಧರ್ಮವನ್ನು ಸ್ವೀಕರಿಸಿ ಬಿಡು.' ಎಂದು ಹೇಳಿದ. ಆ ಪ್ರಾಣಿ ನಂಬಿದಳು. ನಂಬುಗೆಯು ಯಥಾಪ್ರಕಾರ ಪ್ರಣಯ ಫಲವಲ್ಲಿ ಪರಿಣಮಿಸಿತು.

ಆಗ ಗಾಬರಿಯಾಗಿ ಕೆಲಸಗಿತ್ತಿಯು ಮತ್ತೆ ಲಗ್ನದ ವಿಷಯವನ್ನು ಎತ್ತಿದಳು. ನೋಡೋಣವೆಂದು ಯಜಮಾನನು ಸಮಾಧಾನ ಮಾಡಿದ. ಬಸಿರನ್ನು ಕಳೆಯಲು ಉತ್ತಮ ಹಿಂದೀ ಔಷಧಗಳಿವೆಯೆಂದು ಏನೋ ಒಂದು ದೇಶೀ ಗಿಡಮೂಲಿಕೆಯನ್ನು ಕೊಟ್ಟ. ಪಾಪ, ಆ ಹೆಣ್ಣುಮಗಳು ಸತ್ತು ಸತ್ತು ಉಳಿದಳು. ಮುಂದೆ ಯಜಮಾನನು ಅವಳನ್ನು ಕೆಲಸದಿಂದ ತೆಗೆದು ಹಾಕಿದ.

* * * *

'ಗಂಡನಾದರೆ ನಿನ್ನ ಬಲಿಕೊಡುವಿಯೇನು?' ಎಂದು ಬೇಂದ್ರೆಯವರು ಬರೆದಿದ್ದು; 'ನೀ ಮೊದಲು ಕೇಳ್ವುದಾರ್ಪು' ಎಂದು ನಾನು

ಬರೆದಿದ್ದು; ಎರಡೂ ನನಗೆ ಆಕಸ್ಮಾತ್ ನೆನಪಾಗಿ ನಾವಿಬ್ಬರು ಎದುರಿಸುತ್ತಿರುವ ಪ್ರಶ್ನೆಯ ಕಲ್ಪನೆಯನ್ನು ತಂದುಕೊಟ್ಟವು. ಸ್ವಾರ್ಥತ್ಯಾಗದ ಸಿದ್ಧತೆಯಿದೆ. ಆದರೆ 'ಸಮರ್ಪಣ'ಕ್ಕೆ ಜೀವವು ಇನ್ನೂ ಹೆದರುತ್ತದೆ. ಈ ಹೆದರಿಕೆಯಿಂದ ಪ್ರಗತಿಯು ಕುಂಠಿತವಾಗಿದೆ. ಸಮರ್ಪಣವನ್ನುಳಿದು ಬೇರೊಂದು ಹಾದಿಯೇ ಇಲ್ಲವೇ ?

*  *  *  *

೧೫—೪—೩೭

ಇಲ್ಲಿ ಒಬ್ಬ ವಿದ್ಯಾರ್ಥಿಯಿದ್ದಾನೆ. ಹಿಂದುಸ್ತಾನವನ್ನು ಬಿಟ್ಟಂದಿನಿಂದ ಅವನಿಗೆ ಸಮಾಧಾನವಿಲ್ಲ. ಸಂಗೀತ ಪ್ರಿಯನು. ಒಂದು ಫೋನೋಗ್ರಾಫನ್ನು ಇಟ್ಟಿದ್ದಾನೆ; ಕೆಲವು ಹಿಂದೀ ರೆಕಾರ್ಡುಗಳಿವೆ. ಸರಿ. ಯಾವಾಗಲೂ ಶೋಕಮಯ ಗೀತಗಳನ್ನು ಕೇಳುತ್ತ ಕೋಣೆಯಲ್ಲಿ ಕೂಡುತ್ತಾನೆ. ಹಾದಿ ಹೋಗುವವರನ್ನು ಹಿಡಿದು ಕೂಡಿಸಿ ಕೇಳ ಹಚ್ಚುತ್ತಾನೆ! 'ತೇ ಹಿ ನೊ ದಿವಸಾ ಗತಾಃ!' ಪ್ರೇಮವೆಲ್ಲಿದೆ? ಇನ್ನೇನು ಗತಿ ?— ಇವೇ ಈ ಗೀತಗಳ ಪಲ್ಲವಿ!

*  *  *  *

೧೬—೪—೩೭

ಸಂಯುಕ್ತಪ್ರಾಂತದ ಒಬ್ಬ ವಿದ್ಯಾರ್ಥಿಯಿದ್ದಾನೆ. ಮಗನು ಹುಟ್ಟಿದ ದಿವಸವೇ ಈತನು ಹಿಂದುಸ್ತಾನವನ್ನು ಬಿಟ್ಟ. ಈಗೆರಡು ವರುಷ ಮಗನನ್ನು ನೋಡಿಲ್ಲ. ಫೋಟೋದ ಮೇಲಿಂದ ಮಾತ್ರ ಗುರುತು. ಪ್ರಸೂತಿಗೃಹದಲ್ಲಿ ಉಳಿದ ಶಿಶುಗಳಿಗಿಂತ ತನ್ನ ಮಗುವೇ ಹೆಚ್ಚಿನ ತೂಕದ್ದಾಗಿತ್ತೆಂದು ಅಭಿಮಾನದಿಂದ ಹೇಳುತ್ತಾನೆ! ಒಂದೇ ಮನಸ್ಸಿನಿಂದ ಅಡ್ಡಹಾದಿ ಹಿಡಿಯದೆ ದಿವಸಗಳನ್ನು ಕಳೆದಿದ್ದಾನೆ. ಒಮ್ಮೊಮ್ಮೆ ಮನೆಯ ನೆನಪಾಗಿ ತೀರ ದುಃಖವಾದಾಗ ತಾನು ತನ್ನ ಲಗ್ನದ ವೇಳೆಯಲ್ಲಿ ಸುತ್ತಿದ ರುಮಾಲವನ್ನು ಸುತ್ತಿಕೊಂಡು ತಿರುಗಾಡುತ್ತಾನೆ!

*  *  *  *

೧೭–೪–೩೭

ಒಂದು ಹಿಂದೀ ಹೊಟೆಲಿನಲ್ಲಿ ಉಳಿದ ಹಿಂದೀ ಸೇವಕರೊಡನೆ ಕೆಲಸಗಿತ್ತಿಯಾಗಿ ನಿಂತ ಐರಿಶ್ ಕನ್ನೆಯ ಕಥೆಯನ್ನು ಬರೆಯಬೇಕು. ಈಕೆ ಚೆಲುವೆ. ಇಡೀ ಬಿಡಾರದಲ್ಲಿ ಈಕೆ ಸುಳಿದರೆ ಎಲ್ಲರ ಹೃದಯವೂ ಕಂಪಿಸುತ್ತದೆ. ಅಸಿಸ್ಟಂಟ್ ಮ್ಯಾನೇಜರರು ಈಕೆಯ ಬೆನ್ನು ಹತ್ತಿ ಬೆಕ್ಕಿನ ಹಾಗೆ ತಿರುಗಾಡುತ್ತಾರೆ. ಈಕೆಯೂ ಸುರಿತವಳಾಗಿ ಕಾಣುತ್ತಾಳೆ. ತಾನೇ ಬೆಕ್ಕಿನಂತೆ ಆಡಿ ಉಳಿದವರ ಪ್ರಾಣಸಂಕಟವನ್ನು ನೋಡುವದರಲ್ಲಿ ಇವಳಿಗೆ ಆನಂದವಿದೆಯೆಂದು ತೋರುತ್ತದೆ. Alice in Wonder land (ಪಾತಾಳದಲ್ಲಿ ಪಾಪಚ್ಚಿ ಎಂದು ಶ್ರೀ ನಾ. ಕಸ್ತೂರಿಯವರ ಅನುವಾದ ಐದೆ) ಎಂಬ ಹೊಸ ಪುಸ್ತಕವನ್ನು ಬರೆಯಬೇಕಿನ್ನು!

---

## ೬೩

೧೮–೪–೩೭

'ದಿ ಬಿಲವ್ಡ್ ಎನಿಮಿ' ಎಂಬ ಚಲಚ್ಚಿತ್ರವನ್ನು ನೋಡಿದೆ. ಆಯರ್ಲಂಡದಲ್ಲಿ ನಡೆದಿದ್ದ ಚಳವಳಿಯ ಹೊತ್ತಿನಲ್ಲಿ ಸಂಭವಿಸಿದ ಕೆಲವು ಸಂಗತಿಗಳನ್ನು ಕುರಿತು ಈ ಕಥೆಯನ್ನು ಕಟ್ಟಿದ್ದಾರೆ. ಔರಂಗ್‌ಜೇಬ್, ಜಬುನ್ನೀಸಾ, ಶಿವಾಜಿ,–ಕಥೆಯು ಈ ಹಾದಿಯನ್ನು ಹಿಡಿದದ್ದು.

* * * *

೧೯–೪–೩೭

ಇಂದು ಇಲ್ಲಿಯ ಬೇಸಿಗೆಯು ಸುರುವಾಯಿತು. ಮೊನ್ನೆ ರಾತ್ರಿ ದೇಶದ ಎಲ್ಲ ಗಡಿಯಾರಗಳು ರಾತ್ರಿ ೧೨ ಗಂಟೆಗೆ ೧ ಗಂಟೆಯನ್ನು ತೋರಿಸಿದವು!

* * * *

೨೦–೪–೩೭

ಎಲ್ಲದರಲ್ಲಿಯೂ ತನ್ನ ಸ್ವತಂತ್ರ ಮತವಿರಬೇಕೆಂಬ ಹಂಬಲವುಳ್ಳ ಒಬ್ಬ ಭಾರತೀಯ ವಿದ್ಯಾರ್ಥಿಯು ಭೆಟ್ಟಿಯಾದ. ಹಿಟ್ಲರ್ ಹಾಗು ಸ್ಟ್ಯಾಲಿನ್ ಇವರಲ್ಲಿ ಏನೂ ಅಂತರವಿಲ್ಲವೆಂದು ಅವನ ಅಭಿಪ್ರಾಯ. ಮಾತುಮಾತಿನಲ್ಲಿ ಉದಾಹರಣೆಗಾಗಿ ಇನ್ನೊಂದು ವಾದಗ್ರಸ್ತ ವಿಷಯವನ್ನು ತಂದು ತನ್ನ ದೊಡ್ಡಿಸ್ತಿಕೆಯನ್ನು ತೋರಿಸುವ ಇಲ್ಲವೆ ಇನ್ನೊಬ್ಬರ ಹುಳುಕನ್ನು ಬಯಲಿಗೆಳೆಯುವ ರೀತಿಯು ಇವನದು. 'ಚಾಡಿಖೋರರಶಾಲೆ'ಯ ರೀತಿಯು ಸುಳ್ಳಲ್ಲವೆಂಬುದು ಕಂಡುಬಂದಿತು.

* * * *

ಇನ್ನೊಬ್ಬ ಭಾರತೀಯ. ಲಂಡನ್ ಬಿ. ಎ. ಆದ. ಇವನ 'ಕಮ್ಯುನಿಸ್ಟ' ರೀತಿಗಳನ್ನು ನೋಡಿ ಸ್ವದೇಶಕ್ಕೆ ಮರಳಲು ಸರಕಾರದಿಂದ ಇವನಿಗೆ ಪಾಸ್‌ಪೋರ್ಟ ದೊರೆಯಲಿಲ್ಲ. ಈಗ ಕಮ್ಯುನಿಸ್ಟ ಪುಸ್ತಕಗಳ ಅಂಗಡಿಯೊಂದನ್ನು ಇಟ್ಟು ಲಂಡನ್ನಿನಲ್ಲಿ ಜೀವಿಸುತ್ತಿದ್ದಾನೆ.

* * * *

ಒಬ್ಬ ಪಾರ್ಸಿ ಗೃಹಸ್ಥ. ಒಬ್ಬ ಆಂಗ್ಲ ಯುವತಿಯನ್ನು ಮದುವೆಯಾದ. ಆಕೆಯ ಮನಸ್ಸಿನಲ್ಲಿ ಭಾರತದಲ್ಲಿರುವದು ಬಂದಂತೆ ಕಾಣಲಿಲ್ಲ. ಅಂತೂ ಇಬ್ಬರೂ ಮರಳಿ ವಿಲಾಯತಿಗೆ ಬಂದರು. ಈತನಿಗೆ ಸಾಹಿತ್ಯದ ಅಭಿರುಚಿ ಹೆಚ್ಚು. ಆಗೀಗ ಸಣ್ಣ ಕತೆಗಳನ್ನೂ ಲೇಖಗಳನ್ನೂ ಬರೆದು ಆಂಗ್ಲ ಪತ್ರಿಕೆಗಳಿಗೆ ಕಳಿಸುತ್ತಾನೆ. ಬಹುಶಃ ಅವು ಸ್ವೀಕೃತವಾಗುವದಿಲ್ಲ. ಇದು ಕೇವಲ ಜನಾಂಗದ್ವೇಷವೆಂದು ಆಗ ಒದ್ದಾಡುತ್ತಾನೆ. ಆರು ತಿಂಗಳಿಗೊಮ್ಮೆ ಅಪ್ಪಿತಪ್ಪಿ ಒಂದು ಲೇಖವು ಸ್ವೀಕೃತವಾಗಿ ಅದರಿಂದ ರೊಕ್ಕ ಬಂದರೆ,– ಅಷ್ಟರಿಂದ ಜೀವನವು ಹೇಗೆ ಸಾಗಬೇಕು? ಮೂರು ನಾಲ್ಕು ಮಕ್ಕಳಿವೆ. ಕಾರಣ ಮೂವರು ನಾಲ್ವರು ವಿದ್ಯಾರ್ಥಿಗಳಿಗೆ 'ಬೋರ್ಡಿಂಗ್' ಮುಂತಾದ ಅನುಕೂಲತೆಗಳನ್ನು ಒದಗಿಸಿ ಹೊಟ್ಟೆ ತುಂಬಿಕೊಳ್ಳುತ್ತಾನೆ. ಅವನ ಹೆಂಡತಿಯೂ ಚೆನ್ನಾಗಿ ದುಡಿಯಬೇಕಾಗುತ್ತದೆ.

* * * *

ಇನ್ನೊಬ್ಬ ಭಾರತೀಯ. ಒಂದು ಮನೆ ಹಿಡಿದುಕೊಂಡಿದ್ದು ವಿದ್ಯಾರ್ಥಿಗಳಿಗೆ ಕೋಣೆಗಳನ್ನು ಬಾಡಿಗೆ ಕೊಟ್ಟು ಜೀವಿಸುತ್ತಾನೆ. ನನ್ನ ಪರಿಚಿತರೊಬ್ಬರು ಆ ಮನೆಯಲ್ಲಿಯ ಒಂದು ಕೋಣೆಯನ್ನು ನೋಡ ಹೋದರು. ಅವರಿಗೆ ಯಜಮಾನನು ಹೇಳಿದ: 'ನೀವು ಇಲ್ಲಿ ಸ್ವಚ್ಛಂದ ವಾಗಿರಬಹುದು. ಈ ಕೋಣೆಗೆ ಸ್ವತಂತ್ರವಾದ ಬಾಗಿಲಿದೆ. ಅಪರಾತ್ರಿ ಯಲ್ಲಿ ಸಹ ನೀವು ಎಂಥವರನ್ನು ಕರೆದುಕೊಂಡು ಬಂದರೂ ಇದೇಕೆಂದು ಕೇಳುವವರಿಲ್ಲ! ಇತ್ಯಾದಿ!' ಇದರ ಮೇಲಿಂದ ಸ್ವತಃ ಯಜಮಾನನ ಜೀವಿತವು ಹೇಗಿರಬಹುದೆಂದು ಸಹಜವಾಗಿ ಊಹಿಸಬಹುದು.

* * * *

ವಿವೇಕಾನಂದರ ಜನ್ಮತಿಥಿಯನ್ನು ಕೆಲವು ದಿನಗಳ ಹಿಂದೆ ಆಚರಿಸಲಾಯಿತು ಲಂಡನ್ನಿನಲ್ಲಿ. (ನಾನೀಗ ಆಕ್ಸಫರ್ಡಿಗೆ ಮರುಳಿ ಬಂದಿದ್ದೇನೆ.) ಶ್ರೋತೃವೃಂದದಲ್ಲಿ ಅನೇಕ ಆಂಗ್ಲ ಸ್ತ್ರೀ–ಪುರುಷರಿದ್ದರು. ರಾಮಕೃಷ್ಣಾಶ್ರಮದ ಕಾರ್ಯದರ್ಶಿಗಳು ಮಾತನಾಡಿದರು. ಇವರ ಮಾತಿನಲ್ಲಿ ಕೆಲವೊಂದು ಶಬ್ದಗಳ ಪುನರುಚ್ಚಾರಣೆಯು ಬಹಳವಾಯಿತು. ಮೊದಲಿನಿಂದ ಕೊನೆಯವರೆಗೆ ವಿಚಾರಗಳ ಮಾಲಿಕೆಯನ್ನೇ ಪವಣಿಸುವದರಿಂದ ಭಾಷಣದಲ್ಲಿ ಸ್ವಾರಸ್ಯವಿರಲಿಲ್ಲ. ಆ ಮೇಲೆ ಆರ್ಯಸಮಾಜದ ಸದಸ್ಯರೊಬ್ಬರು ಅಪ್ಪಣೆ ಕೊಡಿಸಿದರು. ಇವರ ಇಂಗ್ಲೀಷು ಅಷ್ಟಕ್ಕಷ್ಟೇ. ಅಲ್ಲದೆ ಮಾತಿನಲ್ಲಿ ಹುರುಳಿಲ್ಲ. ಕುಳಿತವರು ಬೇಸತ್ತರು. ಅಲ್ಲಿಂದ ಮದ್ರಾಸಿನವರಾದ– ಸರಕಾರಿ ನೌಕರರಾದ– ಒಬ್ಬ ಗೃಹಸ್ಥರ ಭಾಷಣವಾಯಿತು. ಇವರಿಗೆ ವಿವೇಕಾನಂದರಿಗಿಂತ ಹೆಚ್ಚಾಗಿ ತಮ್ಮ ಇಂಗ್ಲೀಷಿನಲ್ಲಿ ಅಭಿಮಾನವಿತ್ತೆಂದು ಕಾಣುತ್ತದೆ. ಅಲ್ಲದೆ ಇಂಗ್ಲಂಡಿನಲ್ಲಿ ನೆರೆದ ಸಾರ್ವಜನಿಕ ಸಭೆಯಲ್ಲಿ ಮಾತನಾಡುವ ಅಮೌಲ್ಯ ಸಂಧಿಯು ಬೇರೆ! ಅಧ್ಯಕ್ಷರು ಹತ್ತುನಿಮಿಷಗಳೆಂದು ಹೇಳಿದರೆ ಸಮಾರು ಮುಕ್ಕಾಲು ತಾಸಿನವರೆಗೆ ತಮ್ಮ (ವಿವೇಕಾನಂದರದಲ್ಲ!) ಪುರಾಣವನ್ನು ಬೆಳಿಸಿದರು. ತಮಗೆ ವಿವೇಕಾನಂದರಬಗ್ಗೆ ಏನೂ ಗೊತ್ತಿಲ್ಲವೆಂದು ಹೇಳಿ ವಿನಯವನ್ನು ತೋರಿಸಲು ಇವರಿಗೆ ೫ ನಿಮಿಷಗಳು ಬೇಕಾದವು.

ಇಂಗ್ಲೀಷು ಬಲ್ಲ ಆಂಗ್ಲರೆಲ್ಲ ಇವರ ಅಲಂಕೃತವಾದ ಇಂಗ್ಲೀಷನ್ನು ಕೇಳಿ ಗಾಬರಿಯಾದರು. ಆದರೆ ಸ್ವತಃ ಮಾತನಾಡಿದವರಿಗೆ,– ಇವರೆಲ್ಲ ದಂಗು ಬಡಿದಿರುವರೆಂದೆನಿಸಿದಂತೆ ತೋರಿತು.

ಒಬ್ಬ ಆಂಗ್ಲ ಸ್ತ್ರೀಯು ಅದ್ವೈತ ಸಿದ್ಧಾಂತವನ್ನೊಳಗೊಂಡ ಒಂದು ಕವಿತೆಯನ್ನು ಅಂದವಾಗಿ ಅಂದು ತೋರಿಸಿದಳು. ಇನ್ನೊಬ್ಬ ಆಂಗ್ಲ ಸ್ತ್ರೀಯು ಪತ್ತಲವನ್ನುಟ್ಟು ಸಭೆಗೆ ಬಂದಿದ್ದಳು. ( ಪತ್ತಲದಲ್ಲಿದ್ದ ಆಂಗ್ಲ ಸ್ತ್ರೀಯೊಬ್ಬಳು ಲುಂಗಿಯಲ್ಲಿದ್ದ ಭಾರತೀಯಳನ್ನು ಭೆಟ್ಟಿಯಾದರೆ ಹೇಗೆ? ಇದರಂತೆ ಧೋತರವನ್ನುಟ್ಟ ಆಂಗ್ಲ ಪಾದ್ರಿಯೊಬ್ಬನು ಹ್ಯಾಟ್ ಹಾಕಿದ ಭಾರತೀಯನನ್ನು ಸಂದರ್ಶಿಸಬಹುದು! )

---

## ೬೪

೨೧–೪–೩೭

ಈ ವಾರ 'ಆಡೆನ್' ಎಂಬ ಉದಯಮಾನ ಕವಿಯು ಬರೆದಿರುವ 'The ascent of 'F 6'' ಎಂಬ ನಾಟಕವನ್ನು ನೋಡಲು ಹೋಗಿದ್ದೆ. ಒಂದೆರಡು ತಿಂಗಳಿಂದ ಇದರ ಪ್ರಯೋಗವು ಒಂದೇ ಸಮನೆ ನಡೆದಿದೆ. ಪತ್ರಿಕೆಗಳ ಅಭಿಪ್ರಾಯಗಳೂ ಉತ್ತಮವಾಗಿವೆ.

ಹೊಸ ಚಕ್ರವರ್ತಿಗಳ ರಾಜ್ಯಾರೋಹಣದ ನಿಮಿತ್ತವಾಗಿ ಅಲೆಯಂಚೆಯಲ್ಲಿ 'ಸಾಮ್ರಾಜ್ಯದ ಹೊಣೆಗಳು' ಎಂಬ ವಿಷಯದ ಮೇಲೆ ಒಂದು ಭಾಷಣಮಾಲೆಯನ್ನು ಸುರುವು ಮಾಡಿದ್ದಾರೆ. ಇದರ ವಿಷಯವಾಗಿ ಪ್ರಾಸ್ತಾವಿಕ ಭಾಷಣವನ್ನು ಮುಖ್ಯ ಮಂತ್ರಿಗಳಾದ ಬಾಲ್ಡ್ವಿನ್ನರು ಮಾಡಿದರು. ಈ ಭಾಷಣದ ಬಗ್ಗೆ ಹೆಚ್ಚಿಗೆ ಬರೆಯಬೇಕಾಗಿಲ್ಲ. ಅವರ ಮಾತುಗಾರಿಕೆ, ವಿಶ್ವಾಸ,–ಇವೆಲ್ಲ ಅದ್ಭುತವಾದುವು. ಆದರೆ

ಅದರಿಂದ ನಮಗೇನು ಫಲ? 'What is he to Hecuba or Hecuba to him?'

ಈ ಭಾಷಣವನ್ನು ಕೇಳಿದಾಗಿನಿಂದ ಸುರುವಾದ ವಿಚಾರಸರಣಿಯನ್ನು ಬದಲಿಸಬೇಕೆಂದು ನಾಟಕಕ್ಕೆ ಹೋದರೆ,-ಅಲ್ಲಿಯೂ ಅದೇ ಗತಿ! (ಹಿಂದುಸ್ತಾನವು ಈಗ ಎಲ್ಲರ ಕಣ್ಣಿನಲ್ಲಿದೆ. ಅದೊಂದು ಅಗಾಧವಾದ ಪ್ರಶ್ನೆಯಾಗಿದೆ.) ಆದರೆ ನಾಟಕವನ್ನು ಬರೆದ ಕವಿಯು ಸಮತಾವಾದಿ. ಸ್ಪೇನದ ಯುದ್ಧದಲ್ಲಿ ಈಗ ಸ್ವತಃ ಭಾಗವಹಿಸಿದ್ದಾನೆ. ನಾಟಕದಲ್ಲಿ ಹುರುಳಿದೆ.

ನಾಟಕಗೃಹವು ತೀರ ಸಣ್ಣದಾಗಿತ್ತು. ಸುಮಾರು ೧೫೦ ಕುರ್ಚಿಗಳನ್ನು ಇಟ್ಟಿದ್ದರು. ಸಾಹಿತ್ಯಪ್ರೇಮಿಗಳನ್ನು ಬಿಟ್ಟು ಉಳಿದವರಾರೂ ಇತ್ತಕಡೆಗೆ ಹಾಯುವದಿಲ್ಲ. ಓಣಿಯಲ್ಲಿ ಕೇಳಿದರೆ ಆ ನಾಟಕಗೃಹದ ಹೆಸರು ಸಹ ಅನೇಕರಿಗೆ ಗೊತ್ತಿರಲಿಲ್ಲ! ಆದರೂ ವ್ಯವಸ್ಥೆಯು ಅಚ್ಚುಕಟ್ಟಾಗಿತ್ತು. ಹೊರಗೆ ಬೋರ್ಡಿನ ಮೇಲೆ ಹೊಸದಾಗಿ ಬಂದ ವಿಮರ್ಶೆಗಳನ್ನೆಲ್ಲ ಅಂಟಿಸಿದ್ದರು. ವಾಡಿಕೆಯಂತೆ ನಾಟಕವು ಮುಗಿದ ಮೇಲೆ ಎಲ್ಲ ನಟರೂ ಪ್ರೇಕ್ಷಕರ ದೃಷ್ಟಿಗೆ ಬಿದ್ದರು. ಅವರಲ್ಲಿದ್ದ ಸ್ವಾಮಿಯನ್ನು ನೋಡಿ ನೋಡಿ ಉಳಿದ ನಟರೂ ನಗುತ್ತಿದ್ದರು. ಬಿಳಿಯ ತೆರೆಗಳನ್ನು ಉಳಿದು ಮತ್ತಾವ ಆವರಣವೂ ಇರಲಿಲ್ಲ. ಈ ತೆರೆಗಳ ಮುಂದೆ ಪ್ರಯೋಗವು ಸಾಗಿತು. ಆಶ್ಚರ್ಯಕರವಾದ ಮಾತೆಂದರೆ,—ಆರಂಭದಲ್ಲಿಯಾಗಲಿ, ಅಂತ್ಯದಲ್ಲಿಯಾಗಲಿ,—ಎಲ್ಲೆಡೆಗೂ ಕೇಳಿ ಬರುವ ಆಂಗ್ಲ ರಾಷ್ಟ್ರಗೀತೆಯು-ಇಲ್ಲಿ ಮಾತ್ರ ಇರಲಿಲ್ಲ.

ನಾಟಕಕ್ಕೆ ಬೇಕಾದ ಸಾಮಾನು ತೀರ ಸ್ವಲ್ಪ! ಒಂದು ಡೇರೆ, ಪಾಂಥಸ್ಥರ ಗಂಟು, ಮೋರೆ-ಮುಸುಕೊಂದು, ಒಂದು ತಲೆ-ಬುರುಡಿ, (ಶೇಕ್ಸಪಿಯರನು ಹ್ಯಾಂಲೆಟ್ ನಾಟಕವನ್ನು ಬರೆದಂದಿನಿಂದ ಇದರ ಉಪಯೋಗವು ಮಿತಿ ಮೀರಿದೆ!) ತೆರೆಯ ಹಿಂದಿನಿಂದ ಒಂದು ಸಲ ಕೇಳಿ ಬರುವ ಬಜಂತ್ರಿ, ಮತಾಪು ಪೆಟ್ಟಿಗೆಯ ಬೆಳಕು,—ಇತ್ಯಾದಿ. ಪ್ರತಿಯೊಂದು ಪ್ರವೇಶವು ಮುಗಿದೊಡನೆ ದೀಪವನ್ನು ನಂದಿಸುತ್ತಿದ್ದರು.

ಕತ್ತಲೆಯಲ್ಲಿ ರಂಗಭೂಮಿಯು ಸಜ್ಜಾದ ಮೇಲೆ ಮತ್ತೆ ಬೆಳಕಾಗುತ್ತಿತ್ತು.

‘ಸೂಡೋಲ್ಯಾಂಡ್’ ಎಂದು ಒಂದು ದೇಶ. ಇದರ ವರ್ಣನೆಯಿಂದ ಭಾರತವೆಂದು ಸಹಜವಾಗಿ ತಿಳಿಯುವಂತಿದೆ. F. 6. ಎಂಬ ಪರ್ವತಶಿಖರವು ಹಿಮಾಲಯದ ಎವ್ಹರೆಸ್ಟ್ ಎಂಬದು ಸಹ ಸ್ಫುಟವಾಗುವದು. ಆಂಗ್ಲರ ವರ್ಚಸ್ಸನ್ನು ಕಾಯುವದಕ್ಕಾಗಿ ಈ ತುದಿಯನ್ನು ಮುಟ್ಟಬೇಕೆಂದು ಒಂದು ತಂಡವು ಸಿದ್ಧವಾಗುತ್ತದೆ. ಈ ತಂಡದ ಮುಖಂಡನ ಸ್ವಭಾವವಿಭಜನೆಯೇ ಇಲ್ಲಿಯ ಮುಖ್ಯ ವಸ್ತು. ಆ ಮೇಲೆ ಉಳಿದ ಪಾತ್ರಗಳು ಬರುತ್ತವೆ,–ಸ್ವಾರ್ಥಲೋಲುಪರು, ದೇಶಾಭಿಮಾನದ ಹೆಸರಿನಲ್ಲಿ ಯುವಕರನ್ನು ಮರಣಕ್ಕೆ ಗುರುಯಾಗಿಸುವ ಹೆಣ್ಣು, ಉಳಿದ ಸಾಹಸಿಗರು,–ಇತ್ಯಾದಿ. ನಾಯಕನು ತನ್ನ ಉದ್ದೇಶವನ್ನು ಸಾಧಿಸುತ್ತಾನೆ. ದೇಶಾಭಿಮಾನಕ್ಕಿಂತ ಸ್ವಾಭಿಮಾನವು ಅವನನ್ನು ಸಜ್ಜುಗೊಳಿಸಿತು. ಆದರೆ ಕೊನೆಗಾಣಿಸುವಷ್ಟರಲ್ಲಿ ಅವನಲ್ಲಿ ಹೊಸ ಜ್ಞಾನವು ಅಂಕುರಿಸಿ ಎಲ್ಲವೂ ವ್ಯರ್ಥವಾಗಿ ತೋರುತ್ತದೆ.

ಹಿಂದೀಯರ ವರ್ಣನೆಯಲ್ಲಿ ಸಹಾನುಭೂತಿಯಿದೆ. ಒಬ್ಬ ರಾಜಕಾರಣಪಟುವು: “The truth is that the natives hate us and would like us to go to hell,–and stay there. But I am not a Bolshevic to tell the truth” (ಸತ್ಯವನ್ನೇ ಹೇಳುವುದಾದರೆ ಇಲ್ಲಿಯ ಸ್ಥಾನಿಕರು ನಮ್ಮನ್ನು ದ್ವೇಷಿಸುತ್ತಾರೆ. ಮತ್ತು ನಾವು ನರಕಕ್ಕೆ ಹೋಗಿ ಅಲ್ಲಿಯೆ ಇದ್ದುಬಿಟ್ಟರೆ ಒಳ್ಳೇದೆಂದು ತಿಳಿದಿದ್ದಾರೆ. ಆದರೆ ನಾನೇಕೆ ಸತ್ಯ ಹೇಳಲಿ? ಸತ್ಯವನ್ನು ಹೇಳಲು ನಾನೇನು ಬೋಲ್‌ಶೇವಿಕನಲ್ಲ.) ಎಂದು ಹೇಳುತ್ತಾನೆ! ಪರ್ವತದ ಅಡಿಯಲ್ಲಿಯ ಜನರು ಉತ್ಸವದಿಂದ ಮೆರವಣಿಗೆ ಹೊರಡಿಸಿದ ವರ್ಣನೆಯಿದೆ,–ಇದನ್ನು ತೀರ ಅಸಂಬದ್ಧವಾಗಿ ತೋರಿಸಿದ್ದಾರೆ. ಕನ್ನಡಕಗಳನ್ನು ಇರಿಸಿಕೊಂಡು ಶಾಟಿಯನ್ನು ಹೊತ್ತುಕೊಂಡ ಸ್ವಾಮಿಯು ಬರುತ್ತಾನೆ. ಹಿಂದೀಯರಂತೆ ಈತನದು ಕಾಫಿ ಬಣ್ಣ. ರಾಮಕೃಷ್ಣಾಶ್ರಮದವರಂತೆ ವೇಷ.

ಇವನ ತತ್ವಜ್ಞಾನವನ್ನು ನಾಟಕಕಾರನು ಚೆನ್ನಾಗಿ ವಿಶದಗೊಳಿಸಿದ್ದಾನೆ. ಆದರೂ ಸ್ವಾಮಿಯು ಸಹ ಅಪೂರ್ಣನೆಂದು ಒತ್ತಿ ಹೇಳಲಾಗಿದೆ.

ಮುಖ್ಯ ವಸ್ತುವು ಸಣ್ಣ ಸಣ್ಣ ಪ್ರವೇಶಗಳಲ್ಲಿ ತೀವ್ರವಾಗಿ ಕಾಣಿಸುತ್ತದೆ. ನಾಯಕನು ಡಾಂಟೆಯ ಕಾವ್ಯವನ್ನು ಓದುತ್ತ, ಜೀವನದ ಬಗ್ಗೆ ವಿಚಾರಿಸುತ್ತ ಒಂದು ದಿನ್ನೆಯ ಮೇಲೆ ಕುಳಿತಿರುವದು,–ಒಂದು ಪ್ರವೇಶ. ಆಂಗ್ಲ ರಾಜಕಾರಣಪಟುಗಳು 'F. 6.' ದ ಬಗ್ಗೆ ವಿಚಾರ ಮಾಡುತ್ತಿರುವದು,–ಎರಡನೆಯ ಪ್ರವೇಶ, ಇತ್ಯಾದಿ.

ಆಲೆಯಂಚೆಯ ಉಪಯೋಗವನ್ನು ಇಲ್ಲಿ ಬಹಳ ಜಾಣತನದಿಂದ ಮಾಡಿದ್ದಾರೆ. ರಾಜಕಾರಣಪಟುಗಳು ಆಲೆಯಂಚೆಗಂಬದ ಎದುರಿಗೆ ನಿಂತು ಮಾಡುವ 'ವಿಚಿತ್ರ' ಭಾಷಣಗಳು; ಸಣ್ಣ ಮನೆಯಲ್ಲಿ ಕುಳಿತು ಅವುಗಳನ್ನು ಕೇಳಿ ತಮ್ಮ ಮನಸ್ಸನ್ನು ಹಾರ್ಪಡಿಸುವ ತರುಣ ದಂಪತಿ ಗಳು,–ಈ ಎರಡೂ ರೀತಿಗಳನ್ನು ರಂಗಭೂಮಿಯ ಮೇಲೆ ತೋರಿಸು ತ್ತಾರೆ. ದಂಪತಿಗಳ ಮಾತುಗಳನ್ನು ಹಿಮ್ಮೇಳದಂತೆ ಉಪಯೋಗಿ ಸಿದ್ದಾಗಿದೆ. 'ವಿಚಿತ್ರ ಭಾಷಣ'ಗಳೆಲ್ಲ 'ಪ್ಯಾರಡಿ' (ಅಣಕುವಾಡು) ಗದ್ಯದ ರೀತಿಯಲ್ಲಿವೆ. ದಂಪತಿಗಳ ಮಾತು ವಿನೋದಮಯ ಪ್ರಾಸಿನಿಂದ ತುಂಬಿದ ವಿಡಂಬನಾಕಾವ್ಯವಾಗಿದೆ. ಮುಖ್ಯ ವಸ್ತುವಿನಲ್ಲಿಯ ಸಂಭಾ ಷಣೆಯು ಬಹುತರವಾಗಿ ಗದ್ಯದಲ್ಲಿ; ಅಲ್ಲಲ್ಲಿ ಪದ್ಯವು ಸುಳಿಯುತ್ತದೆ. ಒಂದೆರಡು ಕಡೆಗೆ ಗೀತಗಳಿವೆ.

ಒಟ್ಟಾರೆ ಎಲ್ಲ ರೀತಿಯಿಂದ ನಾಟಕವು ಕ್ರಾಂತಿಕಾರಕವಾಗಿದೆ.



೬೫

೨೫—೪—೩೭

ಇಲ್ಲಿಯ ಒಬ್ಬ ಪ್ರೊಫೆಸರರ ಚಿತ್ರವು ಕಣ್ಣು ಕಟ್ಟುವಂತಿದೆ. ಒಬ್ಬ 'ಲಾರ್ಡ'ರ ಎರಡನೆಯ ಮಕ್ಕಳಾದ್ದರಿಂದ 'ದಿ ಆನರೇಬಲ್' ಎಂಬ ಪದವಿ ಹಾಗು ಅದರೊಡನೆ ಒಂದಿಷ್ಟು ಸಂಪತ್ತು ಬಂದಿವೆ. ಬುದ್ಧಿಶಾಲಿಗಳಿವರು. ಮೊದಲಿನಿಂದ ರಾಜಕಾರಣದಲ್ಲಿ ಪ್ರತಿಗಾಮಿಗಳು. ಆದರೆ ಇವರ ಪ್ರೀತಿ-ದ್ವೇಷಗಳು ಬಹಳ ಹಗುರಾಗಿ ಚೇತನಗೊಳ್ಳುವವು. ಒಮ್ಮೆ ಒಂದು 'ಫ್ಯಾಸಿಸ್ಟ್' ಸಭೆಗೆ ಹೋಗಿದ್ದರು. ಅಲ್ಲಿ ಗಲಭೆಯಾಗಿ ಒಬ್ಬ 'ಕಮ್ಯುನಿಸ್ಟ್' ಮುದುಕನನ್ನು ಅನೇಕ 'ಫ್ಯಾಸಿಸ್ಟ್' ಯುವಕರು ಕೂಡಿ ಹೊಡೆಯುವದು ಕಣ್ಣಿಗೆ ಬಿದ್ದಿತು. ಪ್ರೊಫೆಸರರು ಭೂತದಯೆಯಿಂದ ಪ್ರೇರಿತರಾಗಿ ಬಿಡಿಸಲುಹೋದರು. ಆಗ ಇವರಿಗೇ ಏಟು ಬಿದ್ದವು. ಅಂದಿನಿಂದ 'ಫ್ಯಾಸಿಸ್ಟ'ರ ಮೇಲಿದ್ದ ಇವರ ದ್ವೇಷಕ್ಕೆ ಆರಂಭವಾಯಿತೆಂದು ಇವರ ಗೆಳೆಯರು ಹೇಳುತ್ತಾರೆ.

ಪ್ರೊಫೆಸರರು ಒಳ್ಳೆ ಧಾರ್ಮಿಕರು. ಅವರಿಗೆ 'ಕಮ್ಯುನಿಸ್ಟ್' ಮತದ ಮೇಲೆ ಪ್ರೀತಿಯಿರುವದೇನೋ ನಿಜ,-ಆದರೆ ಅದು ಧಾರ್ಮಿಕ ಕಾರಣಗಳ ಮೂಲಕ. 'ಕಮ್ಯುನಿಸ್ಟ್' ಜನರೇ ನಿಜವಾದ ಕ್ರಿಸ್ತೀಯರೆಂದೂ ಸಮತಾವಾದವೇ ಕ್ರಿಸ್ತನ ಪುನರಾಗಮನವೆಂದೂ ಅವರ ದೃಢ ವಿಶ್ವಾಸವಾಗಿದೆ. ಕೂಲಿಕಾರರ ಸಂಪು ಇಲ್ಲಿಯ 'ಪ್ರೆಸ್‌ಡ್ ಸ್ಟೀಲ್' ಮೊದಲಾದ ಹಳ್ಳಿಗಳಲ್ಲಿ ನಡೆದಾಗ ಪ್ರೊಫೆಸರರು ಅಲ್ಲಿ ಮಾತನಾಡಲು ಹೋಗುತ್ತಾರೆ. ಕ್ರಿಸ್ತೀಧರ್ಮವನ್ನು ಬಿಟ್ಟು ಅವರು ಮಾತನಾಡಬೇಕೆಂದು ಸಂಪಿನ ಮುಖಂಡರ ಹಂಬಲು!

ಪ್ರೊಫೆಸರರು ಒಂದು ಮೋಟರನ್ನು ಇಟ್ಟಿದ್ದಾರೆ. ಇದಕ್ಕಾಗಿ ಇವರ 'ಕಮ್ಯುನಿಸ್ಟ್' ಗೆಳೆಯರು ಇವರನ್ನು ಪೀಡಿಸಹತ್ತಿದರು. ಆಗ ತಾವು ಮೋಟರನ್ನು ಉಪಯೋಗಿಸಲಿಲ್ಲ. ಪ್ರೊಫೆಸರರು ತಮ್ಮ

ಪತ್ನಿಗೇ ಅದನ್ನು ಬಿಟ್ಟುಕೊಟ್ಟರು. ಸಂಪಿನ ವೇಳೆಯಲ್ಲಿ ಪ್ರೊಫೆಸರರ ಸ್ನೇಹಿತರು ಅದನ್ನು ಉಪಯೋಗಿಸುತ್ತಾರೆ! ಮುಂದೆ ಪ್ರೊಫೆಸರರು ಮೋಟರ್ ಸೈಕಲ್ಲನ್ನು ಕೊಂಡರು. ಅದರ ಮೇಲೆ ಸಹ ಸ್ನೇಹಿತರ ಟೀಕೆ ಯಾಯಿತು. ಈಗ ಬೈಸಿಕಲ್ಲೊಂದನ್ನು ಬಿಟ್ಟು ಮತ್ತಾವ ವಾಹನವನ್ನೂ ಅವರು ಉಪಯೋಗಿಸುವದಿಲ್ಲ!

ಪ್ರೊಫೆಸರರ ಮನೆಯು ನೋಡತಕ್ಕಂತಹದು. ಅಟ್ಟದ ಮೇಲೆ ಒಂದು ಕೋಣೆಯಲ್ಲಿ ಬಾಣಂತಿಯಾದ ಇವರ ಪತ್ನಿಯು ಕೂಸಿನೊಡನೆ ಮಲಗಿರುತ್ತಾಳೆ. ನಡುವೆ ದಿವಾಣಖಾನೆಯಲ್ಲಿ ಅತ್ತಿಂದಿತ್ತ ತಿರುಗಾಡಿ ಒಂದು ಪುಸ್ತಕವನ್ನೋದುತ್ತ ತಮ್ಮ ಉಪನ್ಯಾಸಗಳ ಸಿದ್ಧತೆಯನ್ನು ಮಾಡುವರು ಪ್ರೊಫೆಸರರು! ಕೆಳಗೆ ಇವರ ಮನೆಯು ಎಲ್ಲ ಕೂಲಿಕಾರ ರಿಗೂ ತೆರೆದಿಟ್ಟಿದೆ. ಹಗಲು ರಾತ್ರಿ ಅಲ್ಲಿ ದೊಡ್ಡ ದನಿಯಲ್ಲಿ ಚರ್ಚೆಯು ಸಾಗಿರುವದು!

*　　　*　　　*　　　*

೨೫—೪—೩೭

ಒಬ್ಬ ಶ್ರೀಮಂತ ಭಾರತೀಯ ವಿದ್ಯಾರ್ಥಿ. ಆಕ್ಸಫರ್ಡಿನಲ್ಲಿ ಬೈರನ್ನ ನಂತೆ ಇರುತ್ತಿದ್ದಾನೆ. ಆಂಗ್ಲ ಸಮಾಜದ ರೀತಿಗಳಲ್ಲಿ ಬಲ್ಲಿದನು. ಇನ್ನೂ ಚಿಕ್ಕವ. ವ್ಯವಹಾರದ ತಿಳುವಳಿಕೆಯಿಲ್ಲ. ಬೈರನ್ನನ ರೀತಿಯು ಅವನು ಪ್ರಯತ್ನಿಸಿ ಗಳಿಸಿದ ಭಾವನಾಲಹರಿ ಮಾತ್ರ. ಇಲ್ಲಿಯ ಹೆಣ್ಣುಮಕ್ಕಳ ಕಾಲೇಜಿನಲ್ಲಿ ಒಬ್ಬ ಆಂಗ್ಲ ವಿದ್ಯಾರ್ಥಿನಿಯಿದ್ದಾಳೆ. ನೋಡಲು ತುಸು ಚೆಲುವೆ. ಈಕೆ ಆತನ ಪ್ರಾಣಪದಕ. ಈತನ ಸಂಪತ್ತನ್ನು ನೋಡಿ ಲಗ್ನವಾಗಲು ಒಪ್ಪಬಹುದೆಂಬ ಸೂಚನೆಯನ್ನು ಆಕೆ ಕೊಟ್ಟಂತೆ ಕಾಣು ತ್ತದೆ. ಈಗ ಆಕೆಯನ್ನು ಲಗ್ನವಾಗಬೇಕೆಂಬ ವಿಚಾರದಲ್ಲಿದ್ದಾನೆ. 'I for one would not waste two seconds on her' (ನಾನೊ ಎರಡು ಕ್ಷಣ ಕೂಡ ಅವಳಿಗಾಗಿ ಕಳೆಯಲಾರೆ) ಎಂದು ಶರ್ವುಡ್ಡನು ಹೇಳು ತ್ತಿದ್ದ.

---

## ೬೬

ಆಕ್ಸಫರ್ಡ

೨೬-೪-೩೭

ನನ್ನ ಜೀವನದಲ್ಲಿ ಇದೊಂದು ಮಹತ್ವವಾದ ವಾರವೆನ್ನಬಹುದು. ಕೇಂಬ್ರಿಜ್ ವಿಶ್ವವಿದ್ಯಾಲಯವನ್ನು ನೋಡಿ ಬಂದೆ. ಶೇಕ್ಸಪಿಯರನ ಜಿಲ್ಹೆಯಾದ ವಾರ್‌ವಿಕ್‌ಶಾಯರದಲ್ಲಿ ತಿರುಗಾಡಿದೆ. ಅವನ ಜನ್ಮಸ್ಥಾನವಾದ ಸ್ಟ್ರ್ಯಾಟ್‌ಫರ್ಡಿಗೆ ಹೋಗಿ ಬಂದೆ!

ಕೆಂಬ್ರಿಜ್ಜಿಗೆ ನಾನು ಹೋದಾಗ ಮಳೆಯು ಬಿಟ್ಟಿರಲಿಲ್ಲ. ಅದರಿಂದ ನನ್ನ ಅರ್ಧ ಉತ್ಸಾಹವು ಕುಂದಿತು. ಆದರೂ ಎಲ್ಲಕಡೆಗೆ ತಿರುಗಾಡಿದೆ. ವಸಂತಮಾಸದಲ್ಲಿ ವಿಲಾಯತಿಯ ಸೌಂದರ್ಯಕ್ಕೆ ಸರಿಯಿಲ್ಲ. ಹೆಸರು ಗೊತ್ತಿಲ್ಲದ ಬಣ್ಣಬಣ್ಣದ ಹೂವುಗಳನ್ನು ನೋಡಿ,– 'ಹೆಸರೊಂದು ಗೊತ್ತಿದ್ದರೆ!' ಎಂದು ಮನವು ಮರಗುವದು; ಕಾಲೇಜುಗಳ ಹಿಮ್ಮಗ್ಗಲಿನ ಹುಲ್ಲೆಲಗಳನ್ನು ನೋಡಿ ತಣಿಯುವದು. 'ಮಿಲ್ಟನ್ಸ ವಾಕ್' ಎಂಬ ಸೀಳುದಾರಿಯೊಂದಿದೆ. ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಮಿಲ್ಟನ್ ಮಹಾಕವಿಯು ಒಬ್ಬನೇ ಇಲ್ಲಿ ತಿರುಗಾಡುತ್ತಿದ್ದನಂತೆ! ಬೇಕನ್, ನ್ಯೂಟನ್, ಟೆನಿಸನ್ ಮೊದಲಾದ ಪ್ರತಿಭಾಶಾಲಿಗಳು ವಿದ್ಯೆ ಹೊಂದಿದ ಟ್ರಿನಿಟಿ ಕಾಲೇಜನ್ನು ನೋಡಿದೆ; ಇಲ್ಲಿಯ ಪ್ರಾರ್ಥನಾ ಮಂದಿರವು ಅದ್ಭುತವಾಗಿದೆ. ಎತ್ತರವಾದ ಕಟ್ಟಡ, ಬಣ್ಣಬಣ್ಣದ ಚಿತ್ರಗಳನ್ನು ಬರೆಯಿಸಿಕೊಂಡ ಕಿಟಕಿಗಳ ಕಾಜುಗಳು, ಓಂಕಾರದಂತೆ ಗಂಭೀರವಾದ 'ಆರ್ಗನ್' ಎಂಬ ವಾದ್ಯದ ಸ್ವರ,– ಇದರಿಂದ ಮನಸಿನಲ್ಲಿ ಒಂದು ಆದರವು ಉತ್ಪನ್ನವಾಗುವದು. ಸ್ಪೆನ್ಸರನು ಕಲಿತ ಪೆಂಬ್ರೋಕ್ ಕಾಲೇಜು, ವರ್ಡ್ಸ್‌ವರ್ಥನ ಕಾಲೇಜು,– ಎಲ್ಲವನ್ನೂ ನೋಡಿ ತೃಪ್ತಿ ಹೊಂದಿದೆ.

ಆದರೂ ಆಕ್ಸ್‌ಫರ್ಡಿನ ಶಿಸ್ತು ಕೆಂಬಿಜ್‌ದಲ್ಲಿಲ್ಲ. ಆಕ್ಸ್‌ಫರ್ಡ್ದು ಪುಣೆ ಯಂತೆ. ಕೇಂಬ್ರಿಜ್ಜು ಧಾರವಾಡದಂತೆ. ಪುಣೆಗಿಂತ ನನಗೆ ಧಾರವಾಡದ ಮೇಲೆ ಹೆಚ್ಚು ಪ್ರೀತಿ. ಆದರೆ ಕೇಂಬ್ರಿಜ್ಜಿನ ವಿಷಯದಲ್ಲಿ ಅದಕ್ಕೆ ತೀರ ವಿರುದ್ಧವಾಗಿದೆ. ಇದೊಂದು ಹುಚ್ಚೆನ್ನಿರಿ ಬೇಕಾದರೆ! ನನ್ನ ಮನಸ್ಥಿತಿ ಯಿದ್ದುದು ಹೀಗೆ!

ವಾರ್‌ವಿಕ್ ಎಂಬುದು ಇತಿಹಾಸ ಪ್ರಸಿದ್ಧ ಪಟ್ಟಣ. ಅನೇಕ ಶತ ಮಾನಗಳಿಂದ ಇಲ್ಲಿಯ ಒಡೆಯರು ವಿಲಾಯತಿಯ ಇತಿಹಾಸದಲ್ಲಿ ಮಹತ್ವವನ್ನು ಗಳಿಸಿದ್ದಾರೆ. ಈಗ ಒಡೆಯರ ಪ್ರಭುತ್ವವು ಹೋಗಿದೆ. ಆದರೆ ಪೂರ್ವಕಾಲದ ವೈಭವದ ಕುರುಹುಗಳನ್ನು ಇನ್ನೂ ಕಾಣ ಬಹುದು. ಈ ಜಿಲ್ಹೆಗೆ 'Leafy Warwick-shire' ಎಂದು ಹೆಸರು. ನೋಡಿದಲ್ಲೆಲ್ಲ ಚಿಗಿತು ನಿಂತ ಗಿಡಗಳು. ಎಲ್ಲ ಕಡೆಗೂ ಹಸಿರು. ಒಂದು ಬೊಟ್ಟಿನಷ್ಟು ಬರಿ ನೆಲವನ್ನು ನೋಡಬೇಕೆಂದರೆ ಸಿಕ್ಕುವದಿಲ್ಲ! ನಡು ನಡುವೆ 'ಚೆರಿ' ಗಿಡಗಳು ಮೈತುಂಬ ಹೂ ಬಿಟ್ಟು ನಿಂತ ತೋಟಗಳು. ಇಲ್ಲಿಯೇ ಈ ತೋಟಗಳಲ್ಲಿ ಒಂದು ಮರದಡಿಯಲ್ಲಿ ಮಲಗಿ ಆಯುಷ್ಯದ ಅವಧಿಯು ತೀರಿಹೋದ ಮೇಲೆ ಎದ್ದೇಳಬೇಕೆಂದು ಮನಸ್ಸು ಧೇನಿಸಿತು! ಅದೆಂತಹ ಸೌಂದರ್ಯ!

ಇಲ್ಲಿಯ ಜನರು ಭಾರತೀಯರನ್ನು ಅಷ್ಟೊಂದು ಸಲ ಕಂಡಂತೆ ಕಾಣುವದಿಲ್ಲ. ನಮ್ಮನ್ನು ಪಿಕಿ ಪಿಕಿ ನೋಡುತ್ತಿದ್ದರು. ವಾರ್‌ವಿಕ್ ಪಟ್ಟಣದ ಕೋಟೆಯನ್ನು ನೋಡಲು ನಾವು ಮೊದಲುಮಾಡಿದೆವು. ಇದರ ಒಡೆಯರು (Earl) ಆಗೀಗ ಬಂದು ಇಲ್ಲಿ ವಾಸಿಸುತ್ತಾರೆ. ಕೋಟೆಯ ತೋಟಗಳಲ್ಲಿ ನವಿಲು ನರ್ತಿಸುವ ಚಿತ್ರಗಳನ್ನು ನೋಡಿದ್ದೆ. ನಾವು ಹೋದಾಗ ನಿಜವಾಗಿ ತೋಟದಲ್ಲಿ ನವಿಲೊಂದು ತನ್ನ ಗರಿ ಹರಹುತ್ತಿತ್ತು. ಏವ್ಹನ್ ನದಿಯ ದಂಡೆಯ ಮೇಲೆ ಈ ಕೋಟೆಯನ್ನು ಮನೋಹರವಾಗಿ ಕಟ್ಟಿದ್ದಾರೆ. ನದಿಯ ಆಚೆಗೆ ಅಡವಿ. ಆರ್ಡೆನ್ ಎಂಬ ಅಡವಿಯು ಹಿಂದಿನ ಕಾಲದಲ್ಲಿ ಇಲ್ಲೆಲ್ಲ ಹಬ್ಬಿತ್ತು. ಮೊದಲು ಕಲ್ಲ ಬಂಡೆಗಳೊಳಗಿಂದ ಸುರಂಗ ಹೊಡೆದ ದಾರಿ; ಕೋಟೆಯನ್ನು ಸುತ್ತಿದ

ಅಗಲವಾದ ಗೋಡೆಯನ್ನು ಭೇದಿಸುವ ಮಹಾದ್ವಾರದೊಳಗಿಂದ ಹಾಯ್ದು ಇದನ್ನು ನಾವು ತುಳಿಯಬೇಕು. ಇಲ್ಲಿಂದ ಮುಂದೆ ಕೋಟೆ ಯೊಳಗಿನ ತೋಟವು ಕಾಣುವದು. ಅಲ್ಲಿ ತಿರುಗಾಡಿ ಮುಂದೆ ಹೋದಾಗ ಆಳವಾದ ಕಂದಕವನ್ನು ದಾಟಿ ಇನ್ನೊಂದು ಮಹಾದ್ವಾರದೊಳ ಗಿಂದ ಕೋಟೆಯಲ್ಲಿಯ ವಸತಿಸ್ಥಾನವನ್ನು ಪ್ರವೇಶಿಸುವೆವು. ಇಲ್ಲಿಯ ಕೆಲವೊಂದು ಮಂದಿರಗಳು ಮಾತ್ರ ಪ್ರೇಕ್ಷಕರಿಗಾಗಿ ತೆರೆದಿವೆ. ಒಡೆಯರ ಕುಟುಂಬದವರಿಗಾಗಿ ಹಿಂದೆ ತಯಾರಿಸಿದ ಪ್ರಾರ್ಥನಾಮಂದಿರ; ಸಭಾ ಮಂದಿರದಲ್ಲಿ ತೂಗುಹಾಕಿದ್ದ ಪೂರ್ವಕಾಲದ ತೆರೆಗಳು, ಆಯುಧಗಳು; ವ್ಹ್ಯಾನ್‌ಡಾಯಿಕ್, ರ್‍ಯುಬೆನ್ ಮೊದಲಾದ ಚಿತ್ರಶಿಲ್ಪಿಗಳ ಕೃತಿಗಳು; ಹಿಂದೆ ಒಡೆಯರು ತಮ್ಮ ಸೇವಕರಿಗಾಗಿ ಅಡಿಗೆ ತಯಾರಿಸಲು ಮಾಡಿಸಿದ ದೆವ್ವದಂತಹ ಪಾತ್ರೆಗಳು; ಉಕ್ಕಿನ ಚಿಲಕತ್ತುಗಳು, 'ಏನ್' ಎಂಬ ರಾಣಿಯ ಹಾಸಿಗೆ,–ಇವೆಲ್ಲವನ್ನು ನೋಡಿ ಮನಸ್ಸು ಬೆರಗಾಗುವದು.

'ಏನ್' ರಾಣಿಯ ಪತಿಯ ಚಿತ್ರವೊಂದನ್ನು ತೂಗು ಹಾಕಿದ್ದಾರೆ. 'He was fatter than that, later' (ಮುಂದೆ ಮುಂದೆ ಅವನು ಇದಕ್ಕೂ ದಪ್ಪನಾಗಿದ್ದ.) ಎಂದು ಒಬ್ಬ ಆಂಗ್ಲ ಸ್ತ್ರೀಯು ಉದ್ಗಾರ ತೆಗೆದಳು, ಅದನ್ನು ನೋಡಿ. ಎರಡು ಮೂರು ಶತಮಾನಗಳ ಹಿಂದೆ ಈ ಕೋಟೆಯ ಒಡೆಯರೊಬ್ಬರ ಮಗಳು ನಟಿಯಾಗಿದ್ದಳು. 'ರಂಗ ಭೂಮಿಯ ಸಂಪರ್ಕ ಬೇಡ. ನಟನನ್ನು ಮದುವೆಯಾಗಬೇಡ' ಎಂದು ತಂದೆಯು ಆಕೆಗೆ ಎಚ್ಚರಿಕೆ ಕೊಟ್ಟನು. ಆದರೆ ಅಭಿನಯವಿಶಾರದಳಾ ಗಿದ್ದಲ್ಲದೆ ಒಬ್ಬ ನಟನೊಡನೆ ಆಕೆ ಇರಹತ್ತಿದಳು. ಒಮ್ಮೆ ದುಡ್ಡಿಲ್ಲದೆ ತೊಂದರೆಯಾಗಿ 'ದೇಹಿ' ಎಂದು ತಂದೆಯೆಡೆಗೆ ಬರಲು, 'ನಟನನ್ನು ಮದುವೆಯಾಗಬೇಡವೆಂದು ಹೇಳಿದ್ದೆನಲ್ಲ?' ಎಂದು ಕುಪಿತನಾಗಿ ತಂದೆಯು ಕೇಳಿದನು. 'Lord father! do you think I did?' (ಪೂಜ್ಯರಾದ ತಂದೆಯವರೆ! ನಾನು ಮದುವೆಯಾಗಿರುವೆನೆಂದು ತಿಳಿದಿರಾ?) ಎಂದು ತಿರುಗಿ ಪ್ರಶ್ನೆ ಮಾಡಿದಳು ಮಗಳು!

ನೂರಾರು ಕೊಲೆಗಳು, ರಕ್ತಪಾತಗಳು, ಒಳಸಂಚು, ದ್ರೋಹ,

ಹಗೆತನ, ಅನ್ಯಾಯ,–ಇವುಗಳ ತವರುಮನೆಯಾಗಿತ್ತು ಈ ಕೋಟೆ. ಪ್ರಜಾಸತ್ತಾತ್ಮಕ ಕಾಲದಲ್ಲಿ, ವಿಷದಂತವನ್ನು ಕಿತ್ತೊಗೆದ ನಾಗರ ಹಾವಿನಂತೆ ನೋಡಲು ಸುಂದರವಾಗಿದೆ,–ಕೇವಲ ಲಲಿತಕಲೆಯ ತವರುಮನೆಯಾಗಿ ಶೋಭಿಸುತ್ತದೆ ಕೋಟೆಯೀಗ! ಆದರೆ ಈ ಕಲೆಯ ಸೌಂದರ್ಯವು ಗತಿಸಿ ಹೋದ ಚೆಲುವು. ಹೊಸ ಯುಗದ ಹೊಸ ಚೆಲುವೆ ಇನ್ನೂ ಬಂದಿಲ್ಲ; ಬರಬೇಕೆನ್ನುತ್ತಾಳೆ!

ಸ್ಟ್ರಾಟ್‌ಫರ್ಡ ಪಟ್ಟಣವನ್ನು ನಾವು ಮುಟ್ಟಿದಾಗ ಮಧ್ಯಾಹ್ನ ೧೨ ಗಂಟೆಯಾಗಿತ್ತು. ಶೇಕ್ಸಪಿಯರನ ಕಾಲದಲ್ಲಿ ಇದೊಂದು ಸಣ್ಣ ಹಳ್ಳಿಯಾಗಿತ್ತು. ಈಗೊಂದು ಸಣ್ಣ ಪಟ್ಟಣವಾಗಿ ಬೆಳೆದಿದೆ. ಕವಿಶ್ರೇಷ್ಠನ ಜನ್ಮಸ್ಥಾನವಿದು ಈಗ ಜಗತ್ತಿಗೇ ಪುಣ್ಯಕ್ಷೇತ್ರವಾಗಿದೆ. ಕವಿಕೀರ್ತಿಯು ಎಷ್ಟೊಂದು ಘನತೆಗೇರಬಹುದೆಂಬುದನ್ನು ಶೇಕ್ಸಪಿಯರನು ಚಿರಂತನವಾಗಿ ಜಗತ್ತಿಗೆ ತೋರಿಸಿದ್ದಾನೆ! ವಿಶ್ವದ ಅದ್ಭುತಗಳಲ್ಲಿ ಈ ಕೀರ್ತಿಯೊಂದು!

ನಿಲ್ಮನೆಯಲ್ಲಿಳಿದು ಒಂದು ಕೈಪಿಡಿಯನ್ನು ಸಂಪಾದಿಸಿ ಮನಬಂದತ್ತ ಈ ಚಿಕ್ಕ ಪಟ್ಟಣದಲ್ಲಿ ತಿರುಗಾಡಿದೆವು. ಮಂದವಾದ ಹೊಂಬಿಸಿಲು ಎಲ್ಲೆಡೆಗೆ ಪಸರಿಸಿತ್ತು. ಚಹ ಕುಡಿದು ಆ ಮೇಲೆ ಯಾತ್ರೆಯನ್ನು ಪ್ರಾರಂಭಿಸಬೇಕೆಂದು ನಿಶ್ಚಯಿಸಿ ಎಲ್ಲರೂ ಒಂದು ಚಹದಂಗಡಿಯನ್ನು ಪ್ರವೇಶಿಸಿದೆವು. ಲಂಡನ್ನಿನಲ್ಲಿಯ ಆಂಗ್ಲರ ಬಿಗುವಿನ ಮೋರೆಗಳು ಇಲ್ಲಿ ಕಾಣಲಿಲ್ಲ. ಜನರು ಒಳ್ಳೆಯವರು. ನಮ್ಮ ಪ್ರಶ್ನೆಗಳಿಗೆ ಮಧುರವಾಗಿ ಉತ್ತರ ಕೊಡುತ್ತಿದ್ದರು. ಚಹದ ಪಾತ್ರೆಯೊಡನೆ ಕೆನೆಯ ಸಣ್ಣ 'ಪ್ಯಾಲೆ' ಯೊಂದು ಬಂದಿತು. ಚಹಕ್ಕಾಗಿ ಕೆನೆಯನ್ನು ಬಳಸಿಕೊಳ್ಳುವದು ವಿಲಾಯತಿಯ ಒಳನಾಡಿನಲ್ಲಿಯ ರೂಢಿಯಾಗಿದೆ. ಶೇಕ್ಸಪಿಯರನ ಜನ್ಮಸ್ಥಾನದಲ್ಲಿ ದೊರೆತ ಚಹಕ್ಕೆ ಸಹ ಕೆನೆ. 'ಕೆನೆ' ಎಂದರೆ ಕನ್ನಡದಲ್ಲಿ 'ಚೆಲುವು' ಎಂದೂ ಒಂದು ಅರ್ಥವಿದ್ದದ್ದು ಯಥಾರ್ಥವಾಗಿದೆ!

ಇಲ್ಲಿಂದ ನಡೆದು ಪಟ್ಟಣದ ಇನ್ನೊಂದು ತುದಿಗೆ ಹೋದೆವು. ಅಲ್ಲಿ 'ಏವ್ಹನ್' ನದಿಯು ಮನೋಹರವಾಗಿ ಹರಿಯುತ್ತಿತ್ತು. ಪಂಪನಿಗೆ

ವರದಾ ನದಿಯ ಮೇಲೆ ಪ್ರೀತಿಯಿತ್ತೇನು ? ನನಗೆ ಗೊತ್ತಿಲ್ಲ ! ಆದರೆ ಅದರಷ್ಟೇ ಚಿಕ್ಕದಾಗಿ ಚೊಕ್ಕಾಗಿದೆ ಏವ್ಹನ್ ನದಿಯು ! ಈ ನದಿಯ ದಂಡೆಗೆ 'ಶೇಕ್ಸಪಿಯರ್ ಸ್ಮಾರಕ ಥಿಯೇಟರ್' ಒಂದನ್ನು ಕಟ್ಟಿದ್ದಾರೆ. ಇಂಗ್ಲಂಡಿನಲ್ಲಿ ಸುಂದರತಮವಾದ ನಾಟಕಗೃಹವಿದು. ಶ್ರೇಷ್ಠತಮ ನಾಟಕಕಾರನ ಜನ್ಮಸ್ಥಾನದಲ್ಲಿ ಕಟ್ಟಿರುವದು ಉಚಿತವಾಗಿದೆ.

ನೋಡುತ್ತಿದ್ದ ಹಾಗೆ ಓಣಿಗುಂಟ ಉತ್ಸವಸ್ತಂಭಗಳನ್ನು ನಿಲ್ಲಿಸುತ್ತಿದ್ದರು. ಸಾಲಾಗಿ ನಿಂತ ಮರಗಳೊಳಗಿಂದ ಹಾಯಿಸಿ ಬಣ್ಣ ಬಣ್ಣದ ಬೆಳಕುಗಳನ್ನು ಬಿಡುತ್ತಿದ್ದರು. ಇದೇತಕ್ಕೆಂದು ಕೇಳಿದಾಗ ಉತ್ತರ ಬಂತು,–'ನಾಳೆ ಮಹಾಕವಿಯ ಹುಟ್ಟಿದ ದಿನವೆಂದು ! ಎಪ್ರಿಲ್ ೨೩ನೆ ತಾರೀಖು ಶೇಕ್ಸಪಿಯರನ ಹುಟ್ಟಿದ ದಿನ. ನಾವು ಅಲ್ಲಿಗೆ ಹೋದದ್ದು ಎಪ್ರಿಲ್ ೨೨ನೆ ತಾರೀಖು, ಮಧ್ಯಾಹ್ನಕ್ಕೆ. ನಮಗೆ ಇದರ ಕಲ್ಪನೆಯಿರಲಿಲ್ಲ. ಆಕಸ್ಮಿಕವಾದ ಯೋಗವೆಂದು ಆನಂದಿಸಿದೆವು.

ಶೇಕ್ಸಪಿಯರನ ಜನ್ಮತಿಥಿಯನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ೧೮೩೦ರಲ್ಲಿ ಹೊರಡಿಸಿದ ಮೆರವಣಿಗೆಯ ಚಿತ್ರವೊಂದಿದೆ: 'ಬ್ಯಾಂಡಿ'ನ ಮೇಳದೊಂದಿಗೆ ಕವಿಪ್ರಿಯರೆಲ್ಲ ಹೊರಟಿರುವದು: ಕವಿಯ ಪ್ರಸಿದ್ಧ ನಾಟಕಗಳಲ್ಲಿಯ ಪಾತ್ರಗಳನ್ನು ವಹಿಸಿ ಅನೇಕ ನಟ-ನಟಿಯರು ಮೆರವಣಿಗೆಯಲ್ಲಿ ಸಾಗಿರುವದು; ಇತ್ಯಾದಿ. ಆದರೆ ಈಗಿನ ಮೆರವಣಿಗೆಗಳ ಸ್ವರೂಪವು ಬದಲಿಸಿದೆ. 'ಬ್ಯಾಂಡು' ಇದ್ದೇ ಇದೆ. ಆದರೆ ಕವಿಪ್ರಿಯರಲ್ಲದೆ ಲಂಡನ್ನಿನಿಂದ ಜಗತ್ತಿನ ಎಲ್ಲ ದೇಶಗಳ ರಾಯಭಾರಿಗಳು ತಮ್ಮ ನಿಶಾನೆಗಳೊಂದಿಗೆ ಬರುತ್ತಾರೆ. ಹೀಗೆ ನೆರೆದ ವಿಶ್ವಜಾತ್ರೆಯು ಹೂಮಾಲೆಗಳೊಂದಿಗೆ ಶೇಕ್ಸಪಿಯರನ ಸಮಾಧಿಗೆ ಹೋಗಿ ಅವುಗಳನ್ನಿರಿಸಿದ ಮೇಲೆ ಬಿಡಿಯಾಗುತ್ತದೆ. (ಕೆಲವು ರಾಯಭಾರಿಗಳು ತಮ್ಮ ರಾಯಭಾರಿಗಳನ್ನು ಕಳಿಸಬಹುದು.) ಕವಿಗೆ ಅದೆಂಥ ಗೌರವವಿದು! ಈ ಊರಿನ ಕೂಲಿಕಾರರಿಗೆ ಅದೊಂದು ವಿಚಿತ್ರವೆನಿಸುತ್ತಿರಬೇಕು. ಕವಿಯು ಅವರ ಕಣ್ಣಿನಲ್ಲಿ ಸಂತನಾಗಿ ಪರಿಣಮಿಸಿರಬೇಕು. 'ಭಾರತದ ಅನೇಕ ರಾಜರು ಆ ಹೊತ್ತಿನಲ್ಲಿ ಇಲ್ಲಿಗೆ ಬರುವರೆಂದು' ಇಲ್ಲಿಯ ಒಬ್ಬ ಕಾರ್ಯದರ್ಶಿಯು ಹೇಳಿದನು. ಇರಬಹುದು. ಆ..ದ..ರೆ ನಮ್ಮ ನಿಶಾನೆಯೆಲ್ಲಿ?

ಮುಂದೆ ನಾವು ಶೇಕ್ಸಪಿಯರನು ಕಲಿತ ಪ್ರಾಥಮಿಕಶಾಲೆಯನ್ನು ಪ್ರವೇಶಿಸಿದೆವು. ಸುಮಾರು ೧೫ನೆಯ ಶತಮಾನದಲ್ಲಿ ಕಟ್ಟಿದ ಪಂಚರ ಕಚೇರಿಯೊಂದಿದೆ. ಇದರ ತಲೆಯ ಮೇಲೆ ಆ ಶಾಲೆಯಿದೆ. ಕಚೇರಿ ಯಷ್ಟೇ ಪುರಾತನವಾಗಿದೆ. ಇಲ್ಲಿಯ ಹಳೆಯ 'ಓಕ್' ಕಟ್ಟಿಗೆಗಳ ತೊಲೆಗಳನ್ನು ನೋಡಿದರೆ–ನೂರಾರು ಹೆಸರುಗಳನ್ನು ಕಟೆದು ನುಗ್ಗಾಗಿ ಹೋದ ಟೇಬಲ್ಲುಗಳನ್ನು ನೋಡಿದರೆ–ವಿಸ್ಮಯವಾಗುತ್ತದೆ. ಇಂದಿಗೂ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಕಂಡುಬರುವ ಶಾಲೆಗಳಿಗಿಂತ ಹೆಚ್ಚಿನ ದೇನೂ ಇಲ್ಲಿಲ್ಲ. ಮಾಸ್ತರರ ದೊಡ್ಡ ಕುರ್ಚಿ; ಟೇಬಲ್ಲು; ಎದುರು ಒಂದರ ಹಿಂದೊಂದು ಹುಡುಗರ ಟೇಬಲ್ಲು–ಬೆಂಚುಗಳು; ಕುರ್ಚೆಯ ಬಲಗಡೆಗೆ ೧ನೇ ಅಥವಾ ೨ನೇ 'ನಂಬರು' ಜಾಗದಲ್ಲಿ ಶೇಕ್ಸಪಿಯರನು ಹುಡುಗ ನಾಗಿದ್ದಾಗ ಕುಳಿತುಕೊಳ್ಳುತ್ತಿದ್ದನಂತೆ! ಅಂದಿನಂತೆ ಇಂದಿಗೂ ಶಾಲೆಯು ಉಳಿದಿದೆಯೆಂದು ಹೇಳಲಾಗುವದಿಲ್ಲ. ಆದರೂ ಕೆಲವೊಂದು ಭಾಗವು ಅಚ್ಚಳಿಯದಿದೆ. ಇಲ್ಲಿ ಮಹಾಕವಿಯು ಶಾಲೆ ಕಲಿತ? ಕಲಿತಿರ ಬಹುದು. ಆದರೂ ನೂರು ವರುಷಗಳಿಂದ ಜನರಿಗೆ ಗೊತ್ತಿರುವ ಕೀಟ್ಸ್ ಕವಿಯ ಮನೆಯನ್ನು ನೋಡಿದಾಗ,– ಇಲ್ಲಿ ಕೀಟ್ಸ್‌ನು ನಿಶ್ಚಯವಾಗಿ ಇದ್ದನೆಂದೆನ್ನಿಸುವದು. ಶೇಕ್ಸಪಿಯರನೇ ದಂತಕಥೆಯೆಂದು ಸಾರುವ ವರೂ ಇದ್ದಾರೆ. ಕಾರಣ, ಕಲಿತಿದ್ದರೆ ಇಂಥ ಶಾಲೆಯಲ್ಲಿ ಮಾತ್ರ ಕಲಿತಿರ ಬಹುದೆಂಬ ಸಾಶಂಕವೃತ್ತಿಯ ಕೌತುಕವು ಸಹಜವಾಗಿ ಮನವನ್ನು ಆವರಿಸುವದು.

ವಿಚಿತ್ರವಾದ ಮಾತೆಂದರೆ ಇದು: ಇಂದಿಗೂ– ೧೯೩೭ನೆಯ ಇಸ್ವಿಯ ಈ ತಾರೀಖಿಗೂ– ಸ್ಟ್ರಾಟ್‌ಫರ್ಡಿನ ಹುಡುಗರು ಇದೇ ಶಾಲೆ ಯಲ್ಲಿ ಕಲಿಯುತ್ತಾರೆ! ಅವೇ ಬೆಂಚುಗಳು; ಅವೇ ಮುರುಕು ಟೇಬಲ್ಲು! ಆಂಗ್ಲರಷ್ಟು ಇತಿಹಾಸಪ್ರಿಯರು ಇನ್ನಾರು? (ಆಗಾಖಾನರ ಆಪ್ತತ್ವ ದಲ್ಲಿದ್ದ ಹುಡುಗನೊಬ್ಬನು ಈಗ ಇದೇ ಶಾಲೆಯಲ್ಲಿ ಕಲಿಯುತ್ತಿರುವ ನೆಂದು ಅಲ್ಲಿಯ ಚಾಲಕನು ಹೇಳಿದನು.) ಆದರೆ ಕವಿಯ ಮಂತ್ರದ ನುತ್ತಲು ತಂತ್ರವು ಬೆಳೆಯುತ್ತದೆ. ಶೇಕ್ಸಪಿಯರನು ಕಲಿತ ಮಾತ್ರಕ್ಕೆ

ಈ ಶಾಲೆಯಲ್ಲಿ ಸರಸ್ವತಿಯು ಪ್ರಕಟಳಾದಾಳೆ? ಬೌದ್ಧಮತವನ್ನು ಸ್ವೀಕರಿಸಿ ಎಲ್ಲರೂ ಬುದ್ಧರಾಗಲಿಲ್ಲ. ಶೇಕ್ಸಪೀಯರನ ತರುವಾಯ ಇಲ್ಲಿ ಕಲಿತವರಲ್ಲಿ ಕೆಲವರು ಆಯ್. ಸಿ. ಎಸ್. ಪಾಸಾಗಿದ್ದಾರೆ; ಪಂಡಿತ ರಾಗಿದ್ದಾರೆ. ಇಸ್ನೂವರೆಗೆ ಒಬ್ಬನೂ ಕವಿಯಾಗಿಲ್ಲ!

ಶೇಕ್ಸಪಿಯರನು ತನ್ನ ಆಯುಷ್ಯದ ಕೊನೆಯ ಭಾಗದಲ್ಲಿ ಬಹಳ ದುಡ್ಡನ್ನು ಸಂಪಾದಿಸಿದ. ಸಂಪಾದಿಸಿ ಇದಿ ಹಳ್ಳಿಯಲ್ಲಿಯೇ ಹಿರಿದಾದ ಮನೆಯನ್ನು ಕಟ್ಟಿಸಿದ. ಇದರಲ್ಲಿ ತನ್ನ ಆಳಿಯ ಹಾಗು ಮಗಳೊಂದಿಗೆ ತನ್ನ ಕೊನೆಯ ದಿನಗಳನ್ನು ಕಳೆದ. 'ನ್ಯೂ ಪ್ಲೇಸ್' ಹಿತ್ತಲದಲ್ಲಿ ತಾನಾಗಿ ಹಚ್ಚಿದ ಮಲ್‌ಬೆರಿ ಗಿಡದ ಕಡೆಗೆ ತನ್ನ ಕಿಟಿಕೆಯೊಳಗಿಂದ ನೋಡುತ್ತ 'ಟೆಂಪೆಸ್ಟ್' ನಾಟಕವನ್ನು ಬರೆದನೆಂದು ದಂತಕಥೆಯಿದೆ. ಮುಂದೆ ಒಬ್ಬ ಪಾದ್ರಿಯ ಕೈಯಲ್ಲಿ ಈ ಮನೆ ಹೋಯಿತು. ಅವನು ಅದನ್ನು ನೆಲಸಮ ಮಾಡಿದ. ಅಂದಿನ ಅಂತಸ್ತಿನ ಮೆಟ್ಟಲುಗಳು ಮಾತ್ರ ಈಗ ಉಳಿದಿವೆ. ಅಲ್ಲದೆ ನುಣುಪಿಲ್ಲದ ಕಲ್ಲಿನ ನೆಲಗಟ್ಟು ಹಾಗು ಮನೆಯ ಅಡಿಗಟ್ಟು ಕಾಣುತ್ತಿವೆ. ಆ ಪಾದ್ರಿಯು ಕಡಿದುಹಾಕಿದ ಮಲ್‌ಬೆರಿ ಮರದ ಬೇರಿನಿಂದ ಇನ್ನೊಂದು ವೃಕ್ಷವು ಹುಟ್ಟಿದೆ. ಅಂದಿನ ಮನೆ ಯೊಳಗಿದ್ದ ಒಂದು ಸಣ್ಣ ಬಾವಿಯು ಸಹ ಈಗಿದೆ. ಇದಕ್ಕೆ 'Wishing Well' ಎಂದು ಹೆಸರು: ಅಂದರೆ, ಔದುಂಬರದಂತೆ ಇದಕ್ಕೆ ಪ್ರದಕ್ಷಿಣೆ ಹಾಕಿ ಮನಸ್ಸಿನಲ್ಲಿ ಏನನ್ನಾದರೂ ಇಚ್ಛಿಸಿದರೆ ಅದು ಕೈಗೂಡುವದೆಂದು ಭಾವನೆ! ಶೇಕ್ಸಪಿಯರನ ಹಿಂದೋಟವಾಗಿದ್ದ ಭಾಗದಲ್ಲಿ ಈಗ ಶೇಕ್ಸಪಿಯರನು ತನ್ನ ನಾಟಕಗಳಲ್ಲಿ ವರ್ಣಿಸಿದ ಎಲ್ಲ ಹೂಗಿಡಗಳನ್ನು ಹಚ್ಚಿದ್ದಾರೆ!

ಈಗ ಮನೆಯೆಲ್ಲ ಒಂದು ವಸ್ತುಸಂಗ್ರಹಾಲಯವಾಗಿದೆ. ಚಾಲುಕ್ಯರಂತೆ ಎಂಗ್ಲೋ ಸ್ಯಾಕ್ಸನ್ ಎಂಬ ಕುಲದವರು ೬-೭ನೆಯ ಶತಮಾನಗಳಲ್ಲಿ ಅಭ್ಯುದಯ ಹೊಂದಿದರು,– ಇಂಗ್ಲಂಡಿನಲ್ಲಿ. ಈಗ ಇವರ ತಲೆಬುರುಡಿಗಳು, ಹೆಣ್ಣುಮಕ್ಕಳ ಕರಿಮಣಿಗಳು (made of amber) ಮುಂತಾಗಿ ಸ್ಟ್ರಾಟಫರ್ಡಿನ ಹತ್ತಿರ ದೊರೆತಿವೆ. ಇವನ್ನೆಲ್ಲ ಕೂಡಿಸಿ

ಇಲ್ಲಿಟ್ಟಿದ್ದಾರೆ. ಅಂತೂ ಈ ಮನೆಯಲ್ಲಿ "We are such stuff as dreams are made on" (ನಮ್ಮ ಹುರುಳೂ ಕನಸಿನ ಹುರುಳೂ ಒಂದೇ.) ಎಂದು ಪಠಿಸುತ್ತ ಕವಿಯು ತೀರಿಕೊಂಡ.

ಇಲ್ಲಿಂದ ಶೇಕ್ಸಪಿಯರನು ಹುಟ್ಟಿದ ಮನೆಗೆ ನಡೆದೆವು. ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಒಬ್ಬ ಕಟುಕರವನು ಇಲ್ಲಿ ವಾಸ ವಾಗಿದ್ದ! "The immortal Shakespeare was born here" (ಅಮರಕೀರ್ತಿಯ ಶೇಕ್ಸಪಿಯರನು ಇಲ್ಲಿ ಹುಟ್ಟಿದನು.) ಎಂದು ಒಂದು ಬೋರ್ಡನ್ನು ಹೊರಗೆ ತೂಗುಹಾಕಿದ್ದಲ್ಲದೆ ಅಂದಿನ ಅನೇಕ ಸಾಹಿತಿ ಗಳನ್ನು ಕರೆತಂದು ಹುಟ್ಟಿದ ಕೋಣೆಯಲ್ಲಿ ಸಹಿ ಮಾಡಿಸುತ್ತಿದ್ದ. ಈಗ ಆ ಕೋಣೆಯು ಲಕ್ಷಾವಧಿ ಸಹಿಗಳಿಂದ ತುಂಬಿದೆ. ಸ್ಕಾಟ್, ಬಾಯರನ್, ಕಾರಲಾಯಿಲ್ ಮೊದಲಾದ ಮಹನೀಯರ ಸಹಿಗಳನ್ನು ಇಲ್ಲಿ ಇಂದಿಗೂ ನೋಡಬಹುದು. ಇದೊಂದು ಸಣ್ಣ ಕತ್ತಲೆಕೋಣೆ. ಆದರೆ ಜಗತ್ತಿನ ಜ್ಯೋತಿಯೆಲ್ಲ ಇಲ್ಲಿ ಬೆಳಗಿತು! ಮನೆಯ ಉಳಿದ ಭಾಗವೂ ತಕ್ಕಮಟ್ಟಿಗೆ ಚೆನ್ನಾದ ಸ್ಥಿತಿಯಲ್ಲಿದೆ. ಅಂದಿನ ಅಡಿಗೆ ಸಾಮಾನುಗಳನ್ನು ಸಹ ಕಾಯ್ದಿಟ್ಟಿದ್ದಾರೆ. ಆದರೆ ಮತ್ತೆ ಅದೇ ಮಾತು: ಹಾಗಾದರೆ ಆ ಕೃತಿಗಳನ್ನು ಬರೆದ ಕವಿಯು ಇಲ್ಲಿಯೇ ಹುಟ್ಟಿದನೆ? ಹುಟ್ಟಿದ್ದರೂ ಅದೇನು ದೊಡ್ಡ ಮಾತಲ್ಲವೆಂದೆನ್ನಿಸುವದು! ಎಲ್ಲವನ್ನೂ ತಿಳಿಸಿ ಹೇಳಲು ನೇಮಿಸಿದ ಮುದುಕ–ಮುದುಕಿಯರು ಹಾಡಿದ್ದನ್ನೇ ಹಾಡುವದನ್ನು ಕೇಳಿಕೇಳಿ ಆ ದಿವ್ಯ ಸ್ಥಾನದ ಮಹಿಮೆಯೆಲ್ಲ ಮಾಯವಾಗುತ್ತದೆ. 'ಕಿಸುಬಾಯಿ ದಾಸರ' ಮಾತನ್ನು ಕತ್ತಲೆ ಕೋಣೆಯಲ್ಲಿ ಕೇಳುತ್ತ ನಿಂತಿರುವೆವೆನಿಸಿ ಅಲ್ಲಿಂದ ಹೊರಬೀಳುತ್ತೇವೆ!

ಇಲ್ಲಿಂದ ೧ ಮೈಲಿನ ಮೇಲೆ 'ಶಾಟರಿ' ಎಂಬ ಹಳ್ಳಿಯಿದೆ. ಇಲ್ಲಿ ಶೇಕ್ಸಪಿಯರನ ಪತ್ನಿಯಾದ 'ಏನ್ ಹ್ಯಾತ್‌ವೇ' ಎಂಬವಳು ಬೆಳೆದಳು. ಈಕೆಯೊಡನೆ ಕೆಳೆವಾತುಗಳನ್ನು ಬೆಳೆಸಲು ಯುವಕನಿದ್ದಾಗ ಶೇಕ್ಸಪಿಯ ರನು ಇಲ್ಲಿಯವರೆಗೆ ಹೊಲಗಳೊಳಗಿಂದ ಹಾಯ್ದು ಬರುತ್ತಿದ್ದ! ಈ ಮನೆಯನ್ನು ಮಾತ್ರ ಮೊದಲಿದ್ದ ಸ್ಥಿತಿಯಲ್ಲಿಯೇ ಪೂರ್ಣವಾಗಿ

ಕಾದಿಟ್ಟಿದ್ದಾರೆ. ಕವಿಯು ಎನ್ನಳೊಡನೆ ಕೂಡಿ ಕುಳಿತ 'ಸೆಟ್ಲ್' ಇಲ್ಲವೆ ಕಟ್ಟಿಗೆಯ ಸಣ್ಣ 'ಕೋಚ'ನ್ನು ಇಂದಿಗೂ ನೋಡಬಹುದು. ಅವರು ಉರಿಸುತ್ತಿರಬಹುದಾದ 'ರಶ್ ಲಾಯಿಟ್' ದೀಪದ ಮಾದರಿಯನ್ನು ಕಾಣಬಹುದು. ಅವರು ಮಲಗುತ್ತಿರಬಹುದಾದ 'ರಶ್' ಚಾಪಿ (ಹಗ್ಗದ ಚಾಪಿ) ಗಳನ್ನು ನೋಡಿ ಕೌತುಕಪಡಬಹುದು. ಶೇಕ್ಸಪಿಯರನು ಈ ವಸ್ತುಗಳನ್ನೇ ಉಪಯೋಗಿಸಿರಲಿಕ್ಕಿಲ್ಲ,– ಆದರೆ ಇಂಥವುಗಳನ್ನು ನಿಶ್ಚಯವಾಗಿ ಉಪಯೋಗಿಸಿದನೆಂದು ಇಲ್ಲಿ ಮಾತ್ರ ಹೊಳೆಯುವದು.

ಸ್ಟ್ರ್ಯಾಟ್‌ಫರ್ಡಿನ ಇನ್ನೊಂದು ಮಗ್ಗುಲಿಗೆ 'ಎವ್ಹನ್' ನದಿಯ ದಂಡೆಯ ಮೇಲೆ ಆ ಪಟ್ಟಣದ 'ಚರ್ಚ್' ಇದೆ. ಇಲ್ಲಿ ಶೇಕ್ಸಪಿಯರ್, ಅವನ ಪತ್ನಿ ಹಾಗು ಅವನ ಕುಟುಂಬದವರ ಗೋರಿಗಳಿವೆ. ಶೇಕ್ಸಪಿಯರನ ಭಕ್ತವೃಂದವು ಕೂಡಿ ಅವನು ತೀರಿಕೊಂಡ ಕೆಲವು ವರ್ಷಗಳ ಮೇಲೆ ಕಟಿದು ಇರಿಸಿದ ಶಿಲಾಮೂರ್ತಿಯಿದೆ. 'ಚರ್ಚ್' ಸಹ ಶೇಕ್ಸಪಿಯರನಿಗಿಂತ ೩೦೦ ವರ್ಷಗಳಿಂದ ಪುರಾತನವಾದದ್ದು! ಇಲ್ಲಿಯ ಜನನ–ಮರಣ ಪತ್ರಿಕೆಯಲ್ಲಿ ಶೇಕ್ಸಪಿಯರನ ವಿಷಯವನ್ನು ಕಾಣಬಹುದು. ಶಿಶುವಿದ್ದಾಗ ಅವನನ್ನು 'Baptise' ಮಾಡಿದ ಶಿಲಾಕುಂಡವಿದೆ. ಎಲ್ಲಕ್ಕೂ ಹೆಚ್ಚಾಗಿ,–ಅವನ ಗೋರಿ. ಶೇಕ್ಸಪಿಯರನ ವಿಷಯಕ್ಕೆ ಇದೊಂದೇ ದಿವ್ಯವಾದ ಸತ್ಯ. ಉಳಿದುದೆಲ್ಲ ದಂತ ಕಥೆ ಕೂಡಿದ ಐತಿಹ್ಯ. ಒಂದು ಸಣ್ಣ ಕಲ್ಲಿನ ಮೇಲೆ ಮೃತ್ಯು ಶ್ಲೋಕವನ್ನು ಕೊರೆದಿದ್ದಾರೆ: 'ಗೆಳೆಯ! ನನ್ನ ಎಲುಬುಗಳನ್ನು ಅಲುಗಿಸಬೇಡ!' ಎಂಬರ್ಥದಲ್ಲಿ. ನಾಟಕವನ್ನು ಮುಗಿಸಿ ಬಂದು ಸೂತ್ರಧಾರನು ಇಲ್ಲಿ ಮಲಗಿದ. ಪವಾಡಗಳನ್ನು ತೀರಿಸಿ ಕವಿಯು ಇಲ್ಲಿ ಪವಡಿಸಿದ. ಕೊನೆಗೆ ಮರಣವೊಂದೇ ಸತ್ಯ! ಶರಣು! ಶರಣು! ಎಂದು ಮನವು ಹಂಬಲಿಸಿತು. ಶೇಕ್ಸಪಿಯರನ ಸಮಾಧಿಯನ್ನು ಕಂಡು ಕೈಮುಗಿದು ಬರುವದು ತಮ್ಮ ಜೀವನದ ಮಹದಾಕಾಂಕ್ಷೆಯೆಂದು ತಮ್ಮ ಒಂದು ಭಾಷಣದಲ್ಲಿ ಸ್ಫೂರ್ತಿದಾಯಕವಾಗಿ 'ಶ್ರೀ'ಯವರು ಹೇಳಿದರು. ಇನ್ನು ಮುಂದಾದರೂ ಅವರು ಬರಬಹುದು. ಅಷ್ಟರಲ್ಲಿ, ಕನ್ನಡಿಗರ ಕಾಣಿಕೆಯೊಂದನ್ನು ಅರ್ಪಿಸಲು

ನಾನಿಲ್ಲಿ ಬಂದಿರುವದು ಸಾರ್ಥಕವಾಯಿತೆಂದು ನೆನೆಸಿದೆನು. ಕತ್ತಲೆ ಮಾಗುತ್ತ ಬಂದಿತ್ತು. ನಿಲ್ಮನೆಗೆ ಹೋಗಿ ಗಾಡಿ ಹತ್ತಿದೆನು. ಶೇಕ್ಸಪಿಯರನ ತಾಯ್ನೆಲವು ಮೆಲ್ಲಮೆಲ್ಲನೆ ಮಾಯವಾಯಿತು.

---

೬೭

## ಮಾವಿಸ್ಮರಣ ಕುಸುಮ

### ( Forget-me-not )

ನೆನಹುಹೂಗಳ ನೋಡಿ ತಣಿಯದವರಾರು ?
ಅವುಗಳಾ ಚೆಲುವಿಕೆಗೆ ಮಣಿಯದವರಾರು ?
ಇಂದ್ರನೀಲಗಳಂತೆ ಕಳೆವೆತ್ತು ನಿಂತು,-
ನೋಡ ಬಾ ! ಹೂಗಳಿವು ನಗುತಲಿಹವೆಂತು !
ತಾಯಿ ! ಪ್ರಕೃತಿಯೆ ! ನಿನ್ನ ಬೆಂಡೋಲೆಯೇನು ?
ತಿಳಿಯದಚ್ಚರಿಗೊಳುತ ನೆನೆಯುತಿಹೆ ನಾನು :

ಹಸಿರ ಮುಗಿಲೊಳು ಮೆರೆವ ನೀಲ ತಾರೆಗಳು,-
ಇವಕಿಲ್ಲ ಬೆಳತಿಂಗಳೆಳೆವ ಮೋರೆಗಳು !
ಗುಂಪುಗುಂಪಾಗಿಹವು ಸೊಂಪುವಡೆದು
ಲೆಕ್ಕವಿಲ್ಲದಲರಳಿ ದಿಕ್ಕು ಹಿಡಿದು,
ಅಲರಿವಲ್ಲವೆ ಕಣ್ಣುಕಟ್ಟು, ಕನಸು,
ಸುಗ್ಗಿಯಾ ಹಿರಿಬೆಳಸು, ದಿಸದ ನೆನಸು !

ಆಂಗ್ಲಭೂಮಿಯಲಿಂತು ವನವಾಸವಿದ್ದು
ನೇಹಿಗರ ತೊರೆದೊಲವಿನುಪವಾಸ ಬಿದ್ದು
ಎಲ್ಲೆಡೆಗೆ ಸಾರ್ವಭೌಮರ ನೆಲದ ಮೇಲೆ
ಆಳೆಂಬ ತಿಳಿವಿನಂಕುಶ ತಿವಿವ ವೇಳೆ!
ಬೀದಿ ಹೋಗುವ ನಾಯಿ ಕೂಡ ಬೊಗಳುವದು
ಎಲ್ಲಿಂದಲೋ ಹಕ್ಕಿ ಕೂಗಿ ತೆಗಳುವದು.

ಇವನು ಮೇಘಶ್ಯಾಮನೆಂದು ಕೋಪದಲಿ
ಜನರೆಲ್ಲ ಹಳಿಯುತಿರೆ ಶ್ವೇತದ್ವೀಪದಲಿ
ಕೂಸುಕುನ್ನಿಗಳು ಸಹ ಬೆದರಿ ನೋಡಿ
ವರ್ಣದ್ವೇಷವ ಕಲಿಯೆ ಹಿರಿಯರೊಡನಾಡಿ,—
ಚಳಿಗಾಳಿ ಕೊರೆಯುತಿರೆ ಬಿಸಿಲುಂಡ ಮೈಯ್ಯ,
ಕಾಣದಾ ದೇವನಿಗೆ ಮೇಲೆತ್ತಿ ಕೈಯ್ಯ,—

ಮೊರೆಯುತಿರೆ, ಮೊಗದೋರಿ ಮುಂದೆ ಬಂದವಿದೊ
'ಮರೆಯದಿರು ನಮ್ಮ ನೆಲೆ!' ಅಂದವೆಂಥದಿದೊ!
'ಚೆಲುವಿಕೆಗೆ ನಮ್ಮ ಬಾಳಿಹುದು ಪಡಿನೆಳಲು;
ನೇಹಿಗನೆ, ಕೇಳು! ನಾವಲ್ಲ ಬರಿ ಮಳಲು!'
ನೆನಹುಹೂಗಳ ನೋಡಿ ತಣಿಯದವರಾರು?
ಅವುಗಳಾ ಚೆಲುವಿಕೆಗೆ ಮಣಿಯದವರಾರು?

* * * *

೪—೫—೩೭

ಲಂಡನ್ನಿನಲ್ಲಿ ಒಬ್ಬ ಬಸ್ ಡ್ರೈವ್ಹರನು ಭಾರತೀಯ ವಿದ್ಯಾರ್ಥಿಯೋರ್ವನನ್ನು ಅಪಮಾನಗೊಳಿಸಿದ. ಆ ವಿದ್ಯಾರ್ಥಿಯು ಅವನು ಕ್ಷಮೆ ಬೇಡಬೇಕೆಂದು ಕೇಳಲು ಉತ್ತರ ಬಂದಿದ್ದು ಹೀಗೆ: 'ಕ್ಷಮಾಪಣೆ ಬೇಕೆ ನಿನಗೆ? ಸುಮ್ಮನೆ ಹೋಗು. ಹಿಂದುಸ್ತಾನದಲ್ಲಿ ನಾನು ಸಾರ್ಜಂಟನಿದ್ದೆ. ಅಲ್ಲಿ ಹೀಗಾಗಿದ್ದರೆ ನಿನ್ನನ್ನು ಚೆನ್ನಾಗಿ ಥಳಿಸುತ್ತಿದ್ದೆ. ಇದು ಲಂಡನ್ನೆಂದು

ನೀನು ಉಳಿದುಕೊಂಡಿದ್ದೀಯೆ.' ಆ ವಿದ್ಯಾರ್ಥಿಯು ಸುಮ್ಮನೆ ತಿರುಗಿ ಬರಬೇಕಾಯಿತು.

* * * *

ಆಂಗ್ಲ ವೇಷದಲ್ಲಿದ್ದ ಒಬ್ಬ ಪಾರ್ಸಿ ವಿದ್ಯಾರ್ಥಿನಿಯು ನಡೆದಿದ್ದಳು. ಆಂಗ್ಲ ಯುವತಿಯರಂತೆ ಆವಳದು ಬಿಳಿಯ ಬಣ್ಣ. ನೋಡಲು ಸಹ ಚೆಲುವೆ. ಸಹಜವಾಗಿ ಯಾರಿಗೂ ಕಂಡುಬರುವ ಹಾಗಿರಲಿಲ್ಲ,–ಇವಳು ಆಂಗ್ಲ ಯುವತಿಯಲ್ಲವೆಂದು. ಹೀಗಿದ್ದಾಗ ತಾನು ಆಂಗ್ಲ ಯುವತಿ ಯರಿಗಿಂತ ಹೆಚ್ಚೆಂದು ಆಕೆಯು ತಿಳಿದುಕೊಂಡಿದ್ದರೆ ಆಶ್ಚರ್ಯವಿಲ್ಲ. ಆದರೆ ಹಾದಿಯಲ್ಲಿ ಹೋಗುತ್ತಿದ್ದ ಇಬ್ಬರು ಆಂಗ್ಲ ಸ್ತ್ರೀಯರು ಆಕೆಯನ್ನು ನೋಡಿ ಹೀಗೆಂದರು : 'Did you see. A pretty brown. Isn't she ?' (ನೋಡಿದಿರಾ ? ಕಾಫಿ ಬಣ್ಣದವಳಾದರೂ ಚೆಲುವೆ ಯಾಗಿದ್ದಾಳೆ!)

---

೬೮

ಲಂಡನ್
೫–೫–೩೭

ಕೇಂಬ್ರಿಜ್‌ದಲ್ಲಿ ಒಂದು ಹಿಂದೂ ವಿಶ್ರಾಂತಿಗೃಹವಿದೆ. ಲಂಡನ್ನಿನ ಒಂದು ವಿಶ್ರಾಂತಿಗೃಹದ ಶಾಖೆಯಿದು. ಲಂಡನ್ನಿನಲ್ಲಿಯ 'ವೇಟರ' (ಸೇವಕ)ನು ವರ್ಗವಾಗಿ ಕೇಂಬ್ರಿಜ್ಜಿನ ಶಾಖೆಗೆ ಬಂದ. ರಾಜಧಾನಿ ಯಿಂದ ಒಂದು ಹಳ್ಳಿಗೆ ಬಂದಂತೆ ಆ ಹಿಂದೂ ಸೇವಕನಿಗೆ ಭಾಸವಾ ಯಿತು. ನಾವು ಚಹ ತೆಗೆದುಕೊಳ್ಳುವಾಗ ಬಂದು ಹತ್ತಿರ ನಿಂತು ಕೇಂಬ್ರಿಜ್‌ದಲ್ಲಿ ಏನೂ ಹುರುಳಿಲ್ಲವೆಂದು ಹೇಳಿದ. ಹೀಗಿದೆ ಆ ವಿಶ್ವ ವಿದ್ಯಾಲಯದ ಬಗ್ಗೆ ಆವನಿಗಾದ ಕಲ್ಪನೆ!

* * * *

ಸ್ಟ್ರಾಟ್‌ಫರ್ಡದಲ್ಲಿ ಶೇಕ್ಸಪಿಯರನು ಹುಟ್ಟಿದ ಮನೆಯೆದುರಿಗೆ ಒಂದು ಚಹದಂಗಡಿಯಿದೆ. ಎಲ್ಲ ಕಡೆಗೆ ತಿರುಗಾಡಿ ಬಂದು ಅಲ್ಲಿ ಚಹ ತೆಗೆದುಕೊಂಡೆವು. ಈ ವಿಶ್ರಾಂತಿಗೃಹದಲ್ಲಿಯ ಕುರ್ಚೆ ಟೇಬಲ್ಲುಗಳು ಸಹ ೨೦೦–೩೦೦ ವರ್ಷಗಳ ಹಿಂದಿನವಿರಬೇಕು! ಅಲ್ಲಿ ಎಲ್ಲೆಡೆಗೆ ಅಳಿದು ಹೋದ ಕಾಲದ ಕುರುಹುಗಳನ್ನು ಕಾಯ್ದಿಡುವ ಹಂಬಲವು ಕಂಡುಬರುತ್ತದೆ. ಚಹದೊಡನೆ ರುಚಿಯುಳ್ಳ ಬಿಸ್ಕೀಟಿನಂತಹ ಒಂದು ತಿನಸನ್ನು ಮಾಲಕಳು ತಂದುಕೊಟ್ಟಳು. ಎಲ್ಲರಿಗೂ ಅದರ ಸವಿಹತ್ತಿತು. ನಮ್ಮಲ್ಲಿ ಒಬ್ಬರು ಅದನ್ನು 'ಫಜ್' ಎಂದು ಕರೆದರು. ಸರಿ. ಎಲ್ಲರೂ 'ಫಜ್' ಬೇಕೆಂದು ಹೂಲಿಯೆಬ್ಬಿಸಿದರು. ಒಂದೆರಡು ಸಲ ಅದನ್ನು ತಂದುಕೊಟ್ಟ ಮೇಲೆ 'It isn't fudge really. We call it oat-cake' ('ಫಜ್' ಅಲ್ಲ. 'ಓಟ್‌ಕೇಕ್' ಎಂದು ಅದರ ಹೆಸರು) ಎಂದು ಮಾಲಕಳು ಹೇಳಿದಳು. ಆಗ ನಾವೆಲ್ಲರೂ ಕೂಡಿ 'ಫಜ್' ಎಂದು ಹೆಸರಿಟ್ಟವರ ಫಜೀತಿ ಮಾಡಿದೆವು.

* * * *

ಚಕ್ರವರ್ತಿಗಳ ಸಿಂಹಾಸನಾರೋಹಣವು ಸಮೀಪಿಸಿದೆ. ಈ ಹೊತ್ತಿಗೆ ಸರಿಯಾಗಿ ವಿಲಾಯತಿಯಲ್ಲೆಲ್ಲ 'ಬಸ್ಸಿ'ನ ಚಾಲಕರ ಸಂಪು ಸುರುವಾಗಿದೆ! ಲಂಡನ್ನಿನಲ್ಲಿ ಒಂದು ಬಸ್ಸು ಸಹ ಸಿಗುವ ಹಾಗಿಲ್ಲ! ಅದರ ಸೆಕೆಯು ಆಕ್ಸಫರ್ಡಕ್ಕೂ ತಾಕಿದೆ. ಈಗ ದಿನಾಲು ಎರಡು ಮೈಲು ದೂರ ನಡೆದು ನಾನು ಕಾಲೇಜಿಗೆ ಹೋಗುತ್ತೇನೆ! ಸಮತಾವಾದದ ಕೂಗು ಇಲ್ಲಿ ಒಮ್ಮೊಮ್ಮೆ ಬಲು ಜೋರಿನಿಂದ ಏಳುತ್ತದೆ. ನಮ್ಮ ಪ್ರೊಫೆಸರರು ಕ್ಲಾಸಿಗೆ ೧೫ ನಿಮಿಷ ತಡವಾಗಿ ಬಂದರು. ಅವರ ಮಗನು ಸಾಯಕಲ್ಲನ್ನು ಒಯ್ದಿದ್ದ. ಬಸ್ಸು– ದೊರೆಯುವ ಹಾಗಿಲ್ಲ!

‡ ‡ ‡ ‡

ಯೂನಿಯನ್ನದಲ್ಲಿ 'ಆಯರ್ಲಂಡ್' ದೇಶದ ಭವಿತವ್ಯತೆಯ ಬಗ್ಗೆ ಒಂದು ಚರ್ಚೆಯಾಯಿತು. ಉತ್ತರ ಹಾಗು ದಕ್ಷಿಣ ಆಯರ್ಲಂಡದ ಮುಖಂಡರಿಬ್ಬರು ಚರ್ಚೆಯಲ್ಲಿ ಭಾಗ ವಹಿಸಿದರು. ಅಲ್ಸ್ಟರ ಜನರನ್ನು

ಸರಕಾರವು ಆಯರ್ಲಂಡದ ವಿರುದ್ಧವಾಗಿ ಎಬ್ಬಿಸಿದೆಯೆಂದು ಅಲ್ಲಿಯ ದೇಶಸೇವಕರ ಮತವಾಗಿದೆ. ಅಲ್ಲಿಯೂ ಧರ್ಮದ ದ್ವಾರವಾಗಿ ದೇಶದ ಒಕ್ಕಟ್ಟನ್ನು ಕಳೆಯುವದು, ಒಂದು ಪಂಗಡವನ್ನು ಇನ್ನೊಂದು ಪಂಗಡದ ವಿರುದ್ಧವಾಗಿ ಎತ್ತಿ ಹಿಡಿಯುವದು,– ಇವೇ ಮೊದಲಾದ ಒಳಸಂಚುಗಳು ಕಂಡುಬರುತ್ತಿವೆಯಂತೆ.

‡ ‡ ‡ ‡

'**Back to Methusaleh**' ಎಂಬ 'ಶಾ'ನ ನಾಟಕದ ಮೊದಲನೆಯ ಭಾಗವನ್ನು ನೋಡಿದೆ. ಮಾತಿನ ಸ್ವಾರಸ್ಯವೇ ಇಲ್ಲಿಯ ವಸ್ತು. ಹಾಸ್ಯದಿಂದ ಮಾತ್ರ ಕಥಾನಕವು ಮುಂದುವರಿಯುತ್ತದೆ. ಇದೊಂದು ಮೋಜು,– ಆದರೆ ವಿಚಾರವಂತರಿಗಷ್ಟೆ.

† † † †

ಇಲ್ಲಿಯ ವಸಂತಕಾಲದ ರಮಣೀಯತೆಯು ಅದ್ಭುತವಾದುದು. ಸಂಜೆಯ ಹೊತ್ತು ಕ್ರೈಸ್ಟ್ ಚರ್ಚ್ ಕಾಲೇಜಿನ ಹಿಂದೆ ತಿರುಗಾಡಲು ಹೋಗಬೇಕು. ಒಂದು ಕಡೆ 'ಥೇಮ್ಸ' ನದಿಯು ಹರಿಯುತ್ತದೆ. ಇನ್ನೊಂದು ಕಡೆಯಿಂದ 'ಶಾರವೆಲ್' ನದಿಯು ಬಂದು 'ಥೇಮ್ಸ' ನದಿಯೊಡನೆ ಸಂಗಮವಾಗುತ್ತದೆ. ಎರಡು ನದಿಗಳ ನಡುವೆ ಸಣ್ಣ ದ್ವೀಪವೊಂದಿದೆ. ಆದರ ಸೌಂದರ್ಯವನ್ನು ವರ್ಣಿಸುವ ಶಕ್ತಿಯಿಲ್ಲ ನನಗೆ.

ನಿರಭ್ರವಾದ ನಭೋಮಂಡಲ! ಮಧ್ಯರಾತ್ರಿಯಲ್ಲಿ ಸಹ ನೀನು ನಿಚ್ಚಳವಾಗಿ ಕಾಣುವೆಯಲ್ಲ! ಕುಳಿರನ್ನು ಪಾತಾಳಕಟ್ಟಿದೆ ನೀನು. ತಳಿರೊಡೆದ ನೆಲವನ್ನು ಎವೆಯಿಕ್ಕದೆ ನೋಡ ನಿಂತಿರುವೆ! ಸಾಗರವು ಸಹ ಸಾಗರಬೀಳುವದು,– ಈ ನಿನ್ನ ಚೆಲುವನ್ನು ನೋಡಿ! ಚಿಕ್ಕಮಕ್ಕಳಂತೆ ಸ್ವಚ್ಛಂದವಾಗಿ ತಿರುಗುವವು,–ಹೆಣ್ಣು ಗಂಡು ಕೂಡಿ!

ಅಲ್ಲಿ ನೋಡು! ನಿನ್ನ ಚಿಕ್ಕ ಚಿಕ್ಕೆವೆಳಕಿನ ಕೆಳಗೆ ಬೆಳ್ಳಿಯ ಮೈ ಮಾಡಿಕೊಂಡು ತೇಲುತಿಹುದು ರಾಜಹಂಸ! ಅಂಚೆಯಿದು

ನದಿಯೊಡನೆ ಮುಂಬರಿಯುವದು. ಈ ಅರಸಂಚೆಯಂತೆ ನನ್ನ ಬಾಳ್ವೆಯಿರಲಿ, ತಂದೆ! ಇದರಂತೆ ನದಿಯು ನನ್ನನ್ನು ತೇಲಿಸಲಿ! ನಭದ ಹರಕೆಯ ಹೊತ್ತು ಸಾಗಿರಲಿ ನನ್ನ ಸಂಸಾರ!

ಏಕಾಕಿಯಾಗಿ ನಡುಗತ್ತಲೆಯಲ್ಲಿ—ನಡುನದಿಯ ನೆಳವಿನಲ್ಲಿ—ಚಿಕ್ಕೆಗಳ ಕಿರುಬೆಳಕಿನಲ್ಲಿ—ಇನಿಸೊಂದು ಚಿಂತೆಯಿಲ್ಲದೆ ಸಾಗಿಹುದಲ್ಲ ಅರಸಂಚೆ! ಅಹಾ! ಏನು ಗಾಂಭೀರ್ಯವಿಹುದು! ಎಂತಹ ಸಹಜರಮಣೀಯತೆಯಿದು! ಇದರ ಕಳೆಯನ್ನು ನನಗೆ ಕರುಣಿಸು, ತಂದೆ! ಈ ತಿಮಿರ ಸಮಾಧಿಯ ಸಮಾಧಾನವನ್ನು ಕೊಡು ನನಗೆ! ಜನರಿಲ್ಲದ ರಹದಾರಿಯ ಮೇಲೆ ಏಕಾಕಿಯಾಗಿ ನಡೆದಿಹೆನು ಮುಂದೆ. ದಿಕ್ಕಿಲ್ಲದ ಕತ್ತಲೆಯು ಒಂದು ಮುತ್ತಿಹುದು ನನ್ನ. ಹೃದಯವಿದು ಕಳವಳಿಸುವದು.

ಅರಸಂಚೆಗೆ ನದಿಯೇ ರಹದಾರಿ; ನನಗೆ ರಹದಾರಿಯೇ ನದಿ. ಅಮರತೆವೆತ್ತ ಕಂಗಳು ನಮ್ಮನ್ನು ದಿಟ್ಟಿಸಿ ನೋಡುತಿವೆಯಲ್ಲ! ಆದರೆ ಅರಸಂಚೆಯ ಪುಣ್ಯಸಂಚಯವಿಲ್ಲ ನನಗೆ. ಆ ದಿವ್ಯ ಶಾಂತಿಯಿಲ್ಲ ನನಗೆ. ಅದನ್ನೊಂದು ಕರುಣಿಸು ತಂದೆ! ಆಗ ಕಾಲೆತ್ತಿ ನಡೆಯುವದಿಲ್ಲ ನಾನು,—ನೀರು ಹರಿದತ್ತ ರೆಕ್ಕೆಯನು ಮುಚ್ಚಿ ತೇಲುವೆನು. ಕಂಡಿದ್ದೆ ಗುರಿ. ಉಂಡಿದ್ದೇ ಅಮೃತ. ಅರಸಂಚೆಯಾಗುವೆನು ನಾನು!

ಶೇಕ್ಸಪಿಯರ್ ಮಹಾಕವಿಯು ಏವ್ಹನ್ ನದಿಯ ಅರಸಂಚೆಯಂತೆ. ಅವನ ಕಾವ್ಯಗಳನೋದಿ ಕೊನೆಯಿಲ್ಲದ ದುಃಖವನರಿತೆ ನಾನು. ಥೇಮ್ಸ ನದಿಯ ಅರಸಂಚೆಯಿದು,—ಮಧ್ಯರಾತ್ರಿಯಲಿ ಬೆಳ್ಳಿಬೆಳ್ಳಿಯಾಗಿ ಹೊಸಲಂತೆ ಸಾಗಿಹುದು; ಇದ ನೋಡಿ ಶಾಂತಿ ಪಾಠವನು ಕಲಿತೆ ನಾನು!



## ೬೯

೫-೫-೩೭

ಬಸ್ಸಿನ ಜನರ ಸಂಪು ಇನ್ನೂ ಮುಗಿದಿಲ್ಲ. ಶ್ರೀ. ಟರ್ನರನು ದಿನಾಲು ನನ್ನನ್ನು ತನ್ನ ಮೋಟರಿನಲ್ಲಿ ಕಾಲೇಜಿಗೆ ಒಯ್ದು ಬಿಡುತ್ತಾನೆ!

* * * *

ಇಬ್ಬರು ಆಂಗ್ಲ ವಿದ್ಯಾರ್ಥಿಗಳು ರಾತ್ರಿ ವಿಶೇಷವಾಗಿ ಮದ್ಯಪಾನ ಮಾಡಿ ಕೇರಿಗಳಲ್ಲಿ ತಿರುಗಾಡುತ್ತ, ರಾಜ್ಯಾರೋಹಣದ ನಿಮಿತ್ತವಾಗಿ ತೂಗುಬಿಟ್ಟ ನಿಶಾನೆಗಳನ್ನು ಹರಿದು ಹಾಕಿದರು. ಅವರನ್ನು ಕೈದು ಮಾಡಿದ್ದಾರೆ. ಕಾಲೇಜು ಬಿಡುವ ಪ್ರಸಂಗವು ಅವರ ಮೇಲೆ ಬರಬಹುದು.

* * * *

ನಮ್ಮ ಕಾಲೇಜಿನ ಇಬ್ಬರು ವಿದ್ಯಾರ್ಥಿಗಳು ನದಿಯ ಮೇಲೆ ಒಂದು ದೋಣಿಯನ್ನು ಒಯ್ದಿದ್ದರು. ಅದು ಬುಡಮೇಲಾಯಿತು. ಇಬ್ಬರಿಗೂ ಈಸಲು ಬರುತ್ತಿರಲಿಲ್ಲ. ಒಬ್ಬನು ಮುಳುಗಿ ಸತ್ತ. ದೋಣಿಗೆ ತೂಗಬಿದ್ದ ಕೂಗಾಡುವ ಇನ್ನೊಬ್ಬನನ್ನು ಚೇಷ್ಟೆಮಾಡುವನೆಂದು ತಿಳಿದು ದಂಡೆಯ ಮೇಲಿನ ಜನರು ಹಾಗೇ ಬಿಟ್ಟರು. ಅವನು ಸತ್ತು ಸತ್ತು ಉಳಿದ,—ಯಾವನೋ ಪುಣ್ಯಾತ್ಮನೊಬ್ಬನು ಬಿಡಿಸಿಕೊಂಡು ಬಂದ.

* * * *

ನನ್ನ ಪರಿಚಿತರೊಬ್ಬರನ್ನು ಒಬ್ಬ ಆಂಗ್ಲ ಮುದುಕಿಯು ಚಹಕ್ಕೆ ಆಮಂತ್ರಿಸಿದ್ದಳು. ಅವಳಿಗೆ ಸಂಸ್ಕೃತದ ಹುಚ್ಚು. ಕೆಲವು ಶಬ್ದಗಳನ್ನು ಕಲಿತಿದ್ದಳು. 'ಅದ್ವೈತ'ವೇನೆಂದು ಕೇಳಿದಳು. ಪರಿಚಿತರು ಅದ್ವೈತ ಸಂಪ್ರದಾಯದ ಲಕ್ಷಣಗಳನ್ನು ವಿವರಿಸಲು ಸುರುವು ಮಾಡಲು ಆ ಮುದುಕಿಗೆ ಏನೆನಿಸಿತೊ! ಒಂದು ಚಿತ್ರವನ್ನು ತೆಗೆದುಕೊಂಡು ಬಂದು ಪರಿಚಿತರ ಕೈಯಲ್ಲಿರಿಸಿ ಅಲ್ಲಿ ಬಂದಿದ್ದ ತರುಣಿಯೊಡನೆ ಮಾತನಾಡಲು ಪ್ರಾರಂಭಿಸಿದಳು: 'How are the apples in your garden? Bigger

than ours?' (ನಿಮ್ಮ ತೋಟದಲ್ಲಿಯ ಸೇಬುಹಣ್ಣು ಹೇಗಿವೆ? ಇದಕ್ಕಿಂತ ದೊಡ್ಡವಾಗಿವೆಯೆ?) ಆ ತರುಣಿಯು ಹೋದ ಮೇಲೆ ಹೇಳಿದಳು: 'You see, you should not talk such things when there is a young lady.' (ತರುಣಿಯರಿದ್ದಾಗ ನೀವು ಇಂಥ ವಿಷಯಗಳನ್ನು ತರಬಾರದು!)

*   *   *   *

ಹುಡುಗರಿಗಾಗಿ ತಯಾರಿಸಿದ ಗೊಂಬಿಗಳಲ್ಲಿ ಇಲ್ಲಿ ನಿಗ್ರೋ ಗೊಂಬಿಗಳನ್ನೂ ಮಾಡಿದ್ದಾರೆ. ಇಲ್ಲದಿದ್ದರೆ ಮೊದಲಿನಿಂದ ಹುಡುಗರು 'ನಿಗ್ರೊ' ಎಂದು ಬಯ್ಯಲು ಹೇಗೆ ಕಲಿಯಬೇಕು?

*   *   *   *

೬—೫—೩೭

ವಿಲಾಯತಿಯಿಂದ ತಿರುಗಿ ಹೋದ ಒಬ್ಬರನ್ನು ಬಂದರಿನಲ್ಲಿಯ ಕಾರಕೂನರು ನೋಡಿ 'ಆ! ಇಂಗ್ಲಂಡದಿಂದ ಬಂದಿರಾ!' ಎಂದು ಅವರ ಮೈ ಕೈ ಮುಟ್ಟಿ ಭಯಭಕ್ತಿಯಿಂದ ನೋಡಿದರು. ನರಕದಿಂದ ಬಂದವರನ್ನು,— ಸ್ವರ್ಗದಿಂದ ಬಂದರೆಂದು ತಿಳಿದುಕೊಂಡಂತೆ!

†   †   †   †

ಇಲ್ಲಿ ಒಬ್ಬ ಆಯ್. ಸಿ. ಎಸ್. ವಿದ್ಯಾರ್ಥಿಯಿದ್ದಾನೆ. ಆತನು ಭಾರತೀಯ ವಿದ್ಯಾರ್ಥಿಗಳ ಸಂಘವನ್ನು ಸೇರಿಲ್ಲ; ಮಾಳರ ಸಂಘವನ್ನು ಸೇರಿದ್ದಾನೆ. ಹೊಸದೊಂದು ಮೋಟರನ್ನು ಕೊಂಡು ರಾಜ್ಯಾರೋಹಣದ ನಿಮಿತ್ತವಾಗಿ ಯೂನಿಯನ್ ಜ್ಯಾಕ್ ನಿಶಾನೆಯನ್ನು ಹಚ್ಚಿ ತಿರುಗಾಡುತ್ತಾನೆ.

‡   ‡   ‡   ‡

೮—೫—೩೭

ಆಯರ್ಲಂಡದಿಂದ ಬಂದ ನನ್ನ ಪರಿಚಿತರೊಬ್ಬರು ಭೆಟ್ಟಿಯಾಗಿದ್ದರು. ಅಲ್ಲಿಯ ಸಾಮಾನ್ಯ ಜನತೆಗೆ ಹಿಂದುಸ್ತಾನದ ಕಲ್ಪನೆಯೇ ಇಲ್ಲ. ರೊದೋಂತವನ್ನು ದಾಟಿ ಕರಿ ಜನರ ನಾಡೊಂದಿದೆ; ಅಲ್ಲಿಂದ ಆಚ್ಚ ಕರಿ,

ತಿಳುವಾದ ಕರಿ,–ಹೀಗೆ ಬೇರೆ ಬೇರೆ ಬಣ್ಣದ ಕರಿ ಜನರು ವಾಸಿಸುವ ರೆಂದು ಅವರ ಕಲ್ಪನೆಯಾಗಿದೆ! ಭಾರತೀಯನೊಬ್ಬನು ಸಣ್ಣ ಕೇರಿಗಳೊಳಗಿಂದ ಮುಂದೆ ಸಾಗಿದರೆ 'ಬ್ಲ್ಯಾಕೀ' ಎಂದು ಹುಡುಗರು ಕಲ್ಲು ತೆಗೆದುಕೊಂಡು ಬೆನ್ನುಹತ್ತುತ್ತಾರೆ! ಹರಿಜನರ ಧರ್ಮಾಂತರಕ್ಕಾಗಿ ಹಿಂದುಸ್ತಾನದಲ್ಲಿ ಪ್ರಯತ್ನಿಸುವ ಮಿಶನರಿ ಸಂಘಗಳಿಗೆ ಇಲ್ಲಿಂದ ಸಹ ದುಡ್ಡು ಹೋಗುತ್ತಿದೆ. ಒಬ್ಬ ಕಾಲೇಜು ವಿದ್ಯಾರ್ಥಿನಿಯು ಒಂದು ದಿವಸ ಹೀಗೆ ಹೇಳಿದಳಂತೆ: 'ಇಂದು ನಾನು ಚಹ ತೆಗೆದುಕೊಳ್ಳುವದಿಲ್ಲ. ಅದರ ಬದಲು ಮಿಶನರಿ ಫಂಡಿಗೆ ಒಂದು ಶಿಲಿಂಗು ಕೊಡುತ್ತೇನೆ. ಅಂದರೆ ಒಬ್ಬ ಅಸ್ಪೃಶ್ಯನು ಕ್ರಿಸ್ತೀಯನಾದಂತಾಯಿತು!'

† † † †

ನನ್ನ ಗೆಳೆಯನಾದ ಶರ್ಮಾಡ್ಡನ ವಧುವು ಇಲ್ಲಿ ಬರುವವಳಿದ್ದಾಳೆ. ಇವನಿಗಿಂತ ಮೂರು ವರ್ಷಕ್ಕೆ ಆಕೆ ಹಿರಿಯಳು. ಪಿ. ಎಚ್. ಡಿ. ಆಗಿದ್ದಾಳೆ. ಆದರೆ ಇಷ್ಟರಲ್ಲಿ ಒಂದು ತೊಡಕು ಉಂಟಾಗಿದೆಯೆಂದು ಶರ್ಮಾಡ್ಡನು ಹೇಳುತ್ತಿದ್ದ: 'ನಾನು ದೇಶವನ್ನು ಬಿಟ್ಟು ಎಂಟು ತಿಂಗಳಾದಾಗ ಕಾಮುವನ್ನು ತಡೆಯದಾದೆ. ಒಬ್ಬ ಆಂಗ್ಲ ವಿದ್ಯಾರ್ಥಿನಿಯೊಡನೆ ಸಹಜವಾಗಿ ಸಂಬಂಧವು ಬೆಳೆಯಿತು. ಕೇವಲ ಗಂಡು–ಹೆಣ್ಣಿನ ಸಂಬಂಧವನ್ನು ಮಾತ್ರ ಇಡಬೇಕೆಂದಿದ್ದೆ. ಆದರೆ ಆ ತರುಣಿಯು ನನ್ನನ್ನು ಪ್ರೀತಿಸಹತ್ತಿದಳು! ನನ್ನ ಲಗ್ನದ ನಿಶ್ಚಯವು ಈ ಮೊದಲೆ ಆಗಿದೆಯೆಂದು ಹೇಳಿದೆ. ಆದರೂ ಬಿಡಲಿಲ್ಲ. ಸೋಫಿಯಾ (ವಧು) ಬಂದ ಮೇಲೆ ಆಕೆಗೆ ಇದನ್ನೆಲ್ಲ ಹೇಳಬೇಕು. ನನ್ನನ್ನು ಆಕೆ ತಪ್ಪುತಿಳಿದುಕೊಳ್ಳಲಾರಳು!'

† † † †

೧೨—೫—೩೭

ಇಂದು ರಾಜ್ಯಾರೋಹಣದ ದಿನ. ಎಲ್ಲೆಡೆಗೆ ಗಲಭೆಯೆದ್ದಿದೆ. ನಾಡಹಬ್ಬಕ್ಕಿಂತ ಹೆಚ್ಚಾದ ಹಬ್ಬವೆಂದು ತಿಳಿದು ಆಂಗ್ಲರೆಲ್ಲ ಇಂದು ಆಚರಿಸುತ್ತಾರೆ. ಪ್ರತಿಯೊಬ್ಬರ ಮನೆಯ ಮುಂದೆ ನಿಶಾನೆ; ನೊಡಿದಲ್ಲೆಲ್ಲ ಬಣ್ಣಬಣ್ಣದ ಬೆಳಕು; ಮನೆಗೊಂದು ರೇಡಿಯೊ; ಸೋಗು

ಕುಣಿತದ ಮಂದಿರಗಳಿಗೆ ವಿಚಿತ್ರ ವೇಷವನ್ನು ಧರಿಸಿ ಕೈಯಲ್ಲಿ ಕೈಹಾಕಿ ಹಾಡುತ್ತ ಕೆಲೆಯುತ್ತ ಓಣಿಗುಂಟ ನಡೆದಿರುವ ಹೆಣ್ಣು-ಗಂಡು; ಸೂರ್ಯನು ಮುಳುಗಿದ್ದರೂ ಬಿಸಿಲಿನಲ್ಲಿದ್ದಂತೆ ಕಾಣುವ 'ಸೆಂಟ್ ಮೇರಿ' ಚರ್ಚಿನ ಶಿಖರ; ಆ ಚರ್ಚಿನಲ್ಲಿಯ ಗಂಟೆಗಳು ಒಂದೇ ಸಮನೆ ಬಾರಿಸುತ್ತವೆ. ಬೀದಿಯಲ್ಲಿ ಕಾಲಿಡಲು ಜಾಗವಿಲ್ಲ. ಇದು ಆಕ್ಸಫರ್ಡಿನಲ್ಲಿಯ ಸ್ಥಿತಿ. ಬ್ರಿಟನ್ನಿನ ಪ್ರತಿಯೊಂದು ಮೂಲೆಯಲ್ಲಿ ಹೀಗೆ. ಲಂಡನ್ನಿನಲ್ಲಿಯ ಪರಿಸ್ಥಿತಿಯು ಅವರ್ಣನೀಯವಾಗಿರಬೇಕು.

ಇಲ್ಲಿ ದೇವರಿಲ್ಲ,- ಅರಸನೇ ದೇವರೆಂದು ಕಾಣುತ್ತದೆ; ಇಲ್ಲವೆ ಅರಸೊತ್ತಿಗೆಯೇ ದೇವರು. ಹಿಂದುಗಳ ದೀಪಾವಳಿಗಿಂತ, ಮಹಮ್ಮದೀಯರ ಮೊಹರಮ್ಮಿಗಿಂತ ಹುಚ್ಚೆದ್ದು ಜನರು ಇಲ್ಲಿ ಕುಣಿದಾಡುತ್ತಾರೆ. ರಾಜಕಿರೀಟದಲ್ಲಿಯ ರತ್ನಗಳೆಲ್ಲ ಸಾಮ್ರಾಜ್ಯದ ಸಂಪತ್ತಿನ ಪ್ರತೀಕಗಳಾಗಿವೆ?

ಆದರೆ. . . .ಭಾರತಕ್ಕೆಂದು ಭಾರತಹುಣ್ಣಿಮೆ?

ನಾವು ಓಣಿಗುಂಟ ನಡೆದಾಗ ಪ್ರತಿಯೊಂದು ಅಂಗಡಿಯಲ್ಲಿ ರಾಜ್ಯಾರೋಹಣದ ಹೆಸರೆತ್ತಿದ ಸಾಮಾನುಗಳು, ಕಾರೋನೇಶನ್ ಶರ್ಟುಗಳು, ಗೊಂಬಿಗಳು, ಚೂರಿಗಳು ತಿನಸುಗಳು,-ಎಲ್ಲವೂ ಕಾರೋನೇಶನ್! ಸೆರೆ ಕುಡಿದು ಎಚ್ಚರ ತಪ್ಪಿದ ವಿದ್ಯಾರ್ಥಿಯೊಬ್ಬನು ನಮ್ಮೆದುರು ಬಂದು 'ಎಂಪಾಯರ್' ಎಂದು ಒದರಿದ. ಸಂಗಡಿಗನು ಅವನನ್ನು ಮುಂದೆಳೆದುಕೊಂಡು ನಡೆದ!

ಐವರು ಭಾರತೀಯರು ಒಂದು ಕ್ಯಾಫೆಯಲ್ಲಿ ಊಟಕ್ಕೆ ಕುಳಿತಿದ್ದರು. ಆಗ ರೇಡಿಯೋದ ಮೇಲೆ 'ಲಿನಲಿಥಗೋ' 'ಬಾಲ್ಡವಿನ್' ಮೊದಲಾದವರ ಭಾಷಣಗಳಾದವು. ಎಂಟು ಗಂಟೆಗೆ ಅರಸರ ಭಾಷಣವಾಯಿತು. ಅದರ ಪ್ರಾರಂಭಕ್ಕೆ ಹಾಗು ಮುಕ್ತಾಯದ ಹೊತ್ತಿಗೆ 'God save the king' ಎಂಬ ರಾಷ್ಟ್ರಗೀತೆಯ ಪಠಣವಾಯಿತು. ಆಗ ಕ್ಯಾಫೆಯಲ್ಲಿದ್ದ ಆಂಗ್ಲರೆಲ್ಲ ಎದ್ದುನಿಂತರು. ಭಾರತೀಯ ವಿದ್ಯಾರ್ಥಿಗಳು

ಸರಿದಾಡಲಿಲ್ಲ. ಮೆರವಣಿಗೆಯಲ್ಲಿ ನಾಲ್ಕು ಭಾರತೀಯ ಸೈನಿಕರು ಬಂದ ಮಾತ್ರಕ್ಕೆ ಭಾರತದ ಒಪ್ಪಿಗೆಯನ್ನು ಗಳಿಸಿದಂತಾಗಲಿಲ್ಲವೆಂಬುದು ಆ ಕ್ಯಾಫೆಯಲ್ಲಿದ್ದ ಆಂಗ್ಲರಿಗೆ ಮನಸದಟ್ಟಾಗಿರಬೇಕು!

ಇದನ್ನೆಲ್ಲ ನೋಡುತ್ತ ವಿಚಾರಗಳ ತಾಕಲಾಟದಲ್ಲಿ ನಾನು ಬಸ್ಸು ಹತ್ತಿ ಕೋಣೆಗೆ ನಡೆದೆ. ಓಣಿಯಲ್ಲಿಯ ಗೊಂದಲದಲ್ಲಿ ಕಾಲನ್ನು ನೋಯಿಸಿಕೊಂಡ ತರುಣಿಯು ಕುಳಿತಿದ್ದಳು. ಅವಳ ಜೊತೆಗೆ ಕಾದಲನಿದ್ದ. ಅವರಿಬ್ಬರ ನಡುವೆ ಏನು ಸಂಭವಿಸಿತ್ತೋ ಗೊತ್ತಿಲ್ಲ. ತರುಣಿಯು ಅಳುತ್ತಿದ್ದಳು. ಅವಳ ಜೊತೆಗೆ ಕುಳಿತ ಯುವಕನು ಅವಳನ್ನು ರಮಿಸಲು ಪ್ರಯತ್ನಿಸಿ ಬಸ್ಸನ್ನು ತನ್ನ ಅಂತಃಪುರವಾಗಿ ಮಾಡಿಬಿಟ್ಟಿದ್ದ!

---

## ೭೦

### ಕಮನೂರ ದಿನ್ನೆ

ಇಂದಿನೀ ಸಂಜೆಯಲಿ ಕಮನೂರ ದಿನ್ನೆಯಾ
ಕೊನ್ನಾರದಲಿ ನಿಂತು ನಿನ್ನ ಕರೆಯುವೆನೀಗ.
ಬನ್ನಕ್ಕೆ ಬಾಯಿಲ್ಲ! ಮೂಕ ಕರೆಯಾಲಿಸುತ
ನೂಕಿ ಬಾರಿತ್ತು ಮುನ್ನೀರ ದೊರೆಯು!

ಹಿಂದೊಬ್ಬ ಕವಿಯಿಲ್ಲಿ ಆಂದದಾಟವ ಕಂಡು
ಮನವಂದ ಗೆಳೆಯನೊಡನಾಡಿ ಕಾಲವ ಕಳೆದ.
ಇಂದೊಬ್ಬ ಕವಿ ತನ್ನ ನೇಹದವರನು ತೊರೆದು
ಮೋಹವಶನಾಗಿ ಕರಕರೆಯ ಪಡುತಿಹನು!

ಇಲ್ಲಿದ್ದ ಕನ್ನೆಯೊರ್ವಳಿಗೊಲಿದ ಧಣಿಯೊಬ್ಬ
ಮದುವೆಯಾಗುವೆನೆಂದು ನುಡಿಯಿತ್ತು ಕರೆದೊಯ್ದು
ರಾಣಿಯೊರ್ವಳ ತೋಷಕಾಗಿ ಮಾರಿದನಸುವ:
ಬಾರದಿರಲೀ ದೈವ ನನ್ನಸುವಿಗೊಡೆಯ!

ಹಾಡುತಿವೆ ಹಕ್ಕಿಗಳು,—ನಾನು ತಿಳಿಯದ ಭಾಷೆ!
ಅರಳಿಹವು ಬಗೆಬಗೆಯ ಹೂವಿಲ್ಲಿ ಬೈಗಿನಲಿ,
ನರಳುತಿಹೆ, ತಾಯ್ನಾಡೆ! ನಿನ್ನ ದರುಶನಕಾಗಿ
ಚರಣಕಮಲದಿ ಹರಣ ಲೀನವಾಗಿ.

ಹಿಂಡನಗಲಿದ ಹರಿಣ, ಹೆಣ್ಣನಗಲಿದ ಗಂಡು,
ಒಂದೆದೆಯನೆರಡಾಗಿ ಸುತ್ತು ಬಿಸುಟಿದ ನಲುಮೆ,
ಮೇಲ್ನರಿದು ಒಲುಮೆಗಳು ಗಾಸಿಗೊಳಿಸಿದ ಜೀವ,—
ಒಂದಲ್ಲ, ಎರಡಲ್ಲ, ನೂರಿರಿತ, ದೊರೆಯೆ!

ಇದೊ! ಬಿದಿಗೆ ಚಂದಿರನು ನಿಂತ ಮುಗಿಲಿನ ತುದಿಗೆ.
ಕೊನ್ನಾರದಲಿ ನಿಂತು ನೋಡುತಿಹೆನೆಡಬಲಕೆ.
ನನ್ನ ಬಯಕೆಯ ಹಣ್ಣು ಚಂದ್ರನಂತೆಯೆ ಬೆಳೆದು
ಮಾಗಿ ಹುಣ್ಣಿಮೆಯಾಗಿ ಸಾಗಿ ಬರಲಿನ್ನು.

* * * *

೧೪–೫–೩೭

ನಿನ್ನೆ ಯೂನಿಯನ್ನದಲ್ಲಿ ಚರ್ಚೆಯಾಯಿತು. 'ನೂತನ ರಾಜಪದ್ಧತಿಯನ್ನು ಭಾರತದಲ್ಲಿದ್ದ ಕಾಂಗ್ರೆಸ್ಸು ಅಂಗೀಕರಿಸದಿರುವದು ವಿಷಾದಕರವಾಗಿದೆ' ಎಂಬ ವಿಷಯದ ಮೇಲೆ. ಕಾನ್ಸರ್ವೇಟಿವ್ಹ ಪಕ್ಷದವರು ಈ ಸೂಚನೆಯನ್ನು ಮಂಡಿಸಿದರು. ಚರ್ಚಿಲ್ ಮೊದಲಾದ ವಿರೋಧಿಗಳ ಅಭಿಪ್ರಾಯವು ಅವರಿಗೆ ಸರಿಬಾರದಿದ್ದರೂ ಇಷ್ಟರಲ್ಲಿಯೇ ಪೂರ್ಣ ಸ್ವಾತಂತ್ರ್ಯವನ್ನು ಭಾರತಕ್ಕೆ ಕೊಡುವದು ಯುಕ್ತವಲ್ಲವೆಂದು

ಸಾರಿದರು. 'ಮದರ್ ಇಂಡಿಯಾ' ಮೊದಲಾದ ಪುಸ್ತಕಗಳ ಉಪಯೋಗ ವನ್ನು ಯಥಾಪ್ರಕಾರ ಮಾಡಿಕೊಂಡರು.

ಭಾರತೀಯ ವಿದ್ಯಾರ್ಥಿಗಳು ಕೆಲವರು ಸೂಚನೆಯನ್ನು ವಿರೋಧಿ ಸಿದರು. ಆದರೆ ಮಾತಿನ ಮಲ್ಲರು ಯಾರೂ ಇರಲಿಲ್ಲ. ಇವರಿಗಿಂತ ಸಮತಾವಾದಿಗಳಾದ ಆಂಗ್ಲ ವಿದ್ಯಾರ್ಥಿಗಳೇ ಸೂಚನೆಯನ್ನು ಹೆಚ್ಚು ಹುರುಪಾಗಿ ವಿರೋಧಿಸಿದರು. 'ಎಡ್ಗರ್ ಜೋನ್ಸ್,' 'ಸಿ. ಜಿ. ಪಿ. ಸ್ಮಿಥ್' ಎಂಬವರು ಉತ್ತಮವಾಗಿ ಮಾತನಾಡಿದರು: 'ಭಾರತದ ರಾಜ್ಯ ಕ್ರಮವನ್ನು ಭಾರತೀಯರೇ ನಿರ್ಣಯಿಸಬೇಕು; ಜನತೆಯ ಅವಿದ್ಯೆಯೇನು ದೊಡ್ಡ ಮಾತಲ್ಲ; ರಸಿಯಾದಲ್ಲಿ ಕ್ರಾಂತಿಕಾಲಕ್ಕಿಂತ ಮೊದಲು ವಿದ್ಯಾ ವಂತರ ಸಂಖ್ಯೆಯು ಎಷ್ಟಿತ್ತು? ಸಮಾಜದಲ್ಲಿಯ ಕೀಳುನಡತೆಗಳು ಸ್ವಾತಂತ್ರ್ಯಕ್ಕೆ ಅಡ್ಡಿಬರುವದು ಹೇಗೆ? ಗಂಡ-ಹೆಡಿರಿಬ್ಬರು ಒಬ್ಬರ ನ್ನೊಬ್ಬರು ವಂಚಿಸಿದರು ಸಹ ಬಿಡುಗಡೆಯಾಗಲಾರರೆಂಬ ರೂಢಿಯಿರುವ ವರೆಗೆ ಆಂಗ್ಲರು ಸುಧಾರಿಸಿದವರೆಂದು ಹೇಗೆ ಹೇಳುವದು? ಹೀಗಿದ್ದ ಪಕ್ಷದಲ್ಲಿ ಆಂಗ್ಲರು ತಮ್ಮ ದೇಶವನ್ನು ಆಳಲು ಅನರ್ಹರೆಂದು ಸಿದ್ಧವಾಗುವದೊ?'

ಇಂತಹ ಸಹಾನುಭೂತಿಯುಳ್ಳ ತರುಣರು ಬ್ರಿಟನ್ನಿನಲ್ಲಿ ಜನಿಸುವ ರೆಂದ ಮೇಲೆ ನಮ್ಮ ದುರ್ದೈವವು ಮುಗಿಯುವ ಆಸೆಯಿದೆಯೆನ್ನಬಹುದೆ?

---

# ೭೧

೧೭-೫-೩೭

'ಭಾರತೀಯ ಚಿತ್ರಕಲೆ' ಎಂಬ ವಿಷಯದ ಮೇಲೆ 'Sir William Rothenstein' ರ ಭಾಷಣವಾಯಿತು. ಮಜಲಿಸ್‌ದಲ್ಲಿ ಬಹುತೇಕ ಎಲ್ಲ ಅತಿಥಿಗಳ ಉಪಕಾರವನ್ನು ಸ್ಮರಿಸುವ ಕೆಲಸವು ಈಗ ನನ್ನ ಮೇಲೆಯೇ ಬೀಳುತ್ತದೆ!

'ರಾಜಕಾರಣ ಮತ್ತು ಕಾವ್ಯ' ಎಂಬ ವಿಷಯದ ಮೇಲೆ 'ಸ್ಟೀಫನ್ ಸ್ಪೆಂಡರ್' ಎಂಬ ಪ್ರಖ್ಯಾತ ಕವಿಯು ಹಾಗು 'ಮೈಕೇಲ್ ರಾಬರ್ಟ್ಸ್' ಎಂಬ ಪ್ರಸಿದ್ಧ ವಿಮರ್ಶಕನ ಭಾಷಣಗಳಾದವು. ಸ್ಪೆಂಡರನಿಗೆ ಬರುವದಾಗುವದಿಲ್ಲವೆಂದು ಇಂಗ್ಲಿಷ್ ಸಂಘದವರು ರಾಬರ್ಟ್ಸನಿಗೆ ಆಮಂತ್ರಣ ಕಳಿಸಿದ್ದರು. ಆತನು 'ಸಾಹಿತ್ಯದಲ್ಲಿ ಹಾಸ್ಯಾದ್ಭುತ' ಎಂಬ ವಿಷಯದ ಮೇಲೆ ಉಪನ್ಯಾಸವನ್ನು ಸಿದ್ಧಪಡಿಸಿಕೊಂಡು ಬಂದಿದ್ದ. ಆದರೆ ರಾಜಕಾರಣ ಕಾವ್ಯದಲ್ಲಿ ಕೀರ್ತಿಯನ್ನು ಸಂಪಾದಿಸಿದ ಸ್ಪೆಂಡರನು ಅಕಸ್ಮಾತ್ತಾಗಿ ಬಂದು ಬಿಟ್ಟ! ಕೊನೆಗೆ ಇಬ್ಬರೂ ಕೂಡಿ ಮೇಲೆ ಹೇಳಿದ ವಿಷಯವನ್ನು ಗೊತ್ತುಮಾಡಿಕೊಂಡರು! ರಾಬರ್ಟ್ಸನು ತಾತ್ವಿಕ ವಿವೇಚನೆಯನ್ನು ಮಾಡಿದ. ಮೇಸಫೀಲ್ಡ್ ಕವಿಯು ಬರೆದ 'ಕಾರೊನೇಶನ್ ಓಡಿ'ನ ಟೀಕೆಯು ಯಥಾಪ್ರಕಾರವಾಗಿ ಆಯಿತು. 'ಕವಿಯು ಮಾನಸಿಕ ವೈದ್ಯನಲ್ಲ, ಭವಿಷ್ಯವಾದಿಯಲ್ಲ. ಎಲ್ಲ ವಸ್ತುವಿನಂತೆ ರಾಜಕಾರಣವೂ ಅನುಭವವಾಗಬೇಕು. ಸ್ಪೆಂಡರನ ಕಾವ್ಯದಲ್ಲಿ ಈ ಪವಾಡವು ಸಂಭವಿಸಿದೆ' ಮುಂತಾಗಿ ಹೇಳಿದ.

ಸ್ಪೆಂಡರನು ಪೂರ್ವ ತಯಾರಿಯಿಲ್ಲದೆ ಬಂದಿದ್ದ. ಅವನ ವಯಸ್ಸು ಸುಮಾರು ಮೂವತ್ತುರಷ್ಟಾಗಬಹುದು. ಸಭಾಮಂದಿರದಲ್ಲಿ ಸಿಗರೇಟು ಸೇದಲಾಗದೆಂದು ನೋಟೀಸಿತ್ತು. ಆದರೂ ಒಂದು ಸಿಗರೇಟು ಹೊತ್ತಿಸಿ

ರಾಬರ್ಟ್ಸ್‌ನು ಮಾತಾಡುವಾಗ ಕೆಲವು ಟಿಪ್ಪಣಿಗಳನ್ನು ಮಾಡಿಕೊಂಡು ಭಾಷಣಕೊಡಲು ಸಿದ್ಧನಾದ. ಇದೇ ಸ್ಪೇನಕ್ಕೆ ಹೋಗಿ ಬಂದಿದ್ದ. ಅಲ್ಲಿ ಆರು ವಾರಗಳವರೆಗೆ ಇದ್ದನಂತೆ. ಈತನು ಸಮತಾವಾದಿ. ಸ್ಪೇನದಲ್ಲಿ ಇಂದು ನಡೆದ ಕ್ರಾಂತಿಯುದ್ಧದಲ್ಲಿ ತಿರುಳಿಲ್ಲದ ಕಾವ್ಯದೊಡನೆ ಉಜ್ವಲ ಕಾವ್ಯವೂ ಹುಟ್ಟುತ್ತಿದೆಯೆಂದು ಹೇಳಿದ. ಸ್ಪೇನದಲ್ಲಿಯ ಸರಕಾರವು ಎಲ್ಲ ಕವಿಗಳನ್ನೂ ಒಂದು ಅರಮನೆಯಲ್ಲಿಟ್ಟು ಅವರಿಗೆ ಬರೆಯಲು ತಕ್ಕ ಸೌಕರ್ಯಗಳನ್ನು ಒದಗಿಸಿ ಕೊಡುತ್ತಿದೆ! ಅಲ್ಲಿಯ ಯುದ್ಧದಲ್ಲಿ ಮಡಿದ ಅನೇಕ ಕವಿಗಳ ಬಗ್ಗೆ ಹಲವು ಮಾತುಗಳನ್ನು ಹೇಳಿದ. ವಿನೋದವು ಸಂದರ್ಭಾನುಸಾರವಾಗಿ ಹೊಳೆದಾಗ ಎಲ್ಲರೊಡನೆ ಸ್ಪಂಡರನು ತಾನೂ ನಗುತ್ತಿದ್ದ.

* * * *

ಇಲ್ಲಿಯ ಲೇಬರ್ ಕ್ಲಬ್ಬಿನವರು ಒಂದು 'ಇಂಡಿಯಾ ಸಮ್ಮೇಲನ'ವನ್ನು ಏರ್ಪಡಿಸಿದ್ದರು. ಸುಮಾರು ೫೦-೬೦ ಆಂಗ್ಲ ವಿದ್ಯಾರ್ಥಿಗಳು ಬಂದಿದ್ದರು. ಇಬ್ಬರು ಮುಖಂಡರು ಸಹಾನುಭೂತಿಯಿಂದ ಮಾತನಾಡಿದರು. ಒಟ್ಟಾರೆ 'ಭಾರತವು ಸ್ವತಂತ್ರವಾಗಬೇಕು. ಇದಕ್ಕಾಗಿ ಎಲ್ಲರೂ ಸಹಾಯ ಮಾಡಬೇಕು' ಎಂಬ ಭಾವನೆಯು ನಿಚ್ಚಳವಾಗಿ ಕಂಡುಬಂದಿತು.

* * * *

೧೮-೫-೩೭

ಎರಡು ವರ್ಷಗಳ ಹಿಂದೆ ಜೀಸಸ್ ಕಾಲೇಜಿನಲ್ಲಿದ್ದ ಭಾರತೀಯ ವಿದ್ಯಾರ್ಥಿಯೊಬ್ಬನು ಇಲ್ಲಿಗೆ ಬಂದಿದ್ದನು. ಹಳೆಯ ಗುರುತುಗಳನ್ನು ನೋಡಿ ನೆನಿಸುವ ಪ್ರೀತಿಯುಂಟಾಗಿರಬೇಕು,-ರಾಜ್ಯಾರೋಹಣದ ನಿಮಿತ್ತವಾಗಿ! ಆದರೆ ಅವನಿಗೆ ಕಾಲೇಜಿನಲ್ಲಿ ಯಾರ ಗುರುತೂ ಇರಲಿಲ್ಲ. ಪೋರ್ಟರನು ಸಹ ಬದಲಾಗಿದ್ದ. ಹೊಸ ಪೋರ್ಟರನೊಂದಿಗೆ ಗೊಂದಲ ಹಾಕುತ್ತಿರುವಾಗ ನಾನು ಅಲ್ಲಿಗೆ ಹೋದೆ. 'ನಾನು ಎರಡು

ವರ್ಷಗಳ ಹಿಂದೆ ಈ ಕಾಲೇಜಿನಲ್ಲಿ ಇದ್ದೆ. ಹಳೆಯ ಪೋರ್ಟರನೆಲ್ಲಿ?' ಎಂದು ಬಹಳ ನಾಚಿಕೊಂಡು ಕೇಳುತ್ತಿದ್ದ!

ರಾಜ್ಯಾರೋಹಣದ ನಿಮಿತ್ತವಾಗಿ ಒಬ್ಬ 'ಕಾಮದಾರ'ರು ಇಲ್ಲಿಗೆ ಬಂದಿದ್ದಾರೆ,— ಮುಂಬಯಿ ಪ್ರಾಂತದಿಂದ. ಇಲ್ಲಿ ಈಗ ಬೇಸಿಗೆಯಾದರೂ ಅವರಿಗೆ ಚಳಿ ಹತ್ತುತ್ತಿರುವದಂತೆ! ಶರ್ಟಿನ ಮೇಲೆ ಮೂರು 'ಪುಲೋವ್ಹರ್' (ಉಣ್ಣೆಯವು) ಹಾಕುತ್ತಾರೆ. ಓವ್ಹರ್‌ಕೋಟಂತೂ ಇದ್ದದ್ದೇ! ಇದಕ್ಕೂ ವಿಚಿತ್ರವೆಂದರೆ,— ಮೂರು ಜೋಡಿ ಉಣ್ಣೆಯ ಕಾಲುಚೀಲಗಳನ್ನು ಹಾಕಿಕೊಂಡು ಮೇಲೆ ಬೂಟು ಹಾಕುತ್ತಾರೆ. "ಇದಷ್ಟು ಸಾಕಾಯಿತು. ಇನ್ನೆಲ್ಲಿಯ ಯುರೋಪು? ದೇಶಕ್ಕೆ ಹೊರಡೋಣ" ಎಂದು ಉದ್ಗಾರ ತೆಗೆದರು.

---

## ೭೨

೧೯-೫-೩೭

ಸ್ಯಾಂಕಿಯ ಸೊಸಾಯಿಟಿಯಲ್ಲಿ ಭಾರತದ ಭವಿಷ್ಯವನ್ನು ಕುರಿತು ಒಂದು ಚರ್ಚೆಯಾಯಿತು. “ಬ್ರಿಟಿಶರ ಅಧಿಕಾರವು ಹಿಂದುಸ್ಥಾನದಲ್ಲಿ ಅಲ್ಲಿಯ ಜನರ ಕಲ್ಯಾಣಕ್ಕೋಸ್ಕರ ಇನ್ನೂ ಇರಬೇಕು” ಎಂಬುದೇ ವಿಷಯ. ವಿರೋಧವನ್ನು ಸೂಚಿಸುವದು ನನ್ನ ಪಾಲಿಗೆ ಬಂದಿತ್ತು. ನಾನು ಹಿಂದೆ ಈ ಸೊಸಾಯಿಟಿಯಲ್ಲಿ ಎರಡು ಸಲ ಮಾತನಾಡಿದ್ದೆ. ನನ್ನ ಭಾಷಣವನ್ನು ಕೇಳಬೇಕೆಂಬ ಕುತೂಹಲದಿಂದ ಅನೇಕರು ಬಂದಿದ್ದರು. ಹತ್ತು ಗಂಟೆಗೆ ಸಭೆಯು ವಿಸರ್ಜನೆಯಾಗಬೇಕು. ಆದರೂ ಹದಿನೈದು ನಿಮಿಷದ ಅವಧಿಯು ನನಗೆ ಹೆಚ್ಚಾಗಿ ದೊರೆಯಿತು! ಹಿಂದೂ-ಮುಸಲ್ಮಾನರ ಐಕ್ಯವಿಲ್ಲವೆಂದು ಸಾಧಿಸುವಾಗ ಒಬ್ಬ ಆಂಗ್ಲ ವಿದ್ಯಾರ್ಥಿಯು ‘ಪಾಕಿಸ್ತಾನ್’ ಎಂಬ ಹಸ್ತಪತ್ರಿಕೆಯ ವಿಷಯವನ್ನು ಎತ್ತಿದನು. (ಕೇಂಬ್ರಿಜ್‌ದಲ್ಲಿ ಒಬ್ಬ ಮುಸಲ್ಮಾನ ಯುವಕನಿದ್ದಾನೆ. ಪ್ರತಿ ವರ್ಷ ಹೊಸದಾಗಿ ಬಂದ ಭಾರತೀಯರಿಗೆಲ್ಲ ಅವನು ಈ ಹಸ್ತಪ್ರತಿಗಳನ್ನು ಹಂಚುತ್ತಾನೆ. ‘ವಾಯುವ್ಯಸರಹದ್ದಿನ ಪ್ರಾಂತ, ಸಿಂಧಪ್ರಾಂತ, ಪಂಜಾಬ, ಬೆಂಗಾಲ,- ಇವೆಲ್ಲ ಕೂಡಿ ‘ಪಾಕಿಸ್ತಾನ’ ಎಂಬ ಮಹಮ್ಮದೀಯ ದೇಶವಾಗಬೇಕು; ಮಹಮ್ಮದೀಯ ಸಂಸ್ಕೃತಿಯ ಏಕಸೂತ್ರತೆಯಿದ್ದ ದೇಶವಿದು’ ಎಂಬುದೇ ಈ ಪತ್ರಿಕೆಯ ಅಭಿಪ್ರಾಯ). ಅದಕ್ಕೆ ಉತ್ತರವಾಗಿ ನಾನು ‘ಪ್ರಿನ್ಸ್ ರ್‍ಯೂಪರ್ಟ್ ರಿಸ್ಟೋರೇಶನ್ ಕೌನ್ಸಿಲ್’ದ ಪ್ರಕರಣವನ್ನು ಹೇಳಿದೆ. (೧೭೪೫ ರಲ್ಲಿ ಆದ ‘ಜ್ಯಾಕೊಬಾಯಿಟ್’ ಬಂಡಿನ ಅವಶೇಷವು ಇಲ್ಲಿ ಇನ್ನೂ ಇದೆ. ಪ್ರತಿವರ್ಷ ಈ ಕೌನ್ಸಿಲ್ಲಿಗೆ ಸೇರಿದ ಆಕ್ಸಫರ್ಡ್ ವಿದ್ಯಾರ್ಥಿಗಳು ಇಲ್ಲಿಯ ‘ಮಾರ್ಟರ್ಸ್ ಮೆಮೋರಿಯಲ್’ದ ಹತ್ತಿರ ಹೋಗಿ ತಮ್ಮ ಅಭಿಪ್ರಾಯವನ್ನು ಸಾರಲು ಪ್ರಯತ್ನಿಸುತ್ತಾರೆ.

ಮೊನ್ನೆ ಮೊನ್ನೆ ಈ ಪ್ರಯತ್ನವನ್ನು ಇಲ್ಲಿ ಮಾಡಲಾಯಿತು.) ಭಾರತ ದಲ್ಲಿ ಧರ್ಮ, ಭಾಷೆ ಮೊದಲಾದ ವಿಷಯಗಳಲ್ಲಿ ವೈವಿಧ್ಯವಿದ್ದ ಮೂಲಕ ಸ್ವತಂತ್ರ ಜೀವನವು ಕಠಿಣವೆಂದು ಆತನು ಹೇಳಲು, ಅದೇ ವಿಷಯಗಳಲ್ಲಿ ಬ್ರಿಟನ್ನಿನ ಸ್ಥಿತಿಯನ್ನು ಮನಗಾಣಿಸಿಕೊಟ್ಟೆ. ಹಿಂದುಗಳು ವಾಡಿಕೆ ಯಾಗಿ ನೂರಾರು ವರ್ಷಗಳಿಂದ ದಾಸ್ಯವೃತ್ತಿಯಲ್ಲಿರುವರೆಂದು ಹೇಳಿದ. ಕ್ರಿ. ಶ. ೯೦೦ ರಿಂದ ಕ್ರಿ. ಶ. ೧೩೦೦ ವರೆಗೆ ಸ್ಯಾಕ್ಸನ್ನರ ಸ್ಥಿತಿಯೇನಿತ್ತು? ಅವರೂ ಮೂಲತಃ ಗುಲಾಮರೆಂದು ಹೇಳಬಹುದೇನೆಂದು ಕೇಳಿದೆ!

‡ ‡ ‡ ‡

೨೦–೫–೩೭

'ಕಾಂಗ್ರೀವ್' ಎಂಬ ನಾಟಕಕಾರನ 'Love for Love' (ಪ್ರೀತಿಗೆ ಪ್ರತಿ ಪ್ರೀತಿ.) ಎಂಬ ಕೃತಿಯ ಪ್ರಯೋಗವನ್ನು ನೋಡಿದೆ. ಕೆಲವು ಕೀಳು ಪ್ರವೇಶಗಳನ್ನು ಬಿಟ್ಟರೆ ನಾಟಕವು ನೋಡಲು ಉತ್ತಮ ವಾಗಿದೆ,– ಅದನ್ನು ಬರೆದು ಎರಡು ನೂರು ವರ್ಷಗಳ ಮೇಲಾದರೂ ಸಹ.

* * * *

ಶರ್ಮ್‌ಡ್ಮನು ತನ್ನ ವಧುವಾದ ಸೋಫಿಯಾಳೊಡನೆ ಇಂದು ನಮ್ಮಲ್ಲಿ ಊಟಕ್ಕೆ ಬಂದಿದ್ದ. ಬೇಂದ್ರೆಯವರ ಹಾಗು ನನ್ನ ಕನ್ನಡ ಕವಿತೆಗಳಲ್ಲಿ ಕೆಲವನ್ನು ಓದಿ ತೋರಿಸಿದೆ.

‡ ‡ ‡ ‡

ಇಲ್ಲಿ ಒಬ್ಬ ಭಾರತೀಯ ವಿದ್ಯಾರ್ಥಿಯಿದ್ದಾನೆ. ಆತನ ಮೆದುಳಿನ ಲ್ಲಿಯೇ ಏನೋ ವಿಕಾರವಿರಬೇಕು. ಬಹಳ ಒಳ್ಳೆಯವ. ಸಲಿಗೆಯಿಂದ ಅವನ ಹತ್ತಿರ ಹೋದರೆ ಆದರಾತಿಥ್ಯದ ದೃಷ್ಟಿಯಿಂದ ಎಷ್ಟೋ ರೀತಿ ಯಿಂದ ಗೌರವಿಸುತ್ತಾನೆ. ಆದರೆ,– ಹಾದಿಯಲ್ಲಿ ನಿಂತಿದ್ದ ಒಂದು ಮೋಟರನ್ನು ತೋರಿಸಿ, 'ಇದು ನನ್ನದು; ಇದನ್ನು ಹತ್ತಿ ನೀವು

ತಿರುಗಾಡಲು ಹೋಗಬಹುದು’ ಎಂದು ಹೇಳುತ್ತಾನೆ! ‘ನಿನ್ನೆ ನಾನು ಲಾರ್ಡ್—ರ ಸಂಗಡ ಊಟಮಾಡಿದೆ. ಮೊನ್ನೆ ಲಾರ್ಡ್—ಇವರ ಮಗಳೊಡನೆ ನರ್ತಿಸಿದೆ. ಇಂದು ನಮ್ಮ ಪ್ರೊಫೆಸರರಿಗೆ ಜಡ್ಡಾಗಿದೆ. ಅವರ ಬದಲು ನಾನೇ ಲೆಕ್ಚರ್ ಕೊಡಬೇಕೆಂದು ಹೇಳಿದ್ದಾರೆ. (ಅವರ ವಿದ್ಯಾರ್ಥಿಯಾದ ನನ್ನ ಗೆಳೆಯನೊಬ್ಬನು ಈ ಮಹನೀಯರೊಡನೆ ತಿರುಗಾಡಲು ಹೋಗಿದ್ದ. ಹಾದಿಯಲ್ಲಿ ನಡೆದ ಆ ಪ್ರೊಫೆಸರರು ನನ್ನ ಗೆಳೆಯನನ್ನು ಮಾತ್ರ ಗುರ್ತಿಸಿದರು!) ಇನ್ನೊಬ್ಬ ಪ್ರೊಫೆಸರರು ಕಾರ್ನವಾಲದಲ್ಲಿದ್ದಾರೆ. ಸ್ಥಾನಿಕ ಸ್ವರಾಜ್ಯವನ್ನು ಕುರಿತು ಅವರು ಬರೆಯುತ್ತಿರುವ ಪುಸ್ತಕಕ್ಕೆ ನನ್ನಿಂದ ಸಹಾಯವನ್ನು ಅಪೇಕ್ಷಿಸಿದ್ದಾರೆ. ನಾಳೆ ಹೋಗಬೇಕು.’ ಇದೇ ರೀತಿಯಾಗಿ ಮಾತನಾಡುತ್ತಾನೆ. ಅವನಿರುವುದು ರಾಜಕೀವಿಯಲ್ಲಿ. ದುಡ್ಡೆಲ್ಲಿಂದ ಬರುವದೋ ಗೊತ್ತಿಲ್ಲ. ಸ್ವತಃ ತಂದೆಯು ಬಡವ. ನನ್ನ ಗೆಳೆಯನೊಬ್ಬನು ಈ ವಿದ್ಯಾರ್ಥಿಯನ್ನು ಭೆಟ್ಟಿಯಾದಾಗ: ‘ನೀವು ಒಂದು ಕಾದಂಬರಿಯನ್ನೇಕೆ ಬರೆಯಬಾರದು?’ ಎಂದು ಕೇಳಿದ. ‘ಏನನ್ನು ಕುರಿತು’ ಎಂದು ವಿದ್ಯಾರ್ಥಿಯು ಪ್ರಶ್ನಿಸಿದಾಗ,– ‘ನಿಮ್ಮನ್ನೇ ಕುರಿತು!’ ಎಂದು ಉತ್ತರವಿತ್ತ. ಯಾವಾಗಲೂ ಒಬ್ಬ ಆಂಗ್ಲ ಯುವತಿಯೊಡನೆ ಈ ವಿದ್ಯಾರ್ಥಿಯು ತಿರುಗಾಡುತ್ತಾನೆ.

———

೭೩

## ಸಿಗದಿದ್ದ "ನ್ಯುಡಿಗೇಟ"ನ್ನು ಕುರಿತು:

ಇಲ್ಲಿ ತಂದ ಸಂಕಲ್ಪ ಬರಿ ವಿಕಲ್ಪವಾಯಿತೆ?
ಅಂದು ನುಡಿದ ಬೀರನುಡಿಯು ಇಂದು ಜಲ್ಪವಾಯಿತೆ?
ಜಲಧಿಯಾಚೆ ಕರೆದು ತಂದ ದೈವ ಕೈಯ್ಯ ಬಿಟ್ಟಿತೆ?
ದುರ್ದೈವ ಬಿಟ್ಟ ಬಾಣ ಮರೆಮೋಸದಿ ನಟ್ಟಿತೆ?
ಎದೆಯ ಮುಗುಳ ಮುಟ್ಟಿತೆ?

ಹಾತೊರೆಯಲಿಲ್ಲ ನಾನು ಹಂಸತಲ್ಪದಂದಕೆ.
ಬಾಯ್ದೆರೆದು ನಿಲ್ಲಲಿಲ್ಲ ಬೆಳ್ಜಸದಾನಂದಕೆ.
ಕನ್ನಡಿತಿಯ ಚೆನ್ನಡಿಗೆನೆ ಹೂವನೊಂದ ಬೇಡಿದೆ:
ದೊರೆಯದಿದ್ದ ಸೊಬಗಿಗಾಗಿ ಇಂದು ನೊಂದು ಹಾಡಿದೆ
ದೇವ! ನಿನ್ನ ಕಾಡಿದೆ.

ನಿನ್ನ ಬಸಿರಿನಲ್ಲಿ ಬೆಳೆದು ಬರಲಿ ತಾಯೆ! ಕುವರರು:
ಎಣ್ದೆಸೆಯಲಿ ನಿನ್ನ ಜಯವ ಸಾರುವಂಥ ಧೀರರು:
ದೈವವಿರಲಿ ಇಲ್ಲದಿರಲಿ,—ರಾಶಿಯಿತ್ತು: ತೂರಿದೆ:
ಜೊಳ್ಳುಗಾಳು ಗಾಳಿಗುಂಟ ಹೋಯ್ತು: ಹೌಹಾರಿದೆ:
ಮುಗಿಲಿಗೆದೆಯ ತೋರಿದೆ.

ಕಾಣದಂಥ ದೈವತವದು ನಿಂತು ನನ್ನ ಹೃದಯದಿ
ತಾಳ ಹಾಕುತಿಹುದು. ಅದರ ಸುಳಿವು ಹಿಡಿದು ವಿನಯದಿ
ಸಾಗುತಿಹೆನು. ಕಣ್ಣನಿತ್ತು ಕಾಪಿಡುವದು ಕೂಡಿದೆ
ನಿನ್ನನೆನ್ನ ತಾಯೆ! ಅದರ ಕಿರಿಯಾಸೆಯು ಮೂಡಿದೆ:
ಕತ್ತಲಲ್ಲು ನಿನ್ನ ಸೇವೆಗೆಂದು ನನ್ನ ಹೂಡಿದೆ.

———

ಆದರೂ ಈ 'ಸ್ಯುಡಿಗೇಟ'ನ ಬಗ್ಗೆ ವಿಚಾರಮಾಡಲಾಗಿ ಹೀಗೆ ಎನಿಸುವದು: 'ಪರಭಾಷೆಯಲ್ಲಿ ಕವಿತೆಯನ್ನು ಬರೆದು ಇನಾಮನ್ನು ಪಡೆಯುವ ಹವ್ಯಾಸವು ನನಗೇಕೆ? ಇಲ್ಲಿಯವರೆಗೆ ನಾನು ಬೆಳೆಸಿದ ಶಕ್ತಿಯನ್ನು ಒರೆಗೆ ಹಚ್ಚಬೇಕೆಂಬ ಲವಲವಿಕೆಯು ಸ್ವಾಭಾವಿಕವಾದುದು. ಆ ರೀತಿಯಾಗಿ ಅದನ್ನು ಪರೀಕ್ಷಿಸಿದ್ದಾಯಿತು. ಆದರೆ ನಿಜವಾದ ಜೀವನವು ನಾನು ಇಲ್ಲಿಯವರೆಗೆ ಮಾಡುತ್ತಿದ್ದ ಸೇವೆಯಲ್ಲಿಯೇ ಇದೆ. ಜೀವನಕ್ಕೆ ಒಂದು ತಳಹದಿಯನ್ನು ಹಾಕಿಡಬೇಕು. ಆರ್ಥಿಕ ಆಧಾರವನ್ನು ಕಲ್ಪಿಸಬೇಕು. ಕೌಟುಂಬಿಕ ಸ್ಥಿತಿಯನ್ನು ಸಮಾಧಾನಕಾರಕವಾಗಿ ಏರ್ಪಡಿಸಬೇಕು. ಉಳಿದ ವೇಳೆಯನ್ನೆಲ್ಲ ತಾನು ಮಾಡಿಕೊಂಡ ಧ್ಯೇಯಕ್ಕಾಗಿ ವೆಚ್ಚಮಾಡಬೇಕು. ಇದರಿಂದ ಜೀವಿತವು ಒಂದು ಸಾಧನೆಯ ಮಾರ್ಗವಾಗುವದು. ಇದಕ್ಕಿಂತ ಹೆಚ್ಚಿನದು ಬೇರೊಂದಿಲ್ಲ. ಉಳಿದುದೆಲ್ಲ ಆ ವ್ಯಕ್ತಿಯ–ಆ ವ್ಯಕ್ತಿಯನ್ನು ಹೊಂದಿದ ದೇಶದ–ಭಾಗ್ಯದ ವಿಷಯ. ಅದನ್ನು ಲೆಕ್ಕದಲ್ಲಿ ಹಿಡಿಯಬಾರದು. ಬಂದರೆ ಅದು ಮಹಾಪೂರದಂತೆ ಬರುತ್ತದೆ. ಹೋದರೆ, ಗುಬ್ಬಿಗೆ ಸಹ ಕುಡಿಯಲು ನೀರಿಲ್ಲದ ಹಾಗೆ ಹೋಗುತ್ತದೆ.

೨೬–೫–೩೭

*  *  *  *

ಆಕ್ಸಫರ್ಡಿಗೆ ಸಮೀಪದಲ್ಲಿ 'ಫೆರಿ ಹಿಂಕ್ಸೆ' ಎಂಬ ಒಂದು ಹಳ್ಳಿಯಿದೆ. ಇಲ್ಲಿಗೆ ಹೋಗುವ ದಾರಿಯು ಎಡಬಲಕ್ಕೆ ಅರ್ಧ ಮೈಲಿನವರೆಗೆ ದೊಡ್ಡ ಮರಗಳ ತೋಪಿದೆ. ಇಂಥ ಮರಗಳ ಗುಂಪಿನ ದಾರಿಯನ್ನು ನಾನು ಮತ್ತೆಲ್ಲಿಯೂ ಕಂಡಿರಲಿಲ್ಲ. ದಾರಿ ಮುಗಿಯುವಲ್ಲಿ ಒಂದು ಸಣ್ಣ 'ಫೆರಿ' ಇಲ್ಲವೆ 'ತೊರೆಯು' ಹರಿಯುವದು. ಅದರ ಮೇಲಿನ ಪೂಲನ್ನು ದಾಟಿ ಹಳ್ಳಿಗೆ ಹೋಗಬಹುದು. ಈ ಚೆಲುವಿನ ಪ್ರದೇಶದಲ್ಲಿಯ ಒಂದು ಸನ್ನಿವೇಶವನ್ನು ಕುರಿತು 'ಫೆರಿ ಹಿಂಕ್ಸೆ' ಎಂಬ ಕವಿತೆಯನ್ನು 'ಬಿನಿಯನ್' ಕವಿಯು ರಚಿಸಿರುವನು.

*  *  *  *

೩೧-೫-೩೭

'ನ್ಯುಡಿಗೇಟಿ'ಗೆ ಕವಿತೆಗಳನ್ನು ಕಳಿಸಿದವರ ಹೆಸರು ಪರೀಕ್ಷ-ಕರಿಗೆ ಗೊತ್ತಾಗುವಂತಿಲ್ಲ. ಒಬ್ಬ ಆಂಗ್ಲ ವಿದ್ಯಾರ್ಥಿಯು ಬರೆದ ಕವಿತೆಯೆಂದೇ ನನ್ನ ಕವಿತೆಯು ಪರೀಕ್ಷೆಯಾಗಿದೆ! ಹೀಗಿದ್ದರೂ ಇನಾಮು ಸಿಗದ ಕವಿತೆಗಳ ಎರಡನೆಯ ತರಗತಿಯಲ್ಲಿ ನನ್ನ ಕೃತಿಯು ನಿಂತದ್ದು ಹೆಚ್ಚೆನ್ನಬೇಕು.

'ಬೋಸ್' ಎಂಬ ಇಲ್ಲಿಯ ಆಂಗ್ಲಪ್ರೊಫೆಸರರ ಪರಿಚಯವಿದೆ ನನಗೆ. ಅವರ ಅವಲೋಕನಾರ್ಥವಾಗಿ ನಾನು ಕವಿತೆಯನ್ನು ಕಳಿಸಿದ್ದೆ. ಕವಿತೆಯು ಅವರಿಗೆ ರುಚಿಸಿದಂತೆ ತೋರುತ್ತದೆ. ಅವರ ಅಭಿಪ್ರಾಯವು ಹೀಗೆ:-(೧) ವಿವಿಧ ಛಂದಸ್ಸಿನ ಪ್ರಯೋಗವು ಚೆನ್ನಾಗಿಯೂ ವೈಯಕ್ತಿಕವಾಗಿಯೂ ಇದೆ. ಬರಿ ಅನುಕರಣವಲ್ಲ. (೨) ಆದರೆ ಅನೇಕ ಶೈಲಿಗಳ ಮಿಶ್ರಣದಿಂದ ಕವಿತೆಯ ಪಾಕಕ್ಕೆ ಭಂಗಬರುತ್ತದೆ. ಒಮ್ಮೊಮ್ಮೆ ಒಂದೇ ಸಮನೆ ಮನೋಹರವಾದ ಸಾಲುಗಳನ್ನು ಓದಿ, ನಡುವೆ ಅನಪೇಕ್ಷಿತವಾಗಿ ಅನುಚಿತ ಪ್ರಯೋಗವೊಂದು ಬಂದಾಗ,-ಮಾಡಿದ ಮಾಟವನ್ನು ಹೀಗೆ ಕೆಡಿಸುವದುಂಟೆ! ಎಂದೆನಿಸುತ್ತದೆ. ಆಂಗ್ಲ ಭಾಷೆಯು ತಾಯ್ನುಡಿಯಲ್ಲದ ಬರಹಗಾರರಿಗೆ ಇದು ಅನಿವಾರ್ಯವಾದುದು. (೩) ಭಾರತೀಯ ದೃಷ್ಟಿಕೋನವೇ ಬೇರೆ, ವಸ್ತುನಿರೂಪಣೆಯೇ ಬೇರೆಯಾಗಿದೆ. ಇಂತಹ ಭಾವನೆಗಳಿಗೆ,-ಬೇರೊಂದು ಸಂಸ್ಕೃತಿಗಾಗಿ ಬೆಳೆಸಿದ ಆಂಗ್ಲ ಭಾಷೆಯಲ್ಲಿ ಉಚಿತವಾದ ಕಾವ್ಯಶಬ್ದ ಸಂಗ್ರಹವನ್ನು ರಚಿಸುವದು ಕಠಿಣವಾಗಿದೆ. (೪) ಆದರೆ ಈ ಹವಣಿಕೆಯಲ್ಲಿ ತಥ್ಯವಿದೆ. ಹೀಗೆಯೇ ಮುಂದು ವರಿಯಬೇಕು.

ಆಧುನಿಕ ಭಾರತೀಯ ಕಾವ್ಯವನ್ನು ಭಾಷಾಂತರಿಸಲು ಮಾತ್ರ ಆಂಗ್ಲ ಭಾಷೆಯನ್ನು ಉಪಯೋಗಿಸುವೆನೆಂದು ನಾನು ಪ್ರೊಫೆಸರರಿಗೆ ಹೇಳಿದೆ.

* * * *

'ಎಬರಕ್ರೊಂಬೀ' ಎಂಬ ಆಂಗ್ಲ ಕವಿಯು ಈ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರನಾಗಿದ್ದಾನೆ. ಮೊನ್ನೆ ಕ್ಲಾಸಿನಲ್ಲಿ ಉಪನ್ಯಾಸವನ್ನು ಕೊಡುವಾಗ ಈ ಮಹನೀಯನ ಮೂಗು ಬಿಚ್ಚಿ ರಕ್ತವು ಹನಿಹನಿಯಾಗಿ ಬೀಳಹತ್ತಿತು. ಒಂದು ತಾಸಿನ ಅವಧಿಯಲ್ಲಿ ಕಿಸೆಯಲ್ಲಿಯ ಎರಡು ಕರವಸ್ತ್ರಗಳು ತೊಯ್ದುವು. ಆದರೆ ಉಪನ್ಯಾಸವನ್ನೇನು ನಿಲ್ಲಿಸಲಿಲ್ಲ. ಮುಗಿಯುವ ಹೊತ್ತಿಗೆ: 'ಈ ರಕ್ತಸ್ರಾವದಿಂದ ನಿಮ್ಮ ಲಕ್ಷ್ಯವು ಚಂಚಲವಾಗಿರಬಹುದು. ಅದಕ್ಕಾಗಿ ನನ್ನನ್ನು ಕ್ಷಮಿಸಿರಿ' ಎಂದು ಹೇಳಿದ.

*　　*　　*　　*

೧–೬–೩೭

ಕೆಲವು ವರ್ಷಗಳ ಹಿಂದೆ 'ಎಲ್‌ಫಿನ್‌ಸ್ಟನ್' ಕಾಲೇಜಿನಲ್ಲಿ ಆಂಗ್ಲ ಭಾಷೆಯ ಪ್ರೊಫೆಸರರಾಗಿದ್ದ ಡಾ. ಪಾರ್ಕರ್ ಹಾಗು ಅವರ ಘಾರ್ಸಿ ಪತ್ನಿಯ ಬೆಟ್ಟಿಯಾಗಿತ್ತು. ಸುಖವಾಗಿದ್ದಂತೆ ಕಾಣುತ್ತಾರೆ. ಡಾ. ಪಾರ್ಕರರು 'ಬರ್ಮಿಂಗ್‌ಹ್ಯಾಮ್' ವಿಶ್ವವಿದ್ಯಾಲಯದಲ್ಲಿ ಲೆಕ್ಚರರಾಗಿ ಇದ್ದಾರೆ. 'ಎಳೆಬಿದಿರಿನ ಉಪ್ಪಿನಕಾಯಿ' ಸಿಗುತ್ತದೆ ಇಲ್ಲಿ. ಹಿಂದುಸ್ತಾನದಲ್ಲಿಯ ಅಡಿಗೆಯ ರುಚಿ ಬರುತ್ತದೆ. ತಿಂದು ನೋಡಿರಿ' ಎಂದು ಶ್ರೀಮತಿ ಪಾರ್ಕರರು ಹೇಳಿದರು. ಲಗ್ನದ ಪೂರ್ವದಲ್ಲಿ ಅವರು ಎಲ್‌ಫಿನ್ಸ್ಟನ್ ಕಾಲೇಜಿನಲ್ಲಿ ಡಾಕ್ಟರರ ವಿದ್ಯಾರ್ಥಿನಿಯಾಗಿದ್ದರು.

†　　†　　†　　†

೨–೬–೩೭

ಲಿಬರಲ್ ಕ್ಲಬ್ಬಿನಲ್ಲಿ 'ಬರ್ಟ್ರಂಡ್‌ರಸೆಲ್' ಹಾಗು 'ಸರ್ ನಾರ್ಮನ್ ಎಂಜೆಲ್' ಇವರ ಚರ್ಚೆಯಿತ್ತು. 'ವಿಶ್ವಶಾಂತಿಗೆ ದಾರಿ ಯಾವುದು?' ಎಂಬುದೇ ವಿಷಯ. 'ಎಂಜೆಲ್' ಇವರು ಮಾತನಾಡುತ್ತ: 'ಸಾಮೂಹಿಕ ಸ್ವಾಸ್ಥ್ಯವೇ ಉತ್ತಮ. ಫ್ರಾನ್ಸ್ ಹಾಗು ರಸಿಯಾ ದೇಶದೊಡನೆ ಇಂಥ ಒಪ್ಪಂದವನ್ನು ಮಾಡಿಕೊಳ್ಳಬೇಕು,– ಆದರೆ ಕೆಲವು ಕರಾರುಗಳನ್ನು ಹಾಕಿ: ಇಂಥ ಕೆಲವು ತತ್ವಗಳನ್ನು ಪಾಲಿಸಲು ಮಾತ್ರ ಪರಸ್ಪರ

ಸಂರಕ್ಷಣೆಗೆ ಸಿದ್ಧರಿರುವೆವೆಂದು. ಅಂದರೆ ಯುದ್ಧದ ಪ್ರಸಂಗವೇ ಏಳುವದಿಲ್ಲ.'

ಮುಂದೆ 'ಬರ್ಟ್ರೆಂಡ್ ರಸೆಲ್'ರು ಎದ್ದು ನಿಂತರು. ಚೆನ್ನಾಗಿ ಹಿಕ್ಕಿ ನಡುವೆ ಬೈತಲ ತೆಗೆದ ಬಿಳಿಗೂದಲು ತಲೆಯ ಮೇಲೆ. ಅಗಲವಾದ ಮೋರೆ. ಕರ್ಕಶವಾದ ಧ್ವನಿ. ವಿಲಾಸಿಯ ದೇಹದಂತೆ ಕಳೆಗೆಟ್ಟು ಶಕ್ತಿ ಹೀನವಾದ ರೂಪ. ಆದರೂ ಪ್ರತಿಭೆಯ-ಬುದ್ಧಿವಂತಿಕೆಯ ವರ್ಚಸ್ಸು. 'ಸಾಮೂಹಿಕ ಸ್ವಾಸ್ಥ್ಯವೆಂದರೆ ಸಾಮೂಹಿಕ ಅಸ್ವಾಸ್ಥ್ಯ' 'War somewhere means war everywhere' (ಒಂದು ಕಡೆಗೆ ಯುದ್ಧವೆಂದರೆ ಎಲ್ಲ ಕಡೆಗೂ ಯುದ್ಧ.) ಆದಕಾರಣ ಇಂಥ ಒಪ್ಪಂದವನ್ನು ಮಾಡ ಕೂಡದು. ಯುದ್ಧ ಮಾಡಿ ಉದಾತ್ತ ತತ್ವವನ್ನು ಗಳಿಸುವದು ಶಕ್ಯವಿಲ್ಲ. 'No idealistic end can be achieved by war' (ಯುದ್ಧದಿಂದ ಯಾವ ಆದರ್ಶಮಯೋದ್ದೇಶವೂ ಕೈಗೂಡದು) ಯುದ್ಧವು ಆಗಲೇ ಬೇಕಾಗಿದ್ದರೆ,-ಅದರಲ್ಲಿ ಎಷ್ಟು ಕಡಿಮೆ ಜನರು ಭಾಗ ವಹಿಸುವರೋ ಅಷ್ಟು ಸೆಟ್ಟಗೆ....ಇತ್ಯಾದಿ' ಹಿಂದುಸ್ತಾನದ ಸ್ವಾತಂತ್ರ್ಯದ ಬಗ್ಗೆ 'ರಸೆಲ್'ರು ಬಹಳ ಕಳಕಳಿಯಿಂದ ಮಾತನಾಡಿದರು. ವಿನೋದಪ್ರಿಯರು. 'We believe that we are virtuous and that the other people are wicked; which, I think, is a half-truth' (ನಾವು ಸಜ್ಜನರು, ಉಳಿದವರೆಲ್ಲ ದುರ್ಜನರೆಂದು ನಾವು ನಂಬುತ್ತೇವೆ; ಇದರಲ್ಲಿ ಅರ್ಧ ದಷ್ಟು ಮಾತ್ರ ಸತ್ಯವಿದೆ). 'ಎಂಜೆಲ್'ರ ಮಾತುಗಾರಿಕೆಯಲ್ಲಿ ನಾಟ್ಯಕ್ಕೂ ಸ್ಥಾನವಿದೆ. ಬಲು 'ರೌಸು' ತಂದು ಮಾತನಾಡುತ್ತಾರೆ. 'ರಸೆಲ್'ರ ರೀತಿಯು ಶಾಂತವಾದುದು. 'ಶಾ'ನಂತೆ 'ರಸೆಲ್'ರೂ ಜಗತ್ತಿನ ಸ್ವಾರ್ಥ ವನ್ನು ನೋಡಿ ತ್ವೇಷಗೊಂಡು ನಿರಾಶೆಹೊಂದಿದ ಧ್ಯೇಯವಾದಿಗಳಲ್ಲಿ ಒಬ್ಬರು. 'ಶಾ'ನಲ್ಲಿ ಆಶಾವಾದವಿದೆ; ಸುಧಾರಕನ ಉತ್ಸಾಹವಿದೆ; ಅದೂ ಇವರಲ್ಲಿ ಇಲ್ಲ.

* * * *



ಶೇಕ್ಸಪಿಯರನ ಮನೆ

(ಪುಟ ೨೮೮)

ಒಂದು ದೃಶ್ಯವು ಲಕ್ಷ್ಯದಲ್ಲಿಡತಕ್ಕಂತಹದು : ಒಂದು 'ರಿಸ್ಟಾರಾಂ' ದಲ್ಲಿ ಅನೇಕ ಆಂಗ್ಲ ಪುರುಷರು–ಮಹಿಳೆಯರು ಚಹ ತೆಗೆದುಕೊಳ್ಳು ತ್ತಿದ್ದಾರೆ. ಒಬ್ಬ ಆಂಗ್ಲನನ್ನು ಮದುವೆಯಾದ ಭಾರತೀಯ ಮಹಿಳೆ ಯೊಬ್ಬಳು ತನ್ನ ೪ ವರ್ಷದ ಮಗುವಿನೊಡನೆ ಅಲ್ಲಿಗೆ ಬಂದು ಕುಳಿತಳು. ಅವಳೊಡನೆ ಮಾತನಾಡುವವರಾರೂ ಇಲ್ಲ. ಅವಳನ್ನು ನೋಡಿ ಮಾತ್ರ ಎಲ್ಲರೂ ನಕ್ಕು ಗುಜುಗುಜು ಮಾತನಾಡತೊಡಗಿದರು. ತನ್ನ ಮಗುವಿ ನೊಡನೆ ಮಾತನಾಡುತ್ತ ಕುಳಿತಳಾಕೆ. ಚಹ ಕುಡಿದು ಅಲ್ಲಿಂದ ಮಗುವನ್ನು ಕರೆದುಕೊಂಡು ಜನಸಮುದಾಯದೊಳಗಿಂದ ಹಾಯ್ದು ಹೋಗಬೇಕಾದರೆ ಅವಳಿಗೆ ಸಾಕುಬೇಕಾಗಿ ಹೋಯಿತು.

*　　*　　*　　*

೩–೬–೩೭

'ಇಲ್ಲಿಗೆ ಬಂದು ಒಂಬತ್ತು ತಿಂಗಳಾಯಿತು. ಇನ್ನೂ ನನಗೆ ಆಂಗ್ಲರ ಹೃದಯವು ತಿಳಿದಿಲ್ಲವಲ್ಲ!' ಎಂದು ನನ್ನ ಒಬ್ಬ ವೇಲ್ಸ್ ಸ್ನೇಹಿತನನ್ನು ಕೇಳಿದೆ. ಅವನು ಉತ್ತರಕೊಟ್ಟ: "ನೀವು ಆಟವಾಡ ಬಹುದಾಗಿದ್ದರೆ ಅಲ್ಪಸ್ವಲ್ಪ ಪರಿಚಯವಾಗುತ್ತಿತ್ತು. ಆದರೂ ವಿಶೇಷ ವಿಲ್ಲ. ಮದಿರಕೂಟಕ್ಕೆ ಹೋದರೆ ಪರಿಚಯವಾಗುವದೆಂದು ಕೆಲವರು ಭಾರತೀಯರು ತಿಳಿಯುತ್ತಾರೆ. ಅದು ತೀರ ತಪ್ಪು. ಯಾವನೊಬ್ಬ ನೊಡನೆ ಸೆರೆ ಕುಡಿದು ಕುಳಿತರೆ ಅವನ ಪರಿಚಯವಾದಂತಾಯಿತೆಂದು ಹೇಳಬಹುದೆ? ನೃತ್ಯಶಾಲೆಗಳಲ್ಲಿಯೂ ಹುರುಳಿಲ್ಲ. ಭಾರತೀಯರು ತಮ್ಮ ಸಂಸ್ಕೃತಿಯನ್ನಲ್ಲದೆ ಅನ್ಯ ಸಂಸ್ಕೃತಿಯನ್ನು ಅವಲಂಬಿಸ ಬಾರದು. ಇನ್ನು ಆಂಗ್ಲರ ವಿಷಯ : ಜಗತ್ತಿನಲ್ಲಿ ಆಂಗ್ಲರಷ್ಟು ಏಕಾಂತ ಪ್ರಿಯ ಜನಾಂಗವು ಇನ್ನೊಂದಿಲ್ಲ. 'ನನ್ನ ಜೀವನವನ್ನು ತಿಳಿದು ನನಗೆ ಸಹಾನುಭೂತಿಯನ್ನು ತೋರಿಸಬೇಕೆಂಬ ಲವಲವಿಕೆಯು ಇನ್ನೊಬ್ಬರಿ ಗಿರುವದು ಶಕ್ಯವಿಲ್ಲ. ಇನ್ನೊಬ್ಬರ ವಿಷಯವಾಗಿ ನನ್ನಲ್ಲಿ ಹೇಗೆ ಇಂತಹ ಆಕಾಂಕ್ಷೆಯು ಉತ್ಪನ್ನವಾದೀತು?' ಎಂಬುದು ಅವರ ಮಂತ್ರವಾ ಗಿದೆ. ಸಭ್ಯವರ್ತನೆ, ವಿನೋದ, ಸಾಮರಸ್ಯಗಳಲ್ಲಿ ಫ್ರೆಂಚರು ಬಲ್ಲಿದರು.

ಸ್ವಪ್ರತಿಷ್ಠೆ-ಸ್ವಸ್ತುತಿಗಳಲ್ಲಿ ಅಮೇರಿಕನ್ನರು ಹಿರಿದಾದವರು. ಅಚ್ಚು ಕಟ್ಟಿನಲ್ಲಿ,-ಹೊಸತಾದ ಕ್ರಮಗಳನ್ನು ರಚಿಸುವದರಲ್ಲಿ, ಜರ್ಮನ್ನರು ಮೇಲು. ವಿನಯ-ಸ್ನೇಹಶೀಲತೆಗಾಗಿ ಪರೀಕ್ಷಿಸಿದರೆ ಭಾರತೀಯರನ್ನು ಹಿಡಿದವರಿಲ್ಲ. ಏಕಾಂತಪ್ರಿಯತೆಯಲ್ಲಿ ಆಂಗ್ಲರನ್ನು ಯಾರೂ ಸರಿಗಟ್ಟ ಲಾರರು. ಅಂತೇ ಅವರು ಜಗತ್ತಿನ ಯಾವ ಮೂಲೆಯಲ್ಲಿಯೂ ಹೋಗಿ ಇರಬಲ್ಲರು. ಎಲ್ಲಿಯಾದರೂ ಅಷ್ಟೆ! ಹಿಂದುಸ್ತಾನದಲ್ಲಿ ವರ್ತಕ ನೊಡನೆ ಸಹ ನೀವು ಸ್ನೇಹ ಬೆಳೆಸುವದಾಗಿ ನಾನು ಕೇಳಿದ್ದೇನೆ. ಅವನೊಡನೆ ನಕ್ಕು ಕೆಲೆದು, ಹೆಚ್ಚುಕಡಮೆ ಕ್ರಯಕ್ಕಾಗಿ ನೀವು ಸಾಮಾನು ತರುವಿರಿ. ಆಂಗ್ಲ ವರ್ತಕನು ಹಾಗಲ್ಲ. ತನ್ನ ಸಾಮಾನು ಒಳ್ಳೆಯದೆಂಬ ವಿಶ್ವಾಸವು ಅವನಲ್ಲಿ ದೃಢವಾಗಿರುತ್ತದೆ ಅಂಗಡಿ ಯಲ್ಲಿಟ್ಟು ಕ್ರಯವನ್ನು ಬರೆದು ಹಚ್ಚಿ ಸುಮ್ಮನೆ ಕೂಡುತ್ತಾನೆ. ಬೇಕಾದರೆ ಗಿರಾಕಿಗಳು ಕೊಳ್ಳಬಹುದು; ಇಲ್ಲದಿದ್ದರೆ ಇಲ್ಲ. ಆಂಗ್ಲ ದೇಶದ ಸ್ಥಿತಿಯು ಎಲ್ಲ ವಿಷಯಗಳಲ್ಲಿಯೂ ಹೀಗೆ. ಪರಕೀಯರು ಬಂದು ನೋಡಿ ಸಂತೋಷಪಡಬಹುದು, ಇಲ್ಲವೆ ಶಪಿಸಬಹುದು! ಅದು ಅವರ ವೈಯಕ್ತಿಕ ಸ್ವಭಾವವನ್ನು ಅವಲಂಬಿಸಿದೆ!''

---

## ೭೪

೧೩-೬-೩೭

ಆಕ್ಸಫರ್ಡ ಯೂನಿಯನ್ನದಲ್ಲಿ 'ಸರ್ ಸ್ಯಾಮುಯಲ್ ಹೋರ'ರು ಮಾತನಾಡಿದರು. ಆಂಗ್ಲರ ಹಿತಕ್ಕಾಗಿ ಏನು ಮಾಡಿದರೂ ನ್ಯಾಯ ವಾದದ್ದೆಂದು ಅವರ ಅಭಿಪ್ರಾಯವಿದೆ. ಸಮತಾವಾದಿಯಾದ ವಿದ್ಯಾ ರ್ಥಿಯು ಪ್ರತಿಗಾಮಿಯ ವಿದ್ಯಾರ್ಥಿಯ ಭಾಷಣವನ್ನು ಚರ್ಚೆಯಲ್ಲಿ ಟೀಕಿಸುವಾಗ: 'ಈತನು ಸೈತಾನನ ವಕೀಲ. ಇವನ ವಕೀಲಿಯನ್ನು ಸಮರ್ಥವಾಗಿಸಲು ಇಲ್ಲಿ ಸೈತಾನನೇ ಬಂದು ಕುಳಿದ್ದಾನೆ. ಹಿಂದು ಸ್ತಾನದ ಮೇಲೆ ಹೇರಿದ ನೂತನ ರಾಜ್ಯಕ್ರಮವು ಹೋರರ ರಾಕ್ಷಸೀಯ

ರಚನೆಯಾಗಿದೆ. ಆದರೆ ಅದು ಅವರದೇ ತಪ್ಪಲ್ಲ. ಅವರ ಪಕ್ಷದ
ಮೇಲೆಯೇ ಆ ಪಾಪದ ಹೊಣೆಯಿದೆ. ಕಾರಣ, ಈ ಸಭೆಗೆ ಹೊರರನ್ನು
ಸ್ವಾಗತಗೆಯ್ಯುವ ಸಂದರ್ಭದಲ್ಲಿ,–ಅವರ ವಿಷಯವಾಗಿ ನನ್ನಲ್ಲಿ ವೈಯ
ಕ್ತಿಕ ದ್ವೇಷವಿಲ್ಲವೆಂಬುದನ್ನು ಮಾತ್ರ ಹೇಳಬಲ್ಲೆ' ಎಂದು ನುಡಿದನು.
ಈ ವಿದ್ಯಾರ್ಥಿಯ ಹೆಸರು ಜೆ. ಪಿ. ಸಿ. ಸ್ಮಿಥ್ ಎಂದು.

* * * *

ಪ್ರತಿಗಾಮಿ ಕ್ಲಬ್ಬಿನಲ್ಲಿ ಭಾರತಮಂತ್ರಿಗಳಾದ ಲಾರ್ಡ ಝೆಟ್
ಲಂಡರು ಮಾತನಾಡಿದರು. 'ನಮ್ಮಿಂದ ಹಿಂದುಸ್ಥಾನದ ಕಲ್ಯಾಣ
ವಾಗಿದೆ. ಎಲ್ಲರೂ ಜಗತ್ತಿನಲ್ಲಿ ಶಾಂತಿಯನ್ನು ನೆಲೆಗೊಳಿಸಬೇಕು.
ನಮಗೆ ಸರಿಯಾದವರು ಯಾರು?' ಹೀಗೆ ಮುಂತಾಗಿ ಅವರ ಮಾತಿನ
ಧೋರಣವಿತ್ತು.

† † † †

ನನ್ನ ಆಂಗ್ಲ ಸ್ನೇಹಿತನೊಬ್ಬನು ಹಿಂದುಸ್ಥಾನದಲ್ಲಿಯ ಮಿಶನರಿ
ಸಂಘಗಳ ಪ್ರಚಾರಕಾರ್ಯದ ಬಗ್ಗೆ ಪ್ರಶ್ನೆ ಕೇಳಿದ. ಎಲ್ಲವನ್ನೂ ವಿವರಿಸಿ
ಹೇಳಿದಾಗ: 'ಹೀಗೇನು? ಅವರು ಪವಿತ್ರ ಕಾರ್ಯವೊಂದನ್ನು
ನಡೆಯಿಸಿರುವರೆಂದು ತಿಳಿದಿದ್ದೆ. ಎಲ್ಲ ಧರ್ಮಗಳ ಸಮಾನತೆಯನ್ನು
ಕುರಿತು ನೀವು ಒಂದು ಪುಸ್ತಕವನ್ನು ಬರೆಯಿರಿ.' ಎಂದು ಹೇಳಿದ.
'ಅನೇಕ ಪುಸ್ತಕಗಳಿವೆ. ಅವುಗಳಿಂದ ಏನೂ ಪ್ರಯೋಜನವಾಗಿಲ್ಲ.
ನನ್ನ ಮಾತಿನಿಂದ ನಿಮ್ಮಲ್ಲಿ ತಿಳಿವು ಬಂದರೆ ಸಾಕೆಂದು' ನಾನು ಹೇಳಿದೆ.

† † † †

ಇನ್ನೊಬ್ಬ ಆಂಗ್ಲ ಸ್ನೇಹಿತನು ಆಯ್. ಸಿ. ಎಸ್. ಪಾಸಾಗಿ
ಭಾರತಕ್ಕೆ ಹೋಗುವವನಿದ್ದಾನೆ. ಅವನೊಡನೆ ಒಂದು ರಿಸ್ಟಾರಾಂಡಲ್ಲಿ
ಊಟಮಾಡುತ್ತ ಕುಳಿತಿದ್ದೆ. ಅಲ್ಲಿ ಮೂವರು ಆಂಗ್ಲ ತರುಣಿಯರು
ವಿಶೇಷವಾಗಿ ಮದಿರೆಯನ್ನು ಸೇವಿಸಿ ಉನ್ಮತ್ತರಾಗಿ ನಕ್ಕು ಮಾತನಾಡು
ತ್ತಿದ್ದರು. ಅವರ ಹತ್ತಿರ ಐದಾರು ತರುಣರು ಕುಳಿತಿದ್ದರು. ಅವರನ್ನು
ನೋಡಿ ಒಬ್ಬಳು ಗಟ್ಟಿಯಾಗಿ 'ಇವರು ಸುಂದರರಿಲ್ಲವೆ? (Aren't they

charming?)' ಎಂದು ನುಡಿದಳು. ಸರಿ. ಎದ್ದು ಹೋಗುವಾಗ ತರುಣರಲ್ಲಿ ಮೂವರು ಹಿಂದುಳಿದು ಆ ಮೋಹಿನಿಯರನ್ನು ಮಾತ ನಾಡಿಸಿದರು !

* * * *

'ಶಾ'ನ 'ಕ್ಯಾಂಡಿಡಾ' ಎಂಬ ನಾಟಕವನ್ನು ನೋಡಿದೆ. ಅಭಿನಯದ ಕೌಶಲ್ಯದಿಂದ ಎಂಥ 'ಧಡಂ-ಧುಡಂ' ನಾಟಕವನ್ನಾದರೂ ಇದು ಸೋಲಿಸುತ್ತದೆ. ಓದುವಾಗ ಇದರಲ್ಲಿ ಇಷ್ಟೊಂದು ಆಕರ್ಷಣಶಕ್ತಿಯು ಇದ್ದೀತೆಂಬುದು ಕಲ್ಪನೆಗೆ ಬರಲಾರದು. 'Insect Play' (ಹುಳುಗಳ ಆಟ) ಎಂಬುದು 'ಕೋಪೆಕ್' ಎಂಬ ಹೆಸರಿನ ಇಬ್ಬರು ಜರ್ಮನ್ ಅಣ್ಣತಮ್ಮಂದಿರು ಬರೆದ ನಾಟಕ. ಇದರಲ್ಲಿಯ ಒಬ್ಬ ನಟನು ಆವೇಶ ಯುಕ್ತನಾಗಿ ಬಂದು ಪ್ರೇಕ್ಷಗೃಹದಲ್ಲಿ ಸಹ ತಿರುಗಾಡುತ್ತಾನೆ. ಮೇಳದ (Chorus) ಕರ್ತವ್ಯವನ್ನು ಇವನಿಗೆ ಕೊಟ್ಟಿದೆ. ನಡೆದ ಸನ್ನಿವೇಶಗಳ ವ್ಯಂಗ್ಯಾರ್ಥವನ್ನೆಲ್ಲ ಇವನು ಸ್ಫುಟವಾಗಿಸುತ್ತಾನೆ. ಮುಂದಿನ ಸನ್ನಿವೇಶ ಗಳ ಸೂಚನೆಯು ಮೊದಲಿನ ದೃಶ್ಯಗಳಲ್ಲಿಯೇ ಬಂದಿರುವದರಿಂದ,- ಒಂದಕ್ಕೊಂದು ವಿಶೇಷ ಸಂಬಂಧವಿರದಿದ್ದರೂ ಏಕಪ್ರವಾಹವಾಗಿ ರಸವು ಹರಿಯುತ್ತದೆ. ಕೊನೆಯ ದೃಶ್ಯದಲ್ಲಿ ಜನಿಸುವ 'ಆಶಾದೇವಿ'ಯು ಮೊದಲಿ ನಿಂದ ತತ್ತಿಯೊಳಗಿಂದ ರಂಗಭೂಮಿಯ ಮೇಲೆ 'ನಾನು ಹುಟ್ಟುತ್ತೇನೆ' ಎಂದು ಕೂಗಿಕೊಳ್ಳುತ್ತಿರುತ್ತಾಳೆ. ಹಿರಿನೊಣಗಳ ಪ್ರವೇಶವು ನಡೆದಾಗ ಒಂದು ಸಣ್ಣ ಗುಡಿಸಲದ ಮುಂದೆ 'Mr. Cricket' ಎಂಬ ಬೋರ್ಡು ಕಾಣುತ್ತದೆ. ಆಮೇಲೆ 'ಕ್ರಿಕೆಟ್' ರಾಯನು ಪತ್ನಿಯೊಡನೆ ಬರುತ್ತಾನೆ. ಅಂತೂ ಇದೊಂದು ತೀರ ಹೊಸತಾದ ಪ್ರಕಾರ.

* * * *

ಆಕ್ಸಫರ್ಡಿನ 'ಸೆಂಟ್ ಮೇರಿ' ಚರ್ಚಿನಲ್ಲಿ 'The nativity play' (ಕ್ರಿಸ್ತಜನ್ಮ) ಎಂಬ ನಾಟಕವನ್ನಾಡಿದರು. ಚರ್ಚಿನಲ್ಲಿಯೇ ಪಡದೆ ಹಾಗು ರಂಗಭೂಮಿಯ ವ್ಯವಸ್ಥೆಯಾಗಿತ್ತು. ಪ್ರಾರ್ಥನೆಯ ಹೊತ್ತಿನಲ್ಲಿ ಜನರು ಕೂಡುವ ಜಾಗಗಳನ್ನೇ ಪ್ರೇಕ್ಷಕರಿಗಾಗಿ ಕಾದಿಟ್ಟಿದ್ದರು. ಆದರೆ

ಇಲ್ಲಿ ಬಂದವರನ್ನು 'Audience' ಎಂದಲ್ಲ; 'Congregation' ಎಂದು ಕರೆಯುತ್ತಿದ್ದರು. ಮಧ್ಯಯುಗದಲ್ಲಿ ಕ್ರಿಸ್ತ ಧರ್ಮದ ವಿಷಯಗಳನ್ನು ಕುರಿತು ಇಲ್ಲಿ ಭಾಗವತರಾಟಗಳನ್ನು ಆಡುವ ಸಂಪ್ರದಾಯವಿದ್ದಿತು. ಇವನ್ನು 'Mysteries', 'Moralities' ಎಂದು ಕರೆಯುತ್ತಿದ್ದರು. ಈ ಕೃತಿಗಳಿಂದಲೇ ನಾಟಕಪ್ರಪಂಚವು ಬೆಳೆದು ಚರ್ಚಿನಿಂದ ರಂಗಭೂಮಿಯು ಕಾಲಾಂತರದಲ್ಲಿ ಬೇರೆಯಾಯಿತು. ಈಗ ಜನರಲ್ಲಿದ್ದ ವಿಶ್ವಾಸವು ಹಾರಿದೆ; ಭಕ್ತಿಯು ಮಾಯವಾಗಿದೆ. ಕಾರಣ ಪುನಃ ಭಕ್ತಿಯನ್ನು ಹುಟ್ಟಿಸಲು ಚರ್ಚಿನಲ್ಲಿ ಇಂಥ ಧಾರ್ಮಿಕಪ್ರಯೋಗ ಗಳನ್ನು ತೋರಿಸಲು ಸುರುವುಮಾಡಿದ್ದಾರೆ. ಇದಕ್ಕೆ 'Revival' ಎಂದು ಹೇಳಬಹುದು.

ಇದನ್ನು ಬರೆದ ಪಾದ್ರಿಯು ಮೊದಲು ಕೃತಿಯ ಪರಿಚಯವನ್ನು ಮಾಡಿಕೊಟ್ಟ. ಇದಕ್ಕೆ ತಿಕೀಟು ಇಟ್ಟಿರಲಿಲ್ಲ. ಆದರೆ ನಾಟಕವು ಮುಗಿದ ಮೇಲೆ ಹೊರಗೆ ಹೋಗುವಾಗ ಹಾದಿಯಲ್ಲಿ ಎರಡು ದೊಡ್ಡ 'Drain-pipes' ಇಟ್ಟಿದ್ದರು! ಮನಸ್ಸಿಗೆ ಬಂದವರು ದುಡ್ಡನ್ನು ಇದರಲ್ಲಿ ಹಾಕಬಹುದು. ಕೂಡಿದ ದುಡ್ಡನ್ನು 'Community centre' ಎಂಬ ಹೊಸ ಸಂಸ್ಥೆಗೆ ಕೊಡಬೇಕೆಂದು ಗೊತ್ತಾಗಿತ್ತು. ದಿಕ್ಕುದಿಕ್ಕಿಗಿದ್ದ ಹೊಸ ಹಳ್ಳಿಗಳನ್ನು ಸಾಂಸ್ಕೃತಿಕವಾಗಿ ಒಂದುಗೂಡಿಸುವದೇ ಈ ಸಂಸ್ಥೆಯ ಧ್ಯೇಯ.

ಕೆಲವರು ನಾಟಕವನ್ನು ನೋಡಲು ಕೂಡುವಂತೆ ಟೊಪ್ಪಿಗೆಗಳನ್ನು ತಲೆಯ ಮೇಲಿರಿಸಿಕೊಂಡು ಕೂತಿದ್ದರು. ಪಾದ್ರಿಯು ಹೇಳಿದ: 'Those of you wearing hats will please remove them. You will be conferring a benefit upon your neigbours–and the blessed apostle will not disapprove of it!' ('ಹ್ಯಾಟ್' ಹಾಕಿಕೊಂಡವರೆಲ್ಲರೂ ದಯವಿಟ್ಟು ತೆಗೆಯಬೇಕು. ಅಂದರೆ ಹತ್ತಿರ ಕುಳಿತವರ ಮೇಲೆ ಉಪಕಾರ ಮಾಡಿದಂತಾಗುವದು. 'ಎಪೊಸಲ್'ರು ಇದಕ್ಕೆ ನಿಮ್ಮನ್ನು ಅಲ್ಲಗಳೆಯಲಾರರು.) ಕೂಡಲೆ ಅನೇಕರು

ಕೆಲವು ಮುದುಕಿಯರು ಸಹ–ಟೊಪ್ಪಿಗೆಗಳನ್ನು ತೆಗೆದಿಟ್ಟರು. ಪ್ರಯೋಗವು ಬಹಳ ಚೆನ್ನಾಗಿತ್ತು. 'Expositor, Herod, the three kings, the three shepherds, Joseph. Mary,– ಹೀಗೆ ಕೆಲವೊಂದು ಮಾತ್ರ ಪಾತ್ರಗಳಿದ್ದವು. ಹೆರಾಡನಲ್ಲಿ ಹಿಟ್ಲರ್ ಹಾಗು ಮುಸೊಲೀನಿಯ ಝುಳುಕು ಕಂಡುಬಂದಿತು. ಶಾಂತಿಯಿರಲಿ; ಕ್ರಿಸ್ತನು ಬೆಥಲೆಹೆಮದಲ್ಲಿ ಯಷ್ಟೇ ಹುಟ್ಟಲಿಲ್ಲ,–ಪ್ರತಿಯೊಂದು ಹೃದಯದಲ್ಲಿ ಹುಟ್ಟುತ್ತಾನೆ,- ಎಂಬುದೇ ಸಂದೇಶವಾಗಿತ್ತು. 'Revival' ಚಳವಳಿಯ ಹೊಸ ಸ್ವರೂಪವಿದು.

ವೇಷ-ಭೂಷಣಗಳಲ್ಲಿ ಐತಿಹಾಸಿಕ ಮಾದರಿಯನ್ನು ಕಾಯ್ದಿದ್ದರು. ಪೂರ್ವದೇಶದಿಂದ ಬಂದ ಮೂವರು ಅರಸರು ಮೈ–ಕೈಗಳನ್ನು ಬಿಗಿದು ಕೊಂಡು ನಡೆಯುತ್ತಿದ್ದರು. ಮೂವರು ಕುರುಬರಲ್ಲಿ ಒಬ್ಬ ಕುರುಬನ ವೇಷವು ತದ್ರೂಪವಾಗಿ ಒಬ್ಬ ಕನ್ನಡಿಗ–ಕುರುಬನ ಹಾಗೆ ಇದ್ದಿತು. ಅವನ ಹಾವ–ಭಾವಗಳೂ ಅದೇ ರೀತಿಯವು. ಮೂವರು ಇಂಗ್ಲಿಷಿನ ಗ್ರಾಮ್ಯ ಭಾಷೆಯಲ್ಲಿ ಮಾತನಾಡುತ್ತಿದ್ದರು. ಅಲ್ಲದೆ 'Light effects' ಮುಂತಾದ ವ್ಯವಸ್ಥೆಯೂ ಚೆನ್ನಾಗಿತ್ತು. ನಮ್ಮಲ್ಲಿಯ ಬಯಲಾಟಗಳು ಬಯಲಾಗುತ್ತಿವೆ. ಗುಡಿ–ಗುಂಡಾರಗಳು ಹಾಳುಬೀಳುತ್ತಿವೆ. ಇದೇ ಮಾದರಿಯಲ್ಲಿ ನಮ್ಮಲ್ಲಿಯೂ ಜೀರ್ಣೋದ್ಧಾರವಾಗಬಹುದಲ್ಲವೆ?

* * * *

'Noel Coward' ಎಂಬ ನಾಟಕಕಾರನ 'Private Lives' (ಕೌಟುಂಬಿಕ ಜೀವನ) ಎಂಬ ಸುಕುಮಾರ ಪ್ರಯೋಗವನ್ನು ನೋಡಲು ಹೋಗಿದ್ದೆ. ಇಲ್ಲಿ ಘಟಸ್ಫೋಟದ ಸಮಸ್ಯೆಯನ್ನು ಬಹಳ ಚಾತುರ್ಯ ದಿಂದ ತೋರಿಸಿದ್ದಾನೆ. ಪಾತ್ರಗಳು ಬಹಳವಾಗಿಲ್ಲ,–ಬಿಡುಗಡೆ ಹೊಂದಿದ ಗಂಡ, ಅವನ ಹೆಂಡತಿ, ಇವರಿಬ್ಬರೂ ಪುನಃ ಪಡೆದುಕೊಂಡ ಪತಿ- ಪತ್ನಿಯರು ಹಾಗು ಒಬ್ಬ ಫ್ರೆಂಚ್ ಕೆಲಸಗಿತ್ತಿ. ಸಾಮ್ಯ–ವೈಷಮ್ಯಗಳ ಹೆಣಿಕೆಯು ಪ್ರಸಂಗಗಳಲ್ಲಿಯೂ ಪಾತ್ರಗಳಲ್ಲಿಯೂ ಚೆನ್ನಾಗಿ ಬಂದಿದೆ. ಫ್ರೆಂಚ್ ಕೆಲಸಗಿತ್ತಿಯ ಭಾಷೆಯನ್ನು ಅಲ್ಲಲ್ಲಿ ಟೀಕಿಸಿದೆ. ರಸವೆಲ್ಲ

ಸಂಭಾಷಣೆಯಲ್ಲಿದೆ,—ಅಭಿನಯದಲ್ಲಿದೆ. ವೇಷ-ಭೂಷಣಗಳು ತೀರ ಸಾಮಾನ್ಯವಾದುವು. ವಿಶೇಷವಾಗಿ ರಂಗಭೂಮಿಯ ಆಡಂಬರವು ಬೇಕಿಲ್ಲ. ಕೈಲಾಸಂರವರು ಉಪಯೋಗಿಸುವಂಥ ಒಂದು ರಟ್ಟಿನ ಮನೆಯಾದರೆ ಸಾಕು. ಮಾತಿನಲ್ಲಿ ವಿನೋದವು ತುಂಬಿತುಳುಕುತ್ತದೆ; ಬಿಡುಗಡೆ ಹೊಂದಿದ ಗಂಡನು ಕಾವ್ಯಮಯವಾಗಿ ಮಾತನಾಡಲು ಹವಣಿಸಿ ಅನೇಕ ತಪ್ಪುಗಳನ್ನು ಮಾಡುತ್ತಾನೆ: 'A flock of bisons' ಮುಂತಾಗಿ. ಸನ್ನಿವೇಶಗಳ ಮೇಲಿಂದ ತೋರಿಬರುವದಿಷ್ಟು: ಬಿಡುಗಡೆ ಹೊಂದಿದ ಗಂಡ-ಹೆಂಡಂದಿರು ಮತ್ತೆ ಭೆಟ್ಟಿಯಾಗಲು ಪುನಃ ಒಬ್ಬರ ನ್ನೊಬ್ಬರು ಪ್ರೀತಿಸುತ್ತಾರೆ; ಪುನಃ ಜಗಳಾಡುತ್ತಾರೆ. ಹೊಸಬರೊಡನೆ ಕೂಡಿದಾಗ,-ಅವರೊಡನೆಯೂ ಹೀಗೆಯೇ. ಕಾರಣ, ಲಗ್ನದ ಸಮಸ್ಯೆಗೆ ಬಿಡುಗಡೆಯು ಉಪಾಯವಲ್ಲ. ಇದರಂತೆ ಮಾಡಿದರೆ ದಿನಕ್ಕೊಂದು ಬಿಡುಗಡೆಯು ಬೇಕಾದೀತು. ಒಂದೇ ಒಂದು ಉಪಾಯವಿದೆ: ಒಬ್ಬರ ನ್ನೊಬ್ಬರು ಹೆಚ್ಚು ಚೆನ್ನಾಗಿ ತಿಳಿಯಬೇಕು. ಈ ತಿಳುವಳಿಕೆಯೇ ನಿರಂತರ ಪ್ರೀತಿಯ ಅಡಿಗಲ್ಲು. ಇದನ್ನೆಲ್ಲ ಬಿಚ್ಚಿ ಹೇಳಿಲ್ಲ. ವ್ಯಂಗ್ಯ ಚಿತ್ರದ ಮರೆಯೊಳಗಿಂದ ಇಂಥದೊಂದು ಸಂದೇಶವು ಬರುತ್ತದೆ. ಕೈಲಾಸಂರವರ 'ಹೋಂ ರೂಲು' 'ಟೊಳ್ಳುಗಟ್ಟಿ' ಮೊದಲಾದ ನಾಟಕ ಗಳು ಇದೇ ಮಾದರಿಯವು,- ಇದಕ್ಕಿಂತ ಒಂದು ತೂಕ ಹೆಚ್ಚು ಯೋಗ್ಯತೆಯುಳ್ಳವೆಂದು ಹೇಳಬಹುದು.



## ೭೫

೧೮-೬-೩೭

ಇಂದು ಮತ್ತೆ 'ರಾಜಪುತಾನಾ' ಹಡಗವನ್ನೇರಿ ಪಯಣ ಬೆಳೆಸಿದೆ. ದೈವಗತಿಯು ವಿಚಿತ್ರವಾದುದು. ಇಷ್ಟು ತೀವ್ರವಾಗಿ ಸ್ವದೇಶಕ್ಕೆ ಸೂಟಿಗಾದರೂ ಸಹ–ಮರಳಬೇಕೆಂಬ ಕಲ್ಪನೆಯು ಮೊದಲಿಗೆ ನನ್ನಲ್ಲಿ ಇದ್ದಿರಲಿಲ್ಲ. ಅನೇಕ ಕಾರಣಗಳ ಸಲುವಾಗಿ ಹೀಗೆ ಮಾಡಬೇಕಾಯಿತು. ಸಂಜೆಗೆ ನಾನು ಬರುವಾಗ ಕ್ರಿಸ್ತೀಯ ಪ್ರಾರ್ಥನಾಮಂದಿರಗಳಲ್ಲಿ ಆಕ್ಸಫರ್ಡಿನ ಗಂಟೆಗಳು ಬಾರಿಸುತ್ತಿದ್ದವು. 'ಡೌನ್! ಡೌನ್!' (ಹೋಗಿರಿ! ಹೋಗಿರಿ!) ಎಂದು ಸಪ್ಪಳವಾದಂತೆ ನನಗೆ ಭಾಸವಾಯಿತು. ಮೂರು ತಿಂಗಳಲ್ಲಿ ಆಕ್ಸಫರ್ಡನ್ನು ಕಾಣುವದೇನೋ ನಿಜ. ಆದರೂ ನನ್ನ ಸ್ನೇಹಿತರನ್ನು ಬೀಳ್ಕೊಳ್ಳುವಾಗ ವಿಷಾದವಾಯಿತು. ಶರ್ವುಡ್ ಹಾಗು ಅವನ ವಧುವಾದ ಸೋಫಿಯಾ (ಈಗ ಈಕೆ ಇಂಗ್ಲಂಡಿಗೆ ಬಂದು ಸುಮಾರು ಎರಡುತಿಂಗಳಾಗಿರಬೇಕು. ಶರ್ವುಡ್ಡನಿಗೆ ತಕ್ಕ ವಧುವಾಗಿದ್ದಾಳೆ) ಇವರು ನನ್ನನ್ನು ಊಟಕ್ಕೆ ಕರೆದಿದ್ದರು. ಹೊರಡುವ ವೇಳೆಯಲ್ಲಿ ಭೆಟ್ಟಿಯಾಗುವದಾಗಲಿಲ್ಲ. ಶುಭೇಚ್ಛೆಯ ತಾರೊಂದನ್ನು ಹಡಗದ ಮೇಲೆ ಮುಟ್ಟುವಂತೆ ಅವರು ನನಗೆ ಕಳಿಸಿದರು. ಶ್ರೀಮತಿ ಟರ್ನರಳು ಮೊದಲಿನಿಂದ ನಾನು ಸೂಟಿಯಲ್ಲಿ ಸ್ವದೇಶಕ್ಕೆ ಹೋಗಬೇಕೆಂದು ಅಭಿಪ್ರಾಯ ಪಡುತ್ತಿದ್ದಳು. ನಾನು ಸೂಟಿಗಾಗಿ ಹೋಗುವದೆಂದರೆ ಅವಳಿಗೊಂದು ಸಂಭ್ರಮದ ವಿಷಯ. ಹುಡುಗರಿಗಾಗಿ ಗೊಂಬೆ–ತಿನಿಸು ಮುಂತಾದವುಗಳನ್ನು ತಂದುಕೊಟ್ಟಳು. 'ನಿನ್ನಂಥ ತಾಯ್ಗರುಳಿನ ಹೆಣ್ಣುಮಕ್ಕಳು ಈ ದೇಶದಲ್ಲಿ ದುರ್ಲಭ' ಎಂದು ನಾನು ಹೇಳಿದಾಗ "ಇರಬಹುದು. ಆದರೆ ಇಲ್ಲಿಯ ಸಮಾಜದಲ್ಲಿ ನನ್ನದೇನು ಸ್ಥಾನ? ಒಬ್ಬ ಉಡಾಳನ (mucker-about) ಹೆಂಡತಿ,

ಹೊಟ್ಟೆಗಾಗಿ ತನ್ನ ಮನೆಯನ್ನು ಛತ್ರವನ್ನಾಗಿ ಮಾಡಿದ್ದಾಳೆ. ಎಂದು ಜನರು ಆಡಿಕೊಳ್ಳುತ್ತಾರೆ. ನಿಮ್ಮ ದೇಶದಲ್ಲಿಯೂ ಹೀಗೆ ಮಾತನಾಡುವ ಜನರುಂಟೆ? ನೆರೆಹೊರೆಯ ಮನೆಯಾಕೆ ಇದೇ ರೀತಿ ಯಾಗಿ ಉಪಜೀವಿಸುತ್ತಿದ್ದಳು. ಮುಂದೆ ಆಕೆಯ ಗಂಡನಿಗೆ ಮಾರಿಸ್ ಮೋಟರ್ ವರ್ಕ್ಸದಲ್ಲಿ ದೊಡ್ಡ ಪಗಾರದ ಕೆಲಸ (ತಿಂಗಳಿಗೆ ೨೦ ಪೌಂಡ) ದೊರಕಿತು. ಈಗ ಮೂಗು ತಿರುವಿ ತಿರುಗಾಡುತ್ತಾಳೆ. ಅವಳಿಗೊಮ್ಮೆ ನಾನು ಹೇಳಿದೆ: 'ನೀವಿಬ್ಬರೂ ಮೂರ್ಖರು. ನನ್ನ ಮನೆಯಲ್ಲಿದ್ದ ವಿದ್ಯಾರ್ಥಿಗಳೊಡನೆ ಮಾತನಾಡಿ ನಾನು ನಾಲ್ಕು ವಿಷಯಗಳನ್ನಾದರೂ ತಿಳಿದುಕೊಳ್ಳುತ್ತೇನೆ. ನಿನಗೆ ಅದೂ ಸಹ ದುರ್ಲಭ ಎಂದು.' ಎಂದು ತನ್ನ ರೀತಿಯಲ್ಲಿ ಶ್ರೀಮತಿ ಟರ್ನರಳು ಮಾತು ಬೆಳೆಸಿದಳು. ಯಥಾ ಪ್ರಕಾರ ಬಾಯಲ್ಲಿ ಪೈಪ್ ಹಿಡಿದು ಹೊಗೆ ಬಿಡುತ್ತ ಮೌನವನ್ನು ಹಿಡಿದ ಟರ್ನರ್ ಸಾಹೇಬನು ಒಂದು ನಗೆ ನಕ್ಕು ಬೀಳ್ಕೊಟ್ಟನು.

ಈ ಮಧ್ಯೆ ಆಕ್ಸಫರ್ಡಿನಲ್ಲಿ ವಿಶೇಷವೇನೂ ಜರುಗಲಿಲ್ಲ. 'ಆಂಗ್ಲ ಭಾಷೆಯಲ್ಲಿ ಬರೆಯುವಾಗ ಇಲ್ಲಿಯ ದೇಶೀಯರಿಗೆ (Natives) ಒಪ್ಪು ವಂತೆ ಬರೆಯಬೇಕು. ಅಮೇರಿಕನ್ನರ ಭಾಷೆಯಲ್ಲಿ ಮಾರ್ದವವಿಲ್ಲ,– ಬಹಳ ಅಶುದ್ಧವಾಗಿರುತ್ತದೆ. ಭಾರತೀಯರ ಆಂಗ್ಲ ಶೈಲಿಯಲ್ಲಿ ಗಂಡು ದನಿ ಕಡಿಮೆ,–ತೀರ ಶುದ್ಧವಾಗಿರುತ್ತದೆ. 'ನೀವು ಸಂಸ್ಕೃತದಲ್ಲಿ ಕವಿತೆ ಬರೆಯುತ್ತೀರೇನು?' ಎಂದು ಪ್ರೋ. ರೆನ್ನರು ನನ್ನನ್ನು ವಿನೋದದಿಂದ ಕೇಳಿದರು. ಕನ್ನಡದಲ್ಲಿ ಬರೆಯುತ್ತಿರುವೆನೆಂದು ನಾನವರಿಗೆ ಉತ್ತರ ಕೊಟ್ಟೆ. 'ಸರಿ. ಎಲ್ಲವೂ ಒಂದೇ ಸಂಪ್ರದಾಯ. ಕೆಲವು ದಿವಸ ನೀವು ಅಲಂಕಾರಗಳಿಲ್ಲದ ಭಾಷೆಯಲ್ಲಿ ಬರೆಯಿರಿ. ಆ ಮೇಲೆ ಅಲಂಕಾರಗಳ ಮೇಲೆ ಪ್ರಭುತ್ವವು ಬರುವದು' ಎಂದು ರೆನ್ನರು ಹೇಳಿದರು.

* * * *

ಒಂದು ದಿವಸ ವಿಶ್ವವಿದ್ಯಾಲಯದ ನಾಟ್ಯ ಸಂಘದವರು, '**Twelfth Night**' (ದ್ವಾದಶ ರಾತ್ರ) ಎಂಬ ಶೇಕ್ಸಪಿಯರನ ನಾಟಕವನ್ನು ಹಗಲು ಎಕ್ಸಿಟರ್ ಕಾಲೇಜಿನ ಉದ್ಯಾನದಲ್ಲಿ ಪ್ರಯೋಗಿಸಿ ತೋರಿಸಿದರು.

* * * *

ಚಾಸರ್, ಥಾಮಸ್ ಬ್ರೌನ, ಟೆಂಪಲ್, ಬಾಸ್ವೆಲ್ ಮೊದಲಾದವರ ಗ್ರಂಥಗಳನ್ನು ಈ ವರ್ಷ ನಿಕಟವಾಗಿ ಅಭ್ಯಾಸ ಮಾಡಿದೆ. ಮತ್ತೆ ಮತ್ತೆ ಒಂದೇ ಮಾತು ಹೊಳೆಯುವದು. ಪಾಶ್ಚಾತ್ಯ ಸಂಸ್ಕೃತಿಯು ಅಡಿಗಲ್ಲೆಂದರೆ ಗ್ರೀಸ ದೇಶದ ನಾಗರಿಕತೆ. ಗ್ರೀಕರ ನಾಗರಿಕತೆಯು ಇಥಿಯೋಪಿಯಾ ಹಾಗು ಇಜಿಪ್ತ ದೇಶಗಳ ಮಾರ್ಗವಾಗಿ ಹಿಂದುಸ್ಥಾನದಿಂದ ಬಂದಿತು. ಟೆಂಪಲ್ ಎಂಬ ಲೇಖಕನು ಸುಮಾರು ಎರಡುವರಿ ನೂರು ವರ್ಷಗಳ ಹಿಂದೆ ಈ ಮಾತನ್ನು ತನ್ನ ನಿಬಂಧದಲ್ಲಿ ಬರೆದಿದ್ದಾನೆ. ಸಾಹಸಿಗನಾದ ಭಾರತೀಯ ವಿದ್ಯಾರ್ಥಿಯೊಬ್ಬನು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿತು ಮೂರು-ನಾಲ್ಕು ವರ್ಷ ಆಕ್ಸಫರ್ಡಿನಲ್ಲಿ ನಿಂತು ಈ ವಿಷಯವನ್ನು ಕುರಿತು ಉದ್ಗ್ರಂಥವೊಂದನ್ನು ಬರೆಯಬೇಕು. ಹೀಗೆ ನಿಲ್ಲುವದು ನನಗೆ ಸಾಧ್ಯವಾಗದ ಮಾತು.

* * * *

೧೯-೬-೩೭

ಲಂಡನ್ನಿನ ಬಂದರಗಳಲ್ಲಿ 'ಪಿ. ಎಂಡ್ ಓ.' ಹಡಗಗಳು ಬಂದು ನಿಲ್ಲುತ್ತಿವೆಯಷ್ಟೆ? ಹಡಗಗಳಲ್ಲಿಯ ಭಾರತೀಯ ನೌಕರರೆಲ್ಲ ಕುರಿಹಿಂಡಿದ್ದಂತೆ. ಬಂದರದಲ್ಲಿ ಇವರಿಗಾಗಿ ಒಂದು ಪಾಯಖಾನೆಯಿದೆ. ಅಲ್ಲಿ 'for laskars only' (ಲಷ್ಕರರಿಗಷ್ಟೆ.) ಎಂದು ಒಂದು ದೊಡ್ಡ ಬೋರ್ಡಿದೆ. ಅಲ್ಲಿ ಮತ್ತಾರು ಹೋಗಬಹುದೆಂದು ತಿಳಿದು ಬಂದರದಲ್ಲಿ ಈ ಬೋರ್ಡು ಬರೆದು ಹಚ್ಚಿದರು! ಒಂದು ನಾಯಿ ಸಹ ಅಲ್ಲಿ ಸುಳಿಯುವಹಾಗಿಲ್ಲ. ಆಂಗ್ಲರ ಪ್ರತಿಭೆಯು ಮೂಲವಿದು! ಅಪಮಾನಗೊಳಿಸುವದಿದ್ದರು ಸಹ ಹಾಗೆ ಮಾನಪೂರ್ವಕವಾಗಿ ಮಾಡಬೇಕು!

* * * *

ಹಡಗದ ಮೇಲೆ ಇನ್ನೊಂದು ಮೋಜಾಗುತ್ತದೆ. ಭಾರತೀಯ ಹಾಗು ಆಂಗ್ಲ ಪ್ರವಾಸಿಗಳಿದ್ದಂತೆ ಸೇವಕರೂ ಇರುವರಷ್ಟೆ. ಬಡಿಸುವವರು—'ವೇಟರ'—ವಿಶೇಷತಃ ಗೋವಾ ಪ್ರಾಂತದ ಕ್ರಿಸ್ತೀಯರು.

ಅವರಿಗೇನು? ಆಂಗ್ಲ ಶ್ರೀಮಂತರೂ ಭಾರತೀಯ ಶ್ರೀಮಂತರೂ ಒಂದೇ! ಮೇಲೆ ನಿಂತು ಮೆರೆದಾಡುವವರು. ಆಗ್ಲರಿಂದ ಭಾರತೀಯರ ಅಪಮಾನ ವಾಗುವದನ್ನು ನೋಡಿ ಒಮ್ಮೊಮ್ಮೆ ಅವರಿಗೆ ನಗೆ ಬರುತ್ತದೆ,– ಇಂಥ ಅಪಮಾನಗಳನ್ನು ತಾವೆಷ್ಟು ಸಹಿಸಿಲ್ಲವೆಂದು!

* * * *

ನನ್ನೊಡನೆ ಭಾರತೀಯ ವಿದ್ಯಾರ್ಥಿಯೊಬ್ಬನು ಮರಳುತ್ತಿದ್ದಾನೆ. ಆಂಗ್ಲ ನಾಗರಿಕತೆಯು ಹಿಂದುಸ್ಥಾನದಲ್ಲೆಲ್ಲ ಹಬ್ಬಬೇಕೆಂದು ಅವನ ಮತವಾಗಿದೆ. ಕಾಮಸ್ವಾತಂತ್ರ್ಯವಿದ್ದರೆ ಉದ್ಯೋಗಪ್ರಿಯತೆಯು ಬೆಳೆಯುತ್ತದೆ, ದೇಶದ ಸಂಪತ್ತು ಹೆಚ್ಚುವದೆಂದು. ಹಳೆಯ ವೇದಾಂತ ಗಳ ರೀತಿಯು ಸರಿಯಲ್ಲವೆಂದು ನಾನು ಒಪ್ಪಿದೆ. ಆದರೆ ಈ ಹೊಸ ವೇದಾಂತಿಗಳ ಚಾರ್ವಾಕ ವಾದವನ್ನು ಹೊಡೆದು ಹಾಕುವ ಬಗೆ ಹೇಗೆ?

---

## ಪ್ರಾರ್ಥನೆ: ದೇವರ ಅಭಯವಚನ*

ಮಗುವೆ! ನಿನ್ನ ದುಃಖಮಯ ದುರ್ದಿನಗಳಲ್ಲಿ ಸುಖವನ್ನು ತರುವ ಚಿಂತಾಮಣಿ ನಾನು! ಬೀಸಿ ಹೋಗುವ ಬಿರುಗಾಳಿಗೆ ಎದೆಗೊಟ್ಟು ನಿಲ್ಲು! ನನ್ನ ಕರುಣೆಯ ಬೆಳಕಿನಲ್ಲಿ ಶಕ್ತಿಯನ್ನು ಸಂಪಾದಿಸು! ನಿನ್ನ ವಿಶ್ವಾಸವೆಲ್ಲ ಹಾರಿ ಹೋಗದಿರಲಿ. ಪರ್ವತದಂತೆ ಅಚಲನಾಗಿ ನಿಲ್ಲು! ವೇಳೆ ಬಂದಾಗ ಸಮಾಧಾನವು ತಾನಾಗಿಯೇ ಬಂದೀತು. ನನ್ನ ದಾರಿ ಕಾಯುತ್ತ ನಿಂತಿರು ನೀನು; ನಾನು ಬಂದು ನಿನ್ನ ಮೈಯ್ಯಲ್ಲಿ ನಟ್ಟ ಮುಳ್ಳುಗಳನ್ನು ಕಿತ್ತೊಗೆಯುವೆನು! ಬೆದರಿದಿರು, ಮಗುವೆ!

ಮಗುವೆ! ಸುಳ್ಳು ಬೆದರಿಕೆಗೆ ಸೊಪ್ಪು ಹಾಕಬೇಡ! ಸಲ್ಲದ ಭೀತಿಗೆ ಕಿವಿಗೊಡಬೇಡ! ದುಃಖಿತನಾದಾಗ,–ದುಃಖದ ಮೇಲೆ ದುಃಖವನ್ನು ಕಲ್ಪಿಸಿಕೊಂಡು ಕಷ್ಟಪಡಬೇಕೆ? ಇರುವ ಹೊರೆಯಷ್ಟು ಸಾಕು; ಹೆಚ್ಚಿನದನ್ನು ಪಡೆಯುವ ಬಗೆಯೇಕೆ? ಬೆದರಿದಿರು, ಮಗುವೆ!

ನನ್ನಲ್ಲಿ ನಂಬು. ನನ್ನ ಅಪಾರಕರುಣೆಯಲ್ಲಿ ವಿಶ್ವಾಸವಿಡು. ನಿನ್ನಿಂದ ನಾನು ಕೋಟಿ ಯೋಜನಗಳಷ್ಟು ದೂರಾಗಿರುವೆನೆಂದು ತಿಳಿದಾಗ,–ನಿನ್ನ ಮಗ್ಗುಲಲ್ಲಿಯೇ ಕುಳಿತಿರುವೆನು ನಾನು! ನಿನ್ನ ಕಷ್ಟಗಳು ಮಿತಿಮೀರಿದ ವೆಂದು ನಿನಗೆನಿಸಿದಾಗ,–ಅವು ಮುಗಿಯುವ ಕಾಲ ಬಂದಿದೆಯೆಂದು ತಿಳಿ, ಮಗುವೆ!

ದುಃಖದ ಬಿಸಿಯನ್ನು ಕೊಟ್ಟಾಗ, ಸುಖದ ತಂಪು ತಿಳಿದೀತು ನಿನಗೆ! ದುಃಖದ ಅರಿವು ನಿನಗಿಲ್ಲದಿದ್ದರೆ,–ಕಾಮಪೂರ್ಣತೆಯೇ ಮುಕ್ತಿ ಯೆಂದು ತಿಳಿದೀ ನೀನು! ನಿನಗಿತ್ತ ಸಂಪತ್ತನ್ನು ತಿರುಗಿ ತೆಗೆದು ಕೊಂಡರೆ,–ನೀನೇಕೆ ದುಃಖಪಡಬೇಕು? ಮತ್ತೆ ಚಿತ್ತಕ್ಕೆ ಬಂದಾಗ

---

* 'Imitation of Christ' ದಲ್ಲಿಯ ಒಂದು ಪ್ರಾರ್ಥನೆಯ ರೂಪಾಂತರ.

ನಿನಗೀಯುಬಹುದಲ್ಲ ನಾನು! ನಿನಗಿತ್ತ ಸಂಪತ್ತೆಲ್ಲ ನನ್ನದು, ಸುಖವು ನನ್ನದು. ನಾನದನ್ನು ತಿರುಗಿ ತೆಗೆದುಕೊಂಡಾಗ ನೀನೇಕೆ ದುಃಖ ಪಡಬೇಕು!

ದುಃಖಕ್ಕೆ ನಿನ್ನನ್ನು ಗುರಿಯಾಗಿಸಿದಾಗ,–ನನ್ನನ್ನು ದೂಷಿಸದಿರು, ನನ್ನ ಮೇಲೆ ಸಿಟ್ಟಾಗದಿರು, ಮಗುವೆ! ನಿನ್ನ ಹೃದಯವು ಕಂಪಿಸದಿರಲಿ, ಎದೆಯು ನೀರಾಗದಿರಲಿ. ಲೋ! ಮಗು! ಹೊಗೆಯೆಲ್ಲ ಮತ್ತೆ ನಗೆಯಾಗುವದು; ದುಃಖವೆಲ್ಲ ಸುಖವಾಗುವದು,–ನನ್ನ ಕರುಣೆಯಿಂದ! ನಿನ್ನ ದೈವವೆಲ್ಲ ಫಲಿಸಬಹುದಾಗ!

---

## ಜೀವಹಂಸ

ಯಾವ ತಾಳಕ್ಕೆ ಕುಣಿಯುವದು ನನ್ನ ಜೀವ?
ಯಾವ ಬೆಳಸನು ಕಂಡು ಸಮುದ್ರದಾಚೆ ಹಾರಿತು ಜೀವಹಂಸ?
ಏನನ್ನೆಳಸಿತು! ಏನನ್ನು ಪಡೆಯಿತು!
ಈ ವಿಚಿತ್ರವ ತಿಳಿದು ಬಲ್ಲವರುಂಟೆ?

ಮಾನಸದ ತಿಳಿಗೊಳವ ಬಿಟ್ಟು ತಾಮಸದ ನದಿಗೆ ಹೋದ ಹಂಸವೆ
ನೀರು ಸಿಗಲಿಲ್ಲ ನಿನಗೆ; ನೀರಡಿಸಿ ತಿರುಗಿ ಬಂದೆ!
ಏಳು ಸಮುದ್ರಗಳ ದಾಟಿದರೂ ದೊರೆಯದಾಯಿತೆ ನೀರ ಕಾಳು?
ಹನಿಯೊಡೆಯಲಿಲ್ಲವೆ ಮುಗಿಲು? ಹೆಚ್ಚಾಯಿತೆ ದಾಹ?
ಏತಕ್ಕೆಂದು ಹೋದೆ? ಏನನ್ನು ನೆನೆಸಿ ನೊಂದೆ!
ಎಲೆಲೆ! ಜೀವಹಂಸ! ದೈವದ ಮುಂದೆ ಹಾರಿದರುಂಟೆ?

ನಿಬ್ಬಣದ ಮಬ್ಬಿನಲಿ ನೆಗೆದ ಹಂಸ,—ಇಬ್ಬಣದಿರುಕಿನಲಿ
ಗಾಸಿಗೊಂಡಿತ್ತು.
ಜ್ಯೋತಿಮಯನ ಕಾಣಲೊಪ್ಪಿ ಕದಲದ ಕತ್ತಲೆಯನಪ್ಪಿತು.
ಚಿಕ್ಕೆಯ ಸಹ ಕಾಣದೆ ಕಕ್ಕಾವಿಕ್ಕಿಯಾಗಿ
ಮಿಕ್ಕಲು ಶೂನ್ಯತೆಯು, ತಿಕ್ಕಲು ಯಾತನೆಯು,
ದಿಕ್ಕುದಿಕ್ಕಿನಲಿ ರೆಕ್ಕೆ ಬಡೆಯಿತಯ್ಯ! ರೆಕ್ಕೆ ಬಡೆದು ದಣಿಯಿತು.
ಬೆಳಕುಸೀಮೆಯ ಬಿಟ್ಟು ನಿಶೆಯ ರಾಜ್ಯವ ಹೊಕ್ಕವರುಂಟೆ?
ಹೊಕ್ಕು ಮತ್ತೆ ಬೆಳಕಿಗಾಗಿ ಬಾಯಿಬಿಟ್ಟವರುಂಟೆ?

ಎದೆಗುಂದದಿರೆಲೆ, ಅರಸಂಚೆ! ಜೀವದಾಸೆಯ ಬಿಡದಿರು!
ಹನಿಯೊಡೆಯದಿರೆ ಮುಗಿಲು,–ಎದೆಯೊಡೆದು ಸಹ ನೀರು
ಬರಬಹುದು.

ಸುತ್ತೆಲ್ಲ ಕತ್ತಲೆಯು ಮುತ್ತಿರಲೇನು?
ರೆಕ್ಕೆಗಳ ಚಲಿಸಿರಲು,–ಚಿಕ್ಕೆಗಳಂತೆ ಮಿನುಗುವವಲ್ಲ!
ಧೈರ್ಯವಿದ್ದಲ್ಲಿ ಧಾವಿಸುವದು ಐಶ್ವರ್ಯದ ನಿತ್ಯನಿಯಮ.
ದಿವ್ಯಪ್ರಭೆಯು ದೊರೆಯಲಿಲ್ಲವೆಂದು ಮರುಗದಿರೆಲೆ, ಅರಸಂಚೆ!
ಆ ಪ್ರಭೆಯು ನೀನೆ!
ನಿನ್ನ ಬೆಳಕನು ತಿಳಿಯಲು,–ನಿಶೆಯು ನಾಡಿಸಲಿ ಹಾರಿದೆ ನೀನು!
ಈ ತಿಳಿವಿನಿಂದ ಬಾಳು,–ತಿಳಿವಿನ್ನೊಂದು ಹೊಳೆವ ತನಕ!



# PEARLITE VANISHING CREAM



*The magic beauty of this Cream is its invisibility to the naked-eye and the Natural tone imparted — to the skin.*

Manufactured by the makers of the Famous Mysore Sandal Soap

## Govt. Soap Factory

BANGALORE

# ನಮ್ಮ ಸಹಾಯಕರು ಮತ್ತು ಪೋಷಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ಈ ವರ್ಷವೂ ನೆರವಿತ್ತು ಪ್ರೋತ್ಸಾಹಿಸಿದ ಮಹನೀಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ. ಇದರಂತೆ ಕನ್ನಡಿಗರೆಲ್ಲರೂ ಸಹಾಯಕರಾಗಿಯಾಗಲಿ, ಪೋಷಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

**ಪೋಷಕರು :—**

ಶ್ರೀ ಎಚ್. ಬಿ. ಕೊಣ್ಣೂರ ಎಂ. ಎ. ಬಿಜಾಪುರ — ೧೦ ೦ ೦

**ಸಹಾಯಕರು :—**

೧ ಶ್ರೀ ಜಿ. ವಿ. ಬೇವೂರು ಆಯ್. ಸಿ. ಎಸ್.
ಡಾಯರೆಕ್ಟರ ಜನರಲ್ ಆಫ್ ಪೋಸ್ಟ್ಸ, ದಿಲ್ಲಿ — ೫ ೦ ೦

೨ ಶ್ರೀ ವ್ಹಿ. ಎನ್. ಅಡವಿ, ಅಸಿಸ್ಟಂಟ ಅಕೌಂಟಂಟ್
ಜನರಲ್, ಮುಂಬಯಿ — ೫ ೦ ೦

೩ ಡಾ. ಎಸ್. ಸಿ. ನಂದೀಮಠ ಎಂ. ಎ. ಪಿ. ಎಚ್. ಡಿ.
ಬೆಳಗಾಂವಿ — ೫ ೦ ೦

೪ ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಬಿ. ಎಲ್., ಗವ್ಹರ್ನ
ಮೆಂಟ ಓರಿಯಂಟಲ್ ಟ್ರಾನ್ಸ್ಲೇಟರ ಬೆಂಗಳೂರು — ೫ ೦ ೦

೫ ,, ಆರ್. ಎ. ಜಾಗೀರದಾರ ಎಂ. ಎ. ಎಲ್‌ಎಲ್. ಬಿ.
ಮುಂಬೈ — ೫ ೦ ೦

೬ ,, ನಾರಾಯಣರಾವ ಜೋಶಿ ಬಿ. ಎ. ಎಲ್ಎಲ್. ಬಿ.
ಬೆಳಗಾಂವಿ — ೫ ೦ ೦

೭ ,, ಆರ್. ಜಿ. ದೇಶಪಾಂಡೆ ಎಂ. ಎ.
ಇನ್‌ಕಮ್ ಟ್ಯಾಕ್ಸ ಆಫೀಸರ, ಸಾತಾರಾ — ೫ ೦ ೦

೮ ,, ಎಂ. ಪಿ. ವಾಲಿ ಎಂ. ಎ. ಚೀಫ್‌ಆಫೀಸರ,
ಬೆಳಗಾಂವಿ — ೫ ೦ ೦

೯ ಶ್ರೀ ಮೋಹನರಾವ್ ಕರೀಕಟ್ಟಿ ಬಿ. ಎ.

ಸಬ್‌ರಸ್ಟ್ರಾರರು ಗದಗ ೫ ೦ ೦

೧೦ ,, ಮಲ್ಹಾರರಾವ ಭೀಮರಾವ ದೇಸಾಯಿ

ಹಳೇಹುಬ್ಬಳ್ಳಿ ೫ ೦ ೦

೧೧ ಡಾ. ಎಚ್. ಆರ್. ತಿರಗುಂಡಿ ಬೆಳಗಾಂವಿ ೫ ೦ ೦

೧೨ ಶ್ರೀ ಅಶ್ವಥರಾವ ಮುಷಿಷಿ ವಕೀಲರು, ಶಿರಹಟ್ಟಿ ೫ ೦ ೦

೧೩ ,, ಶ್ರೀಮಂತ ಸರದಾರ ಬಾಳಾಸಾಹೇಬ

ಭೀಮಪ್ಪ ಗಿರಿಯಪ್ಪ ದೇಸಾಯಿ, ಕೌಜಲಗಿ ೫ ೦ ೦

೧೪ ,, ಶ್ರೀಮಂತ ವೆಂಕಟಾದ್ರಿ ಶ್ರೀನಿವಾಸ ಒಡೆಯರ

ದೇಸಾಯಿ, ಸೊರಟೂರ ೫ ೦ ೦

೧೫ ,, ಗೋಕುಲದಾಸ ವಿಠ್ಠಲದಾಸ ವಾರಕರ

ವ್ಯಾಪಾರಸ್ಥರು ಗದಗ ೫ ೦ ೦

೧೬ ,, ವಲ್ಲಭದಾಸ ಪುಣೇಕರ ಸಾಹುಕಾರರು

ಗದಗ ಬೆಟಗೇರಿ ೫ ೦ ೦

೧೭ ,, ಎಲ್. ಜಿ. ವಿಜಾಪುರ ವ್ಯಾಪಾರಿಗಳು

ಬಾಗಿಲುಕೋಟೆ ೫ ೦ ೦

೧೮ ,, ರಾಘವೇಂದ್ರರಾವ ಮುನಸಬ್ದಾರ, ಹೈದ್ರಾಬಾದ ೫ ೦ ೦

೧೯ ,, ಕಲ್ಲಪ್ಪಾ ಸೋಮಪ್ಪಾ ಗುಂಜಾಳ ಧಾರವಾಡ ೫ ೦ ೦

೨೦ ,, ಸಿ. ಸಿ. ಅಬಕಾರ ವರ್ತಕರು, ಬನಹಟ್ಟಿ ೫ ೦ ೦

೨೧ ,, ಶ್ರೀನಿವಾಸರಾವ ಪೋತದಾರ ಆರ್ಟಿಸ್ಟ, ನಾಳಮುಡ್ಡಿ ೫ ೦ ೦



# ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಅರಳಿದ ಕುಸುಮಗಳು

ವರ್ಷದಲ್ಲಿ ೧೫೦ ಪುಟಗಳುಳ್ಳ ಆರು ಸರಸ ಗ್ರಂಥಗಳು

ವಾರ್ಷಿಕ ಚಂದಾ ಅ. ವೆ. ಸೇರಿ ೩–೮–೦ ಮಾತ್ರ

| | | | | | |
|---|---|---|---|---|---|
| * ೧ | ಸುದರ್ಶನ | ಕಾದಂಬರಿ | ೦ | ೧೨ | ೦ |
| * ೨ | ನವಿಲುಗರಿ | ಸಣ್ಣ ಕತೆಗಳು | ೦ | ೧೨ | ೦ |
| * ೩ | ತ್ರಿಪುರದಹನ | ವಿಚಾರಪ್ರಚೋದಕ | ೦ | ೧೨ | ೦ |
| * ೪ | ಬಾಳುರಿ | ಕಾದಂಬರಿ | ೦ | ೧೨ | ೦ |
| * ೫ | ಬ್ರಾಹ್ಮಣರ ಹುಡುಗಿ | ಕಾದಂಬರಿ | ೦ | ೧೨ | ೦ |
| *೬–೭ | ವಿಶ್ವಾಮಿತ್ರನ ಸೃಷ್ಟಿ ಭಾಗ ೧–೨ | ಕಾದಂಬರಿ | ೧ | ೧೨ | ೦ |
| * ೮ | ಜೀವನ | ಸಣ್ಣ ಕತೆಗಳು | ೦ | ೧೨ | ೦ |
| ೯ | ಕಾಳರಾತ್ರಿ | ಆಧ್ಯಾತ್ಮಿಕ ಕಾದಂಬರಿ | ೦ | ೧೨ | ೦ |
| ೧೦ | ಧರ್ಮಸೆರೆ | ಕಾದಂಬರಿ | ೦ | ೧೪ | ೦ |
| ೧೧ | ರಾಜಯೋಗಿ | ಕಾದಂಬರಿ | ೦ | ೧೪ | ೦ |
| ೧೨ | ಕೋಲ್ಮಿಂಚು | ಏಕಾಂಕನಾಟಕಗಳು | ೧ | ೦ | ೦ |
| ೧೩–೧೪ | ಇಜ್ಜೋಡು | ಕಾದಂಬರಿ | ೧ | ೮ | ೦ |
| ೧೫ | ಕುರಿಹಿಂಡು | ಸಚಿತ್ರ ವ್ಯಂಗ್ಯ ಕತೆಗಳು | ೧ | ೦ | ೦ |
| ೧೬ | ಧೂಮಕೇತು | ಕಾದಂಬರಿ | ೦ | ೧೪ | ೦ |
| ೧೭ | ಧರ್ಮಜ್ಯೋತಿ | ವಿಚಾರಪ್ರಚೋದಕ ನಾಟಕ | ೧ | ೪ | ೦ |
| ೧೮ | ಸೇವಾಪ್ರದೀಪ | ನಾಟಕ | ೦ | ೧೨ | ೦ |
| ೧೯ | ದಿಲ್ಲೀಶ್ವರನ ದಿನಚರಿ | ಚಾರಿತ್ರಿಕ | ೦ | ೧೨ | ೦ |
| ೨೦ | ಪುಷ್ಪಮಾಲೆ | ಸಣ್ಣ ಕತೆಗಳು | ೦ | ೧೨ | ೦ |

* ಈ ಗುರುತು ಹಾಕಿದ ಪುಸ್ತಕಗಳು ತೀರಿವೆ

| | | | |
|---|---|---|---|
| ೨೧ | ಸೋಲೋ ಗೆಲುವೋ | ಕತೆಗಳು | ೦ ೧೨ ೦ |
| ೨೨ | ಹಳ್ಳಿಯ ಸಮಾಜ | ಕಾದಂಬರಿ | ೦ ೧೪ ೦ |
| ೨೩ | ಪಾವನ-ಪಾವಕ | ಸ್ವಪ್ನದೃಶ್ಯಗಳು | ೦ ೮ ೦ |
| ೨೪ | ಸಮುದ್ರದಾಚೆಯಿಂದ (ಭಾಗ ೧) | ಪ್ರವಾಸಸಾಹಿತ್ಯ | ೧ ೦ ೦ |
| ೨೫ | ಸರಸಮ್ಮನ ಸಮಾಧಿ | ಕಾದಂಬರಿ | ೦ ೧೨ ೦ |
| ೨೬–೨೭ | ಎರಡು ಧ್ರುವ (ಭಾಗ ೧–೨) | ಕಾದಂಬರಿ | ೨ ೦ ೦ |
| ೨೮ | ಸಮುದ್ರದಾಚೆಯಿಂದ (ಭಾಗ ೨) | ಪ್ರವಾಸಸಾಹಿತ್ಯ | ೧ ೦ ೦ |
| ೨೯ | ಹುಚ್ಚು ಬೆಳದಿಂಗಳಿನ ಹೂಬಾಣಗಳು | ಸಚಿತ್ರ ಕತೆಗಳು | (ಅಚ್ಚಿನಲ್ಲಿ) |



## ಬಿಡಿಮುತ್ತುಗಳು

| | | | |
|---|---|---|---|
| ೧ | ಸಾಹಿತ್ಯ ಮತ್ತು ವಿಮರ್ಶೆ | ಶ್ರೀ. ದ. ರಾ. ಬೇಂದ್ರೆ ಎಂ. ಎ. | ೦ ೧೨ ೦ |
| ೨ | ಪಯಣ (ಕವನಸಂಗ್ರಹ) | ಪ್ರೊ. ವಿ. ಕೃ. ಗೋಕಾಕ ಎಂ. ಎ. | ೦ ೧೨ ೦ |
| ೩ | ತಿರುಪಾಣಿ (ಗೀತಪ್ರಧಾನ ನಾಟಕ) | ‘ಶ್ರೀನಿವಾಸ’ | ೦ ೮ ೦ |

# RECOMMENDED

*by*

# Department of Public Instruction

*(Government of Mysore)*

The following books of Manohara Grantha Prakashana Samiti, Dharwar are recommended for the libraries of schools noted against each :

| ಹೆಸರು | for the libraries of High-Dist-normal-Middle SCHOOL | | | and Training Colleges |
|---|---|---|---|---|
| ತ್ರಿಪುರದಹನ | ,, | ,, | ,, | — |
| ಬಾಳುದಿ | ,, | ,, | ,, | ,, |
| ಬ್ರಾಹ್ಮಣರ ಹುಡುಗಿ | ,, | — | — | — |
| ವಿಶ್ವಾಮಿತ್ರನ ಸೃಷ್ಟಿ | ,, | ,, | — | ,, |
| ಜೀವನ | ,, | ,, | ,, | ,, |
| ಕಾಳರಾತ್ರಿ | ,, | ,, | — | ,, |
| ಧರ್ಮಸೆರೆ | ,, | ,, | ,, | ,, |
| ರಾಜಯೋಗಿ | ,, | ,, | ,, | ,, |
| ಕೋಲ್ಮಿಂಚು | ,, | ,, | ,, | ,, |
| ಇಜ್ಜೋಡು | ,, | ,, | ,, | ,, |
| ಕುರಿಹಿಂಡು | — | ,, | — | ,, |
| ಧರ್ಮಜ್ಯೋತಿ | ,, | ,, | — | ,, |
| ದಿಲ್ಲೀಶ್ವರನ ದಿನಚರಿ | ,, | ,, | ,, | ,, |
| ಪುಷ್ಪಮಾಲೆ | ,, | ,, | ,, | ,, |
| ಸೋಲೋ ಗೆಲುವೋ | ,, | ,, | — | ,, |
| ಹಳ್ಳಿಯ ಸಮಾಜ | ,, | ,, | — | ,, |
| ಸಮುದ್ರದಾಚೆಯಿಂದ | ,, | ,, | ,, | ,, |
| ಸಾಹಿತ್ಯ ಮತ್ತು ವಿಮರ್ಶೆ | ,, | ,, | — | ,, |
| ಪಯಣ | ,, | ,, | — | ,, |
| ಶಿರುಪಾಣಿ | ,, | ,, | ,, | ,, |

## ಮುಂದಿನ ಕುಸುಮ

ಮನೋಹರ ಗ್ರಂಥಮಾಲೆಯ ೨೯ನೆಯ ಕುಸುಮ

# ಹುಚ್ಚು ಬೆಳದಿಂಗಳಿನ-
# ಹೂಬಾಣಗಳು

ಮನೋರಂಜಕ ಸಣ್ಣಕತೆಗಳ ಹಾಗು
ವ್ಯಂಗ್ಯ ಹಾಸ್ಯ ಪ್ರಬಂಧಗಳ
ಸಚಿತ್ರ ಸಂಗ್ರಹ

ಬರೆದವರು :

ಪ. ರಮಾನಂದ